೧. ರಾಮಾಶ್ವಮೇಧಂ.
೨. ಅದ್ಭುತರಾಮಾಯಣಂ.
೩. ಹರಿಬದೆಯ ಧರ್ಮಂ.

---



KARNATAKA

# Kabya Kalanidhi Series,

NO. 6.

# SRI RÁMÁSVAMÉDHAM.

BY

MUDDANA KAVI

ಮುದ್ದಣ ಕವಿ ಕೃತಂ

# ಶ್ರೀ ರಾಮಾಶ್ವಮೇಧಂ.



---

ಎಸ್. ಜಿ. ನರಸಿಂಹಾಚಾರ್

ಲೈಬ್ರೇರಿಯನ್ ಗಾರ್ನಮೆಂಟ್ ಓರಿಯಂಟಲ್ ಲೈಬ್ರರಿ ಮೈಸೂರ್,

ಮತ್ತು

ಮಂ. ಎ. ರಾಮಾನುಜೈಯಂಗಾರ್

ಅಸಿಸ್ಟೆಂಟ್ ಮಾಸ್ಟರ್ ವೆಸ್ಲಿಯನ್ ಮಿಷನ್ ಹೈಸ್ಕೂಲ್ ಮೈಸೂರ್,

ಇವರುಗಳಿಂದ ಶೋಧಿಸಲ್ಪಟ್ಟು

ಮೈಸೂರ್:

ಸ್ಟಾರ್ ಪ್ರೆಸ್ಸಿನಲ್ಲಿ ಮುದ್ರಿತವಾಯ್ತು.

1901.

# ಶ್ರೀ ರಾಮಾಶ್ವಮೇಧಂ.

॥ ಪ್ರಥಮಾಶ್ವಾಸಂ ॥

—:o:—

ಓವೊ! ಕಾಲಪುರುಷಂಗೆ ಗುಣಮಣಮಿಲ್ಲಂ ಗಡ! ನಿಸ್ತೇಜಂ ಗಡ! ಜಡಂ ಗಡ! ಬಡಲೊಳ್ ಗುಡುಗುಟ್ಟುಗುಂ ಗಡ! ಏನರಸನೆವಾಗಿಲಂ ಮುಗಿಲ್ದೆರೆಯಿಂ ಬಾಸಣಿಸಿರ್ಪರ್? ಆರ್ಗಂ ಪುಗಲಾಣತಿಯಿಲ್ಲದಿರ್ಕುಂ; ಮಡದಿ ಬಾನ್ನೀಱೆಯೊರ್ವಳ್ ಚಂಚಲದೃಷ್ಟಿಯಿನತ್ತಮಿತ್ತಂ ನೋೞ್ಪಳ್; ಮೂಲಿಗೆಮರ್ದಂ ಕೊಂಡುಯ್ವೊಡಕ್ಕುಂ. ಸಿಡಿಲಾಳ್ ತಡೆಯು ದೆಸೆಯ ನಡುವೆಟ್ಟುಗಳ್ಗೆ ಕಟ್ಟುಬ್ಬರದಿಂ ಬಂದೆಱಗುಗುಂ; ಕುತ್ತಮೇಂ? ಸುಗ್ಗಿಯೊಳುಂಡುದಂ ಕಾರೊಳ್ ಕಾಱುವನಕ್ಕುಂ; ಕಾಲಂ ಕಷ್ಟಂ! ಕಷ್ಟಂ!!

ಎಲೆಲೆ ಸೋಗೆನವಿಲೆ! ಏಂ ನಲಿವೈ! ನಿನಗಮಾತಂಗಮನಿತ್ತು ಪಗೆಯೇಂ? ಕಟ್ಟಾಸುರದ ಬೇಸಗೆಯೊಳೋಸರಿಸದೆ ಗಾಸಿಗೈದನೆನುತೆಯೆ? ಛೀ! ಛೀ! ಪೆಱವರ ಕಿಡುದೆಸೆಯೊಳ್ ಕಡುಸಂತಸಕ್ಕೆಡೆಗುಡದಿರ್. ಪೋ ಪೋ! ಸೊರ್ಕನುೞಿದು ನಿನ್ನಿರ್ಕೆಗೆ. ಏನೆನ್ನ ನುಡಿಯುಂ ಕಡೆಗಣ್ಚಿ ಮತ್ತಂ ಮತ್ತಂ ಮುತ್ತ ಪೊಱ್ತನಂತೆ ಮೈವೆರ್ಚುರ್ವೈ. ಇದರ್ಕೆಯೆ ನಿನಗಿಂತು ವಿಜಾತಿಯೊಳಮಧೋಗತಿಯೊದವಿತ್ತು.

ಬಾಯ್ವಿಡದಿರೆಲೆ ಚಾದಗೆಯೆ! ತಿರೆಯೊಳ್ ಪೆಱರ ಸಿರ್ಕಿನೊಳ್ ಮುಱುಕಮುಳ್ಳರೊಳ್ ನಿನ್ನನ್ನರೊಳರೇ? ನಿರ್ನೆರಮುಱಲದಿರ್. ಆಮೆಯಾದೊಡಮೇವರ್? ಕರ್ಮಪುರುಷಂಗೆ ಸೊರ್ಕುಂ ಸಿರ್ಕುಮೊಂದಿರ್ಕಣ್ಣಲ್ತೆ! ಅತ್ತ ಪೋಗಲ್ವೇೞ್ಕುಮೆಂಬೆಯೇಂ? "ಗಗನಮುಖಂ ದುಷ್ಪ್ರವೇಶ್ಯಂ" ಎಂದು ಡಂಗುರಮಿರ್ಕುಂ; ಅದಱಿನೀಗಳ್ ಪೋಪುದು ಪದನಲ್ತು. ತನ್ನಾಣೆ! ಕತಿಪಯದಿನಂಗಳೊಳ್ ಎಱೆಯಂಗೆ ಕ್ಷೇಮಮಕ್ಕುಂ ದಿಟಮೆಂದು ಗ್ರಹಗತಿಯನಾರೈದ ಜೋಯಿಸರೆಂದರ್. ಅದಱಿಂದೆರ್ದೆ*ಗಿಡದೆ ನಿನ್ನೆಡೆಗೆ ಪೋಗು. ಪಯಣಂ ಸೊಗಮಕ್ಕೆ.

ಬಗ್ಗಿಸಿಲೆ ಕೋಗಿಲೆ! ಏನೀಮಾಮರದ ಸೆಳಗೊಂಬಿನೊಳ್ ಮೂಗುವಟ್ಟಿರ್ಪಯ್? ಕಣ್ಮರಲ್ ಕೆಂಪಾದುವೇಕೆ? ಏತರ್ಕೆ ಬೆಱಗುವಡುವಯ್? ಅರೆನುಡಿಯೊಳೆಂಬುದೇಂ? ತಳಿರಿಲ್ಲಮೆಂಬೆಯು? ಅಲ್ತು; ಕಾಲಪುರುಷಂ ಜಡಭರಿತನೆಂಬೆಯು? ಅಂತವನಾರೊರೆದರ್? ಇಂತಿವನಱಿತುಂ ಸೋಂಬನಾಗಿರ್ಪುದೊಳ್ಳಿತೆ? ಆರಯ್ವುದಾರಯ್ವುದೀಪರಿಯಂ. ನಡೆನಡೆ.

ಇತ್ತಲಿದೆಕೊಳ್ ತಾಮ್ರತುಂಡನೇನನೋ ಗೊಣಗುತಿರ್ಕುಂ, ಕೇಳ್ವೆಂ. ಪಂಡಿತವಕ್ಕೀ! ನಿನಗೀಪೆಸರನಾರಿಟ್ಟರ್? ಬಸಂತನೇಂ? ನೀಂ ಪಂಡಿತಂ ದಿಟಮಾದೊಡೆ ನೀಂಗುರ್ತಕ್ಕೆ ಪರ್ದನುಸಿರ್. ಏಂ ಮಾಂಬಟಿಂ ನೇಱಿರ್? ಮಾನುಡಿಸುದೇತರ್ಕೆ ವಿಮುಖನಾದೈ? ಸೊರ್ಕಿನುರ್ಕಿಂ ಬೀಗಿರ್ಪಯ್. ಇರ್ಕೆ: ಕೂರಿದರೊಳ್ ಕೂರದೆ ತಕ್ಕರೊಳ್ ತಗದೆ ನುಡಿಸಿದರೊಳ್ ನುಡಿಯದಿರ್ಪ ಕತದಿಂ ನಿನಗೆ ವನವಾಸಂ ಪ್ರಾಪ್ತಮಕ್ಕೆ! ಲೋಗರ ಕೈಗೆ ಸಿಲ್ಕಲೊಡಮೊಡನೆಯೆ ನಿನಗೆ ಬಂಧನಮಕ್ಕೆ! ಅಂತು ಪಂಜರನೊಳಾನುಂ ಮಂಜರನೊಳಾನುಂ ಸಾವಕ್ಕೆ! ಇದೆನ್ನ ಸಾಪಂ. ನಿನಗಮೀ ಪೊಳ್ತುಬೇರನುನಿತ್ತ ಬಸಂತಂಗಂ ಧಿಕ್ಕಾರಂ!

ಈಗಡೆ ಉಲಿಗಂ ಸಗುಣನುಡಿಗುಂ. ಬಂದು, ಎರಬಿಸ್ಮಾಱು. ಭದ್ರಂ, ಶುಭಂ, ಮಂಗಳಂ. ಹೀಹೀ! ನೋವು ಮಾಯ್ವುದು; ಸಂಪೆಯುಮಣಮಿಲ್ಲಂ.

ವಾರಗೇಱಿಯೊಳೀಱುಂಜಾಪನದ ನೀಱೆಯರ ಮೇಲುದಱ ಸೆಱಂಗನೋಸರಿಸಿ ಸಾರೆ ನಿಲ್ತು ತೋರಮೊಲೆಗಳಂ ಸೇರ್ದು ಪಿಡಿದಾಂಕಿ ಪಾಱುಂಬೊಜಗನಂತೆ ಮೀಱಿ ನಿಟಿಲ್ಲಾಟಂಗೊಂಡು ತೊಟ್ಟನೆ ಕಟ್ಟಿದಿರೊಳಟ್ಟಣಿಸಿ ಗಟ್ಟಿವಂಗುಪ್ಪುವ ಗಟ್ಟಸಳ್ತಿಯರ ಪಟ್ಟುಡೆಯೊಳ್ ಕಟ್ಟುವಡೆದುಂ, ಕೈಯೆಡೆಯೊಳ್ ಮೆಯ್ಯುಗಿದುಂ, ಕಂದಿನೊಳ್ ಕಂದಿಯುಂ, ಆಸವದೊಳಸಕಳಿದುಂ, ಸುಯ್ಯೊಳ್ ಸುಗಿದುಂ, ಸಿರಿಕಂಡದ ಕೋಲ್ಕೆಸಱೊಳ್ ಕಾಲ್ಕಿಸಿದುಂ, ಪಾಱುಗೆಯ್ಕೆ ಬಂದಿವಟ್ಟುಪಂತುಮಿಂತುಂ ಮುಂತೆ ಸರಿದು ಮಾಲೆಗಾರ್ತಿಯರ ಮೆಲ್ಗೈಗಳೊಳ್ ಸಾಲ್ಗೊಂಡು ನೇಲ್ವ ಮಾಲೆದೊಡಂಬೆಯುಂ ತೂಗಿ, ಲತಾಂಗಮಂ ತಾಗಿ, ಬೀಗಿ, ದಕ್ಷಿಣಾನಿಲನಂತಿರೆ ಪಶ್ಚಿಮಾನಿಲಂ

ಮ್ಮೈದೋಱಲೊಡಂ— ಮೊಲ್ಲೆ ಮುಗುಳ್ತುದು; ವನಮಲ್ಲಿಗೆ ಗಂಟೊಸೆದುದು; ನಾಗವಲ್ಲಿ ಬೆಳ್ಸಱಿವಿಟ್ಟುದು; ಗಱಿವೊ ಗಱಿಗಟ್ಟಿದತ್ತು. ಆಗಳ್—

ಪಡುಗಡೆಯೊಳಿದೇಂ ಪೋಗೆ! ಕಡಲೊಡಲ ವಡಬಂ ಬಿಡದೆ ತೀಡುವ ಬಿಱುಗಾಳಿಯ ತೀಬದಿಂ ದಳ್ಳಿಸಲೊಡಮೊಡೆಗೊಂಡ ಬೆಟ್ಟುಗಳ್ ಕರಂ ಸೀಕರಿವೋಗೆ ಪುಟ್ಟಿತಕ್ಕುಂ. ಓ! ತಪ್ಪಿದೆಂ. ಅಲ್ತು, ಪೋಗೆಯಲ್ತು; ಎನಗಂ ಬೆರ್ಚು; ನೀರೊಳ್ ಕಿರ್ಚು ಪೊರ್ಚುಗುಮೇ? ಮತ್ತಮೇಂ? ಅಂದು ಸೆರಗಂ ಪೊರ್ದು ಕಡಲಂ ಮಱೆಗೊಂಡ ಕರ್ವೆಟ್ಟುಗಳೀಗಳ್ ಪೂರ್ವವೈರಮಂ ಬಗೆದು ಬರ್ದಿಲನಾಡಿಂಗೆ ದಾೞಿಡಲ್ಕೆ ದಂಡೆತ್ತಿ ಪೋಪುವಕ್ಕುಂ, ಎನೆ ಕರ್ಮುಗಿಲಾಗಸಮುಂ ಮುಸುಂಕೆ ಕಾಲನೆಂಬ ಕಾಳರಕ್ಕಸಂ ಪೊದೆದ ನೀಲಪಟದೊಂದು ಪೊಂಗಿನೊಳೊಪ್ಪಿದುದು; ಗೆಂಟುಗೆಂಟಿನೊಳ್ ಪೊಳೆವ ಬಳ್ಳಿಮಿಂಚು ಬೀಸುವ ಕೈಗೇಣ ಮೈಸಿರಿಯಂತೆ ಕಣ್ಗೆಡ್ಡವಾದುದು.

ಸಗ್ಗಿಗರಾಣ್ಮನ ಘನಕರಿಘಟೆಗಳ್ ಬೇಸಗೆಯ ಬಿಸರಕ್ಕೆ ಬಸವೞಿದು, ಬಾಯಾಱಿ, ಮುನ್ನೀರ ನೀರಂ ಕಂಡು, ಪಿಂಡುಗೊಂಡು ಬಂದು ನಿಂದು, ಮನಂ ದಣಿವನ್ನಮೋಲಾಡಿ, ಪೊಡೆ ಕೋಡುವನ್ನಂ ಬರೆ ಪೀರ್ದು, ಸೊರ್ಕಿ ಪೋಪಡೆಯೊಳ್ ಮೈವಿಟ್ಟು, ಗೀಱಿಟ್ಟು, ಪಟ್ಟುವೆರ್ಚಿ ನಿಮಿರ್ದ ನಿಡುವಲ್ ಬೆಳಗೆ, ತುಂಬಿಕೆಯೊಳಿಂಬುಗೊಂಡ ತುಂಬುನೀರಂ ಫೂತ್ಕರಿಸಿದಪ್ಪುವೆಂಬಂತಿರೆ ಎಡೆವಿಡದೆ ಬಲ್ಸರಿ ಸುರಿಯೆ ಮೞೆಗಾಲಂ ಚೆಲ್ವಾಯ್ತು.

ಇಂತು ಮುಂಗಾರ್ ತಲೆದೋಱೆ ತಿರೆವೆಣ್ಗೆ ಮುಗಿಲ್ಸೊಂದಿಯೊಳ್ ಬಳ್ಳಿವರಿವ ನೇಹದಿಂ ಬೆಳ್ಳಂಗೆಡೆವ ಸೊಗದಾಲಿನೀರೆನೆ ಪೊಚ್ಚಂ ಪೆರ್ಚಿ ಪರಿದುದು; ಬಗೆಮಿಗೆ ಸೋಲ್ವುದುಮೊಂದುಗೂಡಲ್ಕೆಂದು ಬಂದು ನೋೞ್ಪೆಡೆಯೊಳ್ ಪಸದನಂಗೊಂಡಂತಿರೆ ಬಳ್ಳಿವೊದರ್ಮಡಲ್ತು ಸೊಂಪೇಱಿದುದು; ಮೇಣ್ ಪೊಸಸುಸಿಲೊಳ್ ಸಸಿಬಿಟ್ಟು ನಿಮಿರ್ನವಿರೆನೆ ಪಸಲೆಯೆಸೆದುದು.

ಇದೆ! ಗುಡುಗುಡಿಪ ಮೊೞಗಂ ಕಡುಕಾಯ್ಪೇಱಿದ ಸಿಂಗದ ದನಿಗೆತ್ತು ಬಿಗುರ್ತೋಡಿ ಕರ್ಮಡುವಿನ ತಡಂಗುಂಡಿಯೊಳಡಂಗುವುವೆನೆ ಆೞಾಟಕೆಂದು ಯೂಥನಾಥಂ ಮುಂದಿರೆ, ಕಳಭಂ ಬೞಿವರೆ, ಪಿಡಿಯೆಡೆಯೊಳಿರೆ ಒಡಗೂಡಿ ನಡೆದು ಸೀದಾರ್ಣವಮಂ ಪುಗುವಾನೆವಿಂಡಿನಿಂದೆಯುಂ,

ಪಚ್ಚನೆ ಬೆಳೆದ ಪಸಲೆಯು ಪಸುರ್ವುಲ್ಲಂ ಪಸಿವಡಂಗೆ ಮೇದು, ಕೊಬ್ಬಿ, ಕೆಲೆದು, ಕಣ್ಮಲೆದು, ಮುಂಗಾಲಿಂ ನೆಲನಂ ಬೆರಂಟುತುಬ್ಬಿ, ಪೆಸರ್ಗೆರನಂ ಕಂಡು ಪಾಯ್ದು, ಕೋಡಿಱಿದು ಬೞಲ್ದು, ಎರ್ಮೆಯೆಡೆಗೊಳೆ ತಾನುಂ ಪಟ್ಟು, ಮೆಲ್ಕುತ್ತುತಿರ್ಪ ಜವಹುರದ ಜಕ್ಕಂದೊೞಲಿಯುಂ ಗೆಲೆವರ್ಪ ಕಾೞ್ಕೋಣವಳಗದಿಂದೆಯುಂ; ಬೀಸುವಿಱಿಸಲಂ ಸೂಸುವ ಸೋನೆಯುಂ ಸೈರಿಸದೆ ಪಕ್ಕೆಯೊಳೆ ಪಟ್ಟು, ಕಣಸಂ ಲಲ್ಲೆಗೈದು, ಪರಿವ ಕಾೞ್ಪುರದ ಕಳಕಳಮನಾಲಿಸುತಿರೆ—ಬಱಸಿಡಿಲ ಬಿಱುಸರವಮುಂ ಕೇಳ್ದು ಕೊಡಕೆ ನಿಮಿರೆ ನವಿರ್ಕೆರ್ಕ್ಕರಿಸೆ ತಳನೋರ್ಟದಿಂ ನೋೞ್ಪ ಹರಿಣಸಂದೋಹದಿಂದೆಯುಂ; ಜಿಡಿಗೆ ಕಡುಸುಗಿದು ತಾಂ ಪೊಱಮಡದೆ ಕುಟುಂಕಂ ತರಲ್ಕೆ ಕೆಳೆಯನನಟ್ಟೆ ಕುಳಿರ್ವೆಲರ ಕೋಡಿಂಗೆ ನಡುಗುವ ಕಿಱುವಱಿಯನೆಱಂಕೆಯೊಳ್ ಪುದುಗಿ ಗೂಡಿನ ಮೊಗವಾಡದೊಳಿರೆಯಿರೆ—ಬಳ್ಳಿವರಿವ ಮಿಂಚಂ ಕಂಡು ತಳ್ಳಂಕಂಗೊಂಡು ಕೀಱಿ ಮೈಗರೆದು ಜೋಡಿಗನ ಬರವನೆ ಪಾರ್ವ ಪೆಣ್ಬಕ್ಕಿಗಳ ತಂಡದಿಂದೆಯುಂ; ವನಾಂತರಂ ಮನೋಹರಮಾದುದು.

ಈತೆಱದೆ ಕಾಡುಂ ನಾಡುಂ ಮನೋಜ್ಞಮಾಗೆ ಸಂಪ್ರಾಪ್ತಮಾದ ವರ್ಷಾಕಾಲದೊಳೊಂದು ದಿವಸಂ ಬೈಗುಂಬೊೞ್ತಿನೊಳೆಂದಿನಂತಿರೋಲಗಂ ಪರಿಯೆ ಕಬ್ಬಿಗರ ಬಲ್ಲಹಂ ಮುದ್ಗಣನರಮನೆಯಿಂ ಪೊಱಮಟ್ಟು ನೆರೆವೀದಿವಿಡಿದು ಪೊರೆವೀಡಿಂಗೈತರ್ಪುದುಮಾತನ ಮಡದಿ ಮನೋರಮೆ ದೂರದೆ ಕಂಡೆೞ್ದು ಇದಿರ್ವಂದು ಕಾಲ್ಗೆ ನೀರಂ ನೀಡಿ ಮತ್ತಂ ಕೈವಿಡಿದೊಳಚೌಕಿಗೆಗುಯ್ದು ಮಣೆಯಿತ್ತು ಕುಳ್ಳಿರಿಸಿ ಬಡನೆಯೆ ತನಿವಣ್ಣಂ ತಿನಲಿತ್ತು ಕೆನೆವಾಲಂ ಕುಡಿವೊಡಿತ್ತು ಉಪಚರಿಸುತಿರ್ದಳ್. ಈವುಪಚಾರದಿನಾತನ ಪಸಿವುಂ ಬೞಲ್ಕೆಯುಂ ಮುಡಿಯೆ ಕೆಳದಿ ನಱುದಂಬುಲನುಂ ಸವಿಯಲ್ಕಂ ಮ ಮಡಿದೀಯುತುಮಿರೆ ಇಂತು ಸುಖಸಲ್ಲಾಪಂಗೊಳುತಿರ್ದರ್.

ಅದೆಂತೆನೆ:—

ಮನೋರಮೆ- (ಮೆಲ್ನುಡಿಯಿಂ) ನೋೞ್ಪುದೀಪಗಲ್ಗಳೆಂತೊ ಪಿರಿಯವು.
ಪಗಲುಮಿರುಳುಂ ಸುರಿವ ಬಲ್ಸೋನೆಯ ಜಿನುಂಗಿನತ್ತಣಿನೆನ್ನ ಬಗೆಯುಂ ಬೇಸತ್ತುದು. ಅಂತದಱಿನೇನಾನುಮೊಂದು ನಲ್ಗತೆಯಂ ಪೇೞಿ!

ಮುದ್ದಣಂ— ಪ್ರಾಣೇಶ್ವರೀ! ತಡೆಯೇಂ! ಇನಿತೊಂದು ಬಯಕೆ ತಲೆದೋಱೆ ಆವ ಗಹನಂ? ಆದೊಡಮಾವ ನಲ್ಗತೆಯಂ ಪೇೞ್ವೆಂ. ಏಂ ಭೋಜಪ್ರಬಂಧಂ? ವಿಕ್ರಮವಿಜಯಂ? ಮಹಾವೀರಚರಿತಂ?

ಮನೋರಮೆ— ಇಸ್ಸಿ! ಇವರೊಳೆನಗೞ್ಕಱಿಲ್ಲಂ; ಉಱಿದೊಡಮುಱದೊಡಂ ಬಟ್ಟೆದೋಱುವ ರಸಭರಿತಂ ಚರಿತಮೈಸೆ.

ಮುದ್ದಣಂ— ನಿನಗಾವ ರಸದೊಳಿಷ್ಟಂ? ಶೃಂಗಾರರಸದೊಳೇ? ವೀರರಸದೊಳೇ? ಹಾಸ್ಯರಸದೊಳೇ?

ಮನೋರಮೆ— ಆವ ರಸದೊಳೆಂದೊಡೇಂ? ನವರಸದೊಳಂ.

ಮುದ್ದಣಂ— ಅಂತಿರೆ ಮತ್ತಮಾಕತೆಯಾವುದು?

ಮನೋರಮೆ— ರಾಮಾಯಣದೊಳೇನಾನುಮೊಂದು.

ಮುದ್ದಣಂ— ಅಂತೆಯೆ ಅಕ್ಕೆ. ಸೀತಾಸ್ವಯಂವರಮಂ ಪೇೞ್ವೆಂ.

ಮನೋರಮೆ— ಆಂ ಮುನ್ನಮೆ ಕೇಳ್ದಿರ್ದೆನಲ್ತೆ.

ಮುದ್ದಣಂ— ಏಂ ಸೀತಾಪಹರಣಕಥನದೊಳ್ ಬಯಕೆಯೆ!

ಮನೋರಮೆ— ಉಃ! ಆನೊಲ್ಲೆಂ.

ಮುದ್ದಣಂ— ಮೇಣಾವ ನಲ್ಗತೆಯಂ ಪೇೞ್ವೆನೋ.

ಮನೋರಮೆ— ಇಂತೇಕುಸಿರ್ದಯ್, ನಾಡೊಳೆನಿತೊ ರಾಮಾಯಣಂಗಳೊಳವು. ನೀಂ ಕೇಳ್ದುದಱೊಳೊಂದಂ ನಲ್ಮೆದೋಱೆ ಕಂಡು ಪೇೞ್ವುದು.

ಮುದ್ದಣಂ— ನೀನೆ ಬಂದನಾಯ್ದು ಕೊಳ್ವುದು.

ಮನೋರಮೆ— ಶ್ರೀರಾಮಂ ಅಶ್ವಮೇಧಮಂ ಕೈಕೊಂಡನೆಂಬರಲ್ತೆ; ಆಕತೆಯೆ ಅಕ್ಕುಂ.

ಮುದ್ದಣಂ— ಈಗಳಱಿತೆಂ; ಶೇಷರಾಮಾಯಣಮಂ ಪೇೞ್ವುದೆಂಬೆಯ?

ಮನೋರಮೆ— ಅಪ್ಪುದಪ್ಪುದು. ಆದೊಡೆ ಮುನ್ನಮಾರಾರ್ಗೆದನೊರೆದರ್?

ಮುದ್ದಣಂ— ಮುನ್ನಂ ಶೇಷಂ ವಾತ್ಸ್ಯಾಯನಂಗೆ ಪೇೞ್ದನವನೆಯೆ ನಿನಗೆ ಚಿತ್ತರಿಪೆಂ. ಆದೊಡೆ ಬಲ್ಗತೆ ಕಣಾ! ಬಂದೆರಡ್ದಿವಸಕ್ಕೆ ಮುಗಿಯದು.

ಮನೋರಮೆ— ಅಕ್ಕೆ. ಓರೊಂದು ದಿವಸಮಿನಿಸಿನಿಸಂ ಪೇೞ್ದೊಡೇಂ?

ಮುದ್ದಣಂ— ಅಕ್ಕುಂ. ಆವ ಧಾಟಿಯೊಳ್ ಪೇೞ್ವೆಂ; ಪದ್ಯದೊಳ್ ಪೇೞ್ವೆನೊ? ಗದ್ಯದೊಳ್ ಪೇೞ್ವೆನೊ?

ಮನೋರಮೆ— ಪದ್ಯಂ ವದ್ಯಂ; ಗದ್ಯಂ ಹೃದ್ಯಂ. ಹೃದ್ಯಮಪ್ಪ ಗದ್ಯದೊಳೆ ಪೇೞ್ವುದು.

ಮುದ್ದಣಂ— (ನಸುನಗೆಯಿಂ) ಅವಂತಿರ್ಕೆ. ಇಂತಪ್ಪ ನಲ್ಗತೆಯಂ ಬಿತ್ತರಿಸಿದೊಡೆ ಅರಮನೆಯೊಳ್ ರನ್ನಗಡಗಮುಂ ಪೊನ್ನಕಂಠಿಕೆಯುಂ ಮೆಚ್ಚನೀವರ್. ನೀನೀವುದೇಂ?

ಮನೋರಮೆ— ಪಿರಿತೇಂ. ಎನ್ನನೆ ನಾನೀವೆಂ.

ಮುದ್ದಣಂ— ಬಲ್ಲಡುಸುಗಾರ್ತಿಯಪ್ಪೆ! ಆಯಿಯಾ ಮುನ್ನಮೆ ನಿನ್ನ ತಾಯ್ತಂದೆವಿರೆನಗಿತ್ತರೆಂಬುದಂ?

ಮನೋರಮೆ— ಇದೇತರ ನುಡಿ! ಪ್ರೇಕೆ. ಆಂ ಪರಾಧೀನೆ ಗಡ! ಸ್ವರಾಣ ಮನೋದಿದಿಂ ಬೞಿಯಮುತ್ತೆ ನಿನ್ನಾಸೆಯನೀವುದು. ಆರಮನೆಯರುಂ ಕಬ್ಬಮಂ ಕಂಡಲ್ಲಿ ಕಬ್ಬಿಗನುಸಿತ್ತರ್. ಆನುಂ ಕತೆಯಂ ಕೇಳ್ದು ಸೊಗಸಾಗೆ ಬಲ್ಲಂತೆ ಸನ್ಮಾನಿಸುವೆಂ.

ಮುದ್ದಣಂ— ಒಳ್ಳಿತೊಳ್ಳಿತು! ಕತೆಯನಾಲಿಸಿ ಬೞಿಕ್ಕಮೀಯೆನೆಂದೊಡೆ ಬಿಡೆಂ ನೋೞ್ಪೆಂ.

ಮನೋರಮೆ— ಆನುಂ ನೋೞ್ಪೆಂ ಕತೆಯ ಪ್ರಾರಂಭಿಕರ್ಮಮಂ.

ಮುದ್ದಣಂ— ಅವಧಾರಿಸು. ಸ್ವಸ್ತಿ ಶ್ರೀಮತ್ಸುರಾಸುರೇಂದ್ರನರೇಂದ್ರ ಮುನೀಂದ್ರಫಣೀಂದ್ರಮಣಿಮುಕುಟತಟಘಟಿತ—

ಮನೋರಮೆ— ಟಟ! ತಱಿ! ತಱಿ! ವಸುಧೆಗೊಡೆಯನಪ್ಪ ರಾಮಚಂದ್ರನ ಕತೆಯಂ ಪೇೞ್ವನೆ ಬಸದಿಗೊಡೆಯರಪ್ಪ ಸುರೇಂದ್ರರ ಚರಿತೆಯಂ ಪೇೞ್ವುದೇಂ? ಸಾಲ್ಗುಂ ಸಾಲ್ಗುಂ. ಇಂತೆರ್ದೆಗೊಳ್ವ ಕತೆಗೆಂತುಡುಗೊಱೆಯಂ ಗೆಯ್ವೆನೋ!

ಮುದ್ದಣಂ— ನಲ್ನುಡಿಯಿಮು ರಮಣೀ! ಕೞಕಂಗಳಾಗೆ. ಅಲ್ತು ಬಸದಿಯಿಂದ್ರರ ಕತೆಯಲ್ತು; ರಾಮಚಂದ್ರನ ಕತೆಯನೆ ಪೊಗೞ್ದು ಪೇೞ್ವುದು ಸಕ್ಕದದೊಂದು ಚೆಲ್ವು.

ಗಳಂ, ಬಾಂಗೆ ಭಾನು, ಪುಟ್ಟಿದಂತಿರೆ ದಶರಥಂಪುಟ್ಟಿ, ಪೞ ಪೇರ್ದ ಬೞಯುಱಿಂ ಕಳೆಗುಂದದ ತೋಳ್ಕರಂ ತನ್ನೊಳಾಗೆ ಪೆಱನುಡಿಯುಂ ಬೞಸಂದು ಪಲವುಂ ಪಗಲ್ ತಿರೆಯುಂ ಪೊರೆಯುತೆ ಬೞಯುಂ ಯಶಶ್ಶೇಷನಪ್ಪಿನಂ ಆತಂಗೆ ನೆರವಾಂತ ನಾಲ್ಕುಮುಪಾಯದಂತೆ ನಾಲ್ಕುಂ ಪುರುಷಾರ್ಥದಂತೆ ಮೆಯ್ಗೊಂಡು ಪುಟ್ಟಿದ ನಾಲ್ವರ್ ಕುವರರೊಳ್ ಪಿರಿಯಂ ರಾಮಂಗೆ ಪಟ್ಟಾಭಿಷೇಕಮಾಯ್ತು.

ತಾಳ್ಮೆಯೊಳ್ ತಿರೆಯಂತಿರೆ, ಜಾಣ್ಮೆಯೊಳ್ ಗುರುವಿಂಗೊರೆ, ಭೋಗದೊಳ್ ಸುರೇಂದ್ರಂ, ತ್ಯಾಗದೊಳ್ ನರೇಂದ್ರಂ, ಬೀರದೊಳ್ ಭೈರವಂ, ಸಾರದೊಳಗಾರವಂ, ಬೆಂಗದಿರನ ಕಾಯ್ಪು, ತಣ್ಗದಿರನ ತಣ್ಪು, ಸಿಂಗದ ಚಲಂ, ಮಾತಂಗದ ಬಲಂ, ಸಿಡಿಲ ಪೊಡೆಪುರ್, ಕಡಲ ಗುಣ್ಪು, ಪಡಿಗೊಳೆ ದಶರಥಕುಮಾರಂ ರಾಜ್ಯಮನಾಳುತಿರ್ದಂ.

ಆತನಾಳ್ವ ನಾಡು ಕೈಲಾಸಮಲ್ಲದೊಡಂ ಸರ್ವಮಂಗಳಾಶ್ರಯಂ; ವೈಕುಂಠಮಲ್ಲದೊಡಂ ಲಕ್ಷ್ಮೀಮನೋಹರಂ; ಸತ್ಯಲೋಕಮಲ್ಲದೊಡಂ ಸರಸ್ವತೀವಿಲಾಸಾಸ್ಪದಂ; ನಾಡಿಗರೊಳೆಲ್ಲರುಂ ಭೋಗಿಗಳ್ ಕುಟಿಲಗಾಮಿಗಳಲ್ತು; ಜೈವಾತೃಕರ್ ದೋಷಾಕರರಲ್ತು; ಪುರಸ್ಕೃತರಭಿಪನ್ನರಲ್ತು. ಅಂತುಮಲ್ಲದೆಯುಂ ಅಱಗಬ್ಬಂ ಬೆಳ್ಳಕ್ಕಿಗರೊಳ್, ಪೞಗಜ್ಜಂ ಪಟ್ಟಸಾಲಿಗರೊಳ್, ಇಱನೇಹಂ ತಾಣದೀವಿಗೆಯೊಳ್, ಕೀಲ್ಗೆಮೆ ಕಮ್ಮಱರೊಳ್, ದುರ್ಮತಿ ವತ್ಸರದೊಳ್, ಸುತ್ತೇಂ, ಅತಿಪಾತಂ ಮಧುಪಾನವ್ಯಸನದೊಳ್, ಮಧುಪಾನವ್ಯಸನಮಾಱಡಿಯೊಳ್, ಆಱಡಿ ಪಾದರಿಯೊಳ್, ಪಾದರಿ ಬನದೊಳಲ್ಲದಿಲ್ಲಂ. ಮನೋಹರೆ! ಮನೋರಮೆ! ಇರ್ಚಾಸಿರನಾಲಗೆಯಿರ್ದುಮೀ ರಾಮರಾಜ್ಯಮಂ ಸೇಸಂ ಬಣ್ಣಿಸಲಾರ್ತನಿಲ್ಲಂ; ಇಂತಿರೆ ಗಾಂಪಂ ಕಾಲುರಿಚನೆನಗೊಳವೆ!

ನೋಡ! ನಾಡ ಬೞವಿಡಿದು ಪುಣ್ಯವಾಹಿನಿಯೆನೆ ಬಳ್ಕುವ ಸರಯೂನದಿಯುಂ ತಾಂ ಕಿನ್ನೆಲೆಯೊಳುಮಂ ಲೋಗರ್ಗೆ ಮೇಲಂ ಬಯಸುವಳಲಾ! ಗಂಭೀರೆಯಾಗಿರ್ದೊಡಂ ನಿರ್ಮಲೆಯಾಗಿರ್ಪಿನಮಂತರಂಗಂ ಪೆಱರ್ಗೆ ಕಾಣಲ್ಕಕ್ಕುಂ; ನಲ್ವೆಂಡಿರಂತಿರೆ ಮಂದಗಾಮಿನಿ ಗಡ! ತಪ್ಪೇಂ, ನಿಕ್ಕುವಂ ಪೆಣ್ಣಿವಳ್. ಸರಸಕಮಲಮೆ ಮೊಗಂ; ಮೀನೆ ಕಣ್; ಪಾವಸೆ ಬಿಡುಮುಡಿ;

ಪುಱಿವಕ್ಕಿ ಬಲ್ಕೊರಲೆ; ಸುೞಿ ಪೂರ್ಕುರ್ಟೆ; ಮಳಲೊಕ್ಕಿಲ್ ಪೂಜಿವಾಜ್; ಕಾಲ್ ಕಾಲ್. ಏಂ ತುತೆತನಿದು ಪೋಪಳ್? ಕಳಕಳನಾದಂಗೆಯ್ವಳ್? ಓ! ತಾಯ್ವನೆಯಿನಾಣ್ಮನೆಡೆಗೆ ಪೋಪಳಕ್ಕುಂ.

ನೋಟ್ಟುದು ನೋಟ್ಟುದಿತ್ತಲ್ ಪುೞ್ಚಿದೊತ್ತಿನೊಳ್ ಪೆರ್ಚಿ ಬೆಳೆದ ತೋಂಟಂಗಳಂದಮುಂ. ಪರೋಪಕಾರಾರ್ಥಂ ಫಲಂಗಳಂ ಪೊತ್ತು ಫಲಭಾರದಿಂ ಬಾಗಿ ಕೈಕೊಳ್ವುದೆಂದೆಮಗೀಯಲ್ ನೀಡುಂ ನೀಡಿ ನಿಲ್ತಿರ್ಪುವು ಮರಂಗಳ್. ಎಳವಾಳೆಗಳುಮ್ಮಂ ಕೈವೀಸಿಯಿಂ ಬೀಸಿ ಕರೆದಪುವು. ಇಂತೇಂ ರಸವಾಳೆಯು ಪೆರ್ಗೊನೆಗೆ ಕೆತ್ತಗಸೂಯ್ತು? ದುಮ್ಮಾನಂ ಗಡ! ಪೆತ್ತಬ್ಬೆಗೆ ತಮ್ಮತ್ತಣಿಸಬಾರದೆಂದು ನಾಣ್ಚಿ ತಲೆವಾಗಿರ್ಪುದಕ್ಕುಂ.

ಇದೆಕೊಳ್! ಕಾಲ್ವೆ ನೀರೆಂದು ಪೆಂಗಳಸದೊಳ್ ಪನಿನೀರಂ ತುಂಬಿ ಬಿಜಯಂಗೆಯ್ತಿ ಪಿಡಿದು ಇನ್ನೈದರಂ ನೀರೆಱೆದು ಪೂರೆದ ಮೇಘರಾಜನ ಬರವನೆ ಪಾರ್ವ ಚೆಂದೆಂಗುಗಳ ಪಂತಿಗಳ್. ಪಕ್ಕಿಯ ಕೆಂಬವಳದ ಲಂಬಣದಿಂ ಸಿಂಗರಿಸಿ ಸೋಗೆವಿಲ್ಲಿಯಂ ಬಿಗಿದು ಬಸಂತಂ ನಟ್ಟ ಕಾಪನ ಗೆಲ್ಲಗಂಬದೆನೆ ಕಾದ್ದೊನೆಪಶ್ಯನೆಯಿಂ ಕಣ್ಗೆಡ್ಡವಾಗಿರ್ಪುಂ ಕೌಂಗುದೋಂಟಂ. ಕಿತ್ತಿಳೆ ಪೇರಿಳೆ ದಾಳಿಂಬಂ ಬಕ್ಕೆಪಲಸು ಪನೆಮರಂಗಳ್ ಎಡೆಯೆಡೆಯೊಳ್ ಮನೋಹರಮಾಗಿರ್ಪುವು.

ಪೂದೋಂಟದ ನೋಟಮೆಮಗೆ ಮನೋಜ್ಞಂ. ಬಂದುಗೆಯೊಳ್ ಕೆಂಬಣ್ಣಂ; ಗುಲಬ್ರೂವಿನೊಳ್ ಪೊಂಬಣ್ಣಂ; ಮಲ್ಲಿಗೆಯೊಳ್ ಬೆಳ್ಪು; ನೀಲಗಂಧಿಯೊಳ್ ಕಪ್ಪು; ಇಂತೋರೊಂದು ಪೂಗಳೊಳೋರೊಂದು ಬಗೆಯ ಬಣ್ಣಮಂ ನೇರ್ಪಡಿಸಿದ ಗಾಂಪನಾವಂ?

ಇದೆ! ಬಂಡುಣಿಗಳೆಂದು ತಂಡತಂಡದಿಂ ಮಂಡಳಿಸಿ ಮುಯ್ಯೇರದಿಗಳ ಬಂದೆಱಗುಗುಂ. ಅವರ್ ಪ್ರಾವೃತಿ ಬನರಾಣಿಯು ಮೊಗಮಾಡದ ಪಳಿಕಿನ ಪ್ರಾಸಂತಿಲೊಳ್ ಬರೆದ ರಂಗವಲ್ಲಿಯನೆ ರಂಜಿಕುಂ.

ಓ! ಓ! ಬನಗಾಳಿ! ಇದೇನೀತೆಱದೂಟಿಗಂ! ಇದಿರ್ಗೊಂಡು ಕರೆದುಮ್ಮಳ್ಕೆಯಿಂ ಬಂದ್ಯೆ? ಅದು ಬರ್ಪವಳ್ತು; ಸಾಲ್ಗುಂ ಸಾಲ್ಗು ನೀಯುಪಚಾರಂ; ಬಂದರೆಂದು ಪೇೞಿರಸಂಗೆ.

ಇದೆಕೊಳಿದಿಕೊಳ್! ಪೊಂಗದಿರಿನೆನೆ ಪೊಂಗದಿರಿಂ ಕಣ್ಗೊಳಿಪ ಕೆಯ್ವೊಲಸತ್ತ್ರಣಿಂ ಪಕ್ಕಸೋಪ ಕಕ್ಕಸಜನ್ಯಸೆಯರ ಮೆಲ್ಲುಲಿ ಕೇಳೆವಪ್ರುರ್ಮ; ಕ್ರ್ಯವಳಿಯ ಕಿಱುದನಿ ಮೆಲ್ಲುಲಿಗೆ ಪಾಸಟಿ; ಕಣ್ಬೊಗರ್ ನಗೆಮೊಗದ ಬೆಳಗಿಂಗೆ ನೆರಂ. ಕಬರೀಭರಕೆ ಕೊರಲ್ಗೊಂಕೆ, ಬಟ್ಟಬಲ್ಮೊಲೆಯ ತಿಣ್ಪಿಂಗೆ ನಡು ಬಳ್ಕಿ, ಗುರುಸಿತಂಬದ ಬಿಣ್ಪಿಂಗೆ ಕಾಲ್ತಡಂಗಟ್ಟೆ ಎತ್ತಂ ಪರಿದು ಸೋವರ್.

ನತೆ! ಪ್ರೋಪಂ. ಓ! ಇದೆ ಇದೆ! ಕಾಣಿಸಿಕೊಳ್ವುದಱವಟಿಗೆ. ಅಱಮೆ ಪೆರ್ಬ್ಬರಿಜನಾಂತು ನೀರಂ ಸುರಿವ್ರದೆನೆ ಕಿಱುಜವ್ವನದ ಬಾಲೆಯರ್ ನೀರನೆಱೆವರ್. ಕಡೆಗಣ್ಬೊಗರ ಕುಡುನೋಟದಿಂ ನೋಡಿ ಪೆಱೆಮೊಗದ ನಗೆಜೊನ್ನಮುಂ ಕೂಡಿ, ಸುಯ್ಯೆಲರ ನಱುಗಂಪನೂಡಿ, ತಣ್ಣೀರಂ ಬಿಡುಗಲ್ಗಂದಲೊಳೂಸರ್ವ ಪಸಿನೀರೆನೆ ನೀರಡಿಸಿದರ್ಗೆಱೆವರ್. ನಡುವಗಲ ಬಿಸಿಲಜಳಕೆ ಬಾಡಿರ್ಪನಂ ಬಟ್ಟೆಗರುಂ ನೆಟ್ಟನೆ ಕಟ್ಟೆಯ ಕಟ್ಟೆದಿರ ಪೊಸಜಗಲಿಯೊಳಿರ್ದು ತಣ್ಣೆಲರ್ಗೆ ಮೆಯ್ಯೊಡ್ಡಿ ಕಂಪ್ರೊಱುವ ನೀರನೀಂಟ ತನುಮನಂಗಳ ಬಱಲ್ಕೆಯನಿಱುತು ಸೀಗುವರ್.

ಊಗೆಳತ್ತಲ್ ಕೇರಿಗಳಂ ನೋಳ್ಪುದು.

ಮನೋರಮೆ– ರಮಣ! ಇದೇಂ ನೋಳ್ಪುದು ನೋಳ್ಪುದೆಂದು ಪ್ರೀತಿಯಂ ಬೆಳೆಯಿಸಾಪ್ರದಂ ಬಣ್ಣಿಸಲ್ ಪ್ರೋಪಯ್! ಮೋಹಮಂ ತೋಱುವ ಪ್ರದೆತ್ತಣಿನಿದುಂ?

ಮುದ್ದಣಂ– ಎನ್ನರಸಿ! ಪೆಜಿತಾಪ್ರಮಮಲ್ತು; ಅಯೋಧ್ಯಾನಗರದ ಬಣ್ಣನೆಯ್ಯೆ ಸೆ!

ಮನೋರಮೆ– ಆಗಳೆ ಪೇಳ್ದೆಯುತ್ತೆ ತನ್ನಿಂ ಮುಡಿಯದೆಂದು.

ಮುದ್ದಣಂ– ಅಪ್ಪುದಪ್ಪುದು! ತಪ್ಪೇಂ?

ಮನೋರಮೆ– ಅಂತಾದೊಡೇಂ ಕನಸೊ? ನೆನಸೊ?

ಮುದ್ದಣಂ– ಇದೇತಱ ನುಡಿ ರಮಣಿ!

ಮನೋರಮೆ– ಅಲ್ಲದೊಡೀಗಳ್ ಎನಗೊಮ್ಮೆ ನೆಲನಂ ಮತ್ತೊಮ್ಮೆ ಪೊಲನಂ ತೋಱಿ ಬಣ್ಣಿಪ್ಪದೇಂ?

ಮುದ್ದಣಂ— ಅಲ್ತಲ್ತು; ಈಬಣ್ಣನೆಯನಾಂ ಪೇೞ್ದುದುಮಲ್ತು ನೀಂ ಕೇಳ್ದುದುಮಲ್ತು.

ಮನೋರಮೆ— ಎನ್ನೊಡೆಯ! ಸಂದೆಯಮಿನ್ನುಂ ಪೋದುದಿಲ್ಲಂ.

ಮುದ್ದಣಂ— ಆದೊಡಾಲಿಸು! ಶ್ರೀರಾಮಚಂದ್ರಮನಂತರಂಸುಗೆಯ್ಯುತ್ತಿರಲೊಡಮೊರ್ಮೆ ದರ್ಶನಾರ್ಥಮಗಸ್ತ್ಯಂ ನಿಜಶಿಷ್ಯಂಬೆರಸಯೋಧ್ಯೆಗೈತರ್ಪ ಪದನೊಳ್ ಬಣ್ಣಿಸಿ ಪೇೞ್ದ ನುಡಿಗಳಿವು. ಅದನೆ ಕಂಡುಗಮಂ ಬಳ್ಳದೊಳಳೆದೆನ್ನೈಸೆ!

ಮನೋರಮೆ— ಓಹೋ! ಈಗಳಱಿತೆಂ. ಮುಂತೇಂ ಮುಂತೇಂ?

ಮುದ್ದಣಂ— ಪ್ರಿಯೆ! ಈಪರಿಯೊಳೋರೊಂದೆಡೆಯಂ ಶಿಷ್ಯಂಗೆ ತೋಱಿಸುತುಂ ಕುಂಭೋದ್ಭವಂ ಶ್ರೀರಾಮನೋಲಗಕೆ ಬರುತುಮಿರ್ದಂ.

ಎಂಬಲ್ಲಿಗೆ

ಶ್ರೀರಾಮಾಶ್ವಮೇಧದೊಳ್ ಅಗಸ್ತ್ಯಾಗಮನಮೆಂಬ ದ್ವಿತೀಯಾಶ್ವಾಸಂ

ಸಂಪೂರ್ಣಂ.

---

## ॥ ತೃತೀಯಾಶ್ವಾಸಂ ॥

ಲೋಗರಱಿವಿನ ಕೊಱತೆಯಂ ನೀಡುಮೆಣಿಸವೆ ತಗದ ಕಜ್ಜಮನೊಡರ್ಚುತೆ ಕಟ್ಟೆಕಡೆಯೊಳ್ ಬಱುಮಱಕದಿಂ ಮನದೆ ಕುದಿವರ್ ಪಲಂಬರೊಳರ್. ತಿಟ್ಟವಿಟ್ಟ ಪಾಪಿಯೆನೆ ಮೂಗುಸಟ್ಟಿರ್ಪರ್. ಈತಂಗಳ್ಗಪಚಾರಂ ಪ್ರೀತೋಪಚಾರಂ; ಕೂಟಂ ಕಾಲಕೂಟಂ; ನುಡಿ ಬಡಿ; ನೋಟಂ ಕಾಟಂ. ಇಂತಿದೊಂದವತೆ. ಮುನಿಯೇನೆಂಗುಂ ನೋೞ್ಪೆಂ. ರಮಣಿ! ತಪ್ಪಿದೆಂ ತಪ್ಪಿದೆಂ; ಅಪ್ಪುದನೊ ಪೇೞಲ್ತೊಡಂಗಿದೆನೇನುಮನೋ ಉಸಿರ್ದೆಂ, ಕೇಳ್ಪುದು ಕೇಳ್ಪುದು.

ಇಂತೀಯಾತ್ರೆಯೊಳ್ ಮೈತ್ರಾವರುಣಿ ಶಿಷ್ಯಂಗೂಡಿ ಬರುತುಮಿರ್ಪುದಂ ಕಟ್ಟಿದಿರೊಳ್ಕಂಡು ಪಡಿಯಱಂ ಚೆಚ್ಚರಮೆೞ್ದು ಬಂದೋಲಗದ

ಬಾಪಟಿಗೆನಿಸುಂ ದೂರದೊಳ್ ನಿಲ್ದು ತಲೆವಾಗುತೆ ಕೂಡುಂಗೈಗಳೊಳಿಂತು ಬಿನ್ನಯಿಸಿದಂ:— ಜೀಯ! ಪ್ರಾಙ್ಬಾಗಿಲೊಳ್ ಮುನಿಯೊರ್ವಂ ಬಟು ವೆರಸು ಬಂದಿರ್ಕುಂ; ಅನುಪಮನುಂ ದಿವ್ಯಕಾಂತಿಯುಂ ಪಾವನನುಂ.

ಒಡನೆಯೆ "ತಡೆದೇಂ! ಪುಗಿಸಲ್ವೇಡಾ!" ಎನುತೆ ಸಾಮಂತಮನ್ನೆಯರಂ ಬೞಿಯಟ್ಟಿ ಅಣುಗದಮ್ಮನಂ ಲಕ್ಷ್ಮಣನಂ, ತಕ್ಕಂತಿರೆ ಕರೆದು ತರ್ಪುದೆಂದು ಕಳುಪಿದಂ.

ಆಗಳ್ ಸೌಮಿತ್ರಿ ಮುಂತಪ್ಪರ್ ಬಂದು ಮುನಿಗೆಱಗಿ ಕೈಯಿತ್ತು ಕರೆದುಯ್ವುದುಂ; ಬರ್ಪುದಂ ಕಂಡು ಗದ್ದುಗೆಯಿಂದಿೞಿದು ನಾಲಡಿಯೊಳ್ ಮುನಿಯನಿದಿರ್ಗೊಂಡು ಪ್ರಣಮಿಸುತ್ತು ಭದ್ರಾಸನದೊಳ್ಕುಳ್ಳಿರಿಸಿ ಅರ್ಘ್ಯಪಾದ್ಯಂಗಳಿಂ ಪೂಜಿಸಿ ಮಧುಪರ್ಕಮಂ ಸಮರ್ಪಿಸಿ ಕುಶಲಮಂ ಬೆಸಗೊಂಡುಪಚರಿಸುತಿರ್ದಂ.

ಅಂತಿರ್ದಿರ್ಪರುಂ ಸುಖಸಲ್ಲಾಪಂಗೆಯ್ಯುತಿರಲ್ಕೆ ಅಗಸ್ತ್ಯಂ ರಾಮಚಂದ್ರನ ಮುಖಮನಿನಿಸುಮಾರಂ ನಿಟ್ಟಿಸಿ ಬೞಿಯುಂ "ರಾಯ! ಎಮ್ಮೀ ಮಾನಸರ ಮನೋವಿಕಾರಮುಮಂ ಇಂಗಿತಮುಮಂ ನುಡಿಯಿಂ ನಡೆಯಿಂ ಗೆಯ್ಮೆಯಿಂ ಮೊಗದ ಮಾರ್ಪಾಟಿಂ ಅಱಿಯಲಕ್ಕುಮೆಂದು ಬಲ್ಲರ ಬಗೆ. ಈಗಳೀಮೊಗಸಿರಿಗೆ ಕಂದುಂ ಮೊಬ್ಬುಡಿಗೆ ಕುಂದುಂ ನಸುಂ ತಲೆದೋಱಿದಂತಿರೆ ತೋರ್ಕುಂ. ಆಂ ತಪ್ಪೆನಲ್ತು! ಅವಱನೆಂತೋ ಬಗೆಯೊಳೀನಾನುಮೊಂದು ಬೇಸಮಿರ್ಕುಮೆಂದಱಿವೆಂ. ಅಂತು ನರಗೆ ಮೊದಲೊಳಂತು ಚಿಂತೆಯೊದವಿದೊಡಂ ಮಾಂಜಿಸಲ್ಕೆಂದು ಪ್ರಸನ್ನತೆಯ ಬಿನ್ನಣಮಂ ಪುಸಿನಗೆಯ ಸನ್ನಣಮಂ ತೋರ್ಪಡಿಸುತುಮಿರ್ದಂ ಮಱೆಗೈವುದುಂಟು. ಲೆಪ್ಪದ ಬೊಂಬೆಯನೆಱಕಂಬೊಯ್ದುಪ್ಪಳಿಸಿದ ಪುತ್ತಳಿಯುಂ ಬೇಱಾಗಿ ತೋಱುಗುಮಲ್ತೆ. ಇಂತಿದಱಿನುಂ ಜಾಣರ್ಗವಕಾಶಂ. ಮತ್ತಮುಳ್ಳಲರ್ ಕೆಸರ್ಮಲ್ಲಿಗೆಯುಂ ತಾಮ್ರ್ಯೋರ್ ತಳದಿಂ ಮುಱಿಯೆ ಮೇಲ್ಗೆ ಸೊಗಯಿಕುಮೆ?" ಎಂದಂ.

ಅದರ್ಕಾರಾಘವಂ— "ಮುನಿಕುಲಲಲಾಮ! ಅಂತುಟೆನ್ನಮ ನುಡಿ ಸಹಜಂ. ಸಂಸಾರಬಂಧನದಿಂ ಸಿಗಿವಡೆದಿರ್ಬರ್ಗೆಯ್ಮೆಗಳುಂ ಚಿಂತಾಪರಂಪರೆ

ಯಿಂ ಪ್ರಾದೇಶಿಕರ್ಗಂ; ಬಱೆಗೆ ಆಮುಚರ್ರಗಮುಂ ಮತ್ತಮೊರ್ಮೆ ಸಡಿಲ್ಬುಗು ವೈಸೆ" ಎನುತೆ ಪಡಿನುಡಿದಂ.

ಆಗಳ್ ಲೋಪಾಮುದ್ರಾಪತಿ– "ಆಃ! ರಾಘವ! ಸೊಲ್ಲಿದು ನಿನಗಲ್ತು ಲೋಗಗೆ. ಸಾಕ್ಷಾನ್ನಾರಾಯಣಂ ಧರೆಯ ತಿಣ್ಣಂ ತವಿಸಲ್ಕೆಂದು ಪುಟ್ಟಿದಂಗೆ ಚಿಂತೆ ಗಡ! ಗಾಳಿ ಜೀಮೂತಮಂ ನೇಸಱ್ ಕಂಗಳನಾವಂದು ಅಮರ್ಗೆ ನಂಜಾವಂದು ನಿನಗೆ ಬಾಗುಳ್. ಆನೊಂದಂ ಕೇಳ್ದಪೆ ನೀನೊಂದಂ ಪೇೞ್ದೈ. ಆರನೊ ಉದ್ಧರಿಸಲ್ಕೆಂದಕ್ಕುಮೀಯೆಣಿಕೆ, ಮುಖದ ಭಂಗಿ. ಅಂತದಱೊಳಂ ಲೋಕಸಂಸ್ಕೃತದಿಂ ಪೇೞ್ದಂ ನೀನೊಂದೆ ಬೆಳ್ಗೊಡೆಯೊಳಾಳ್ವ ರಾಜ್ಯಮುಂ; ಸಾಮಂತರಾಜರ್ ವಶವರ್ತಿಗಳಾಗಳುಂ ಕಾರ್ಯಮನೀಗುಂ ಸಾಸಿರ್ವರ್; ಧನದೆಯನ ಭಂಡಾರದತ್ತಣಿಂ ಮಿಗಿಲೈಸಿರಿ; ಪ್ರೌಢವಿ ಬಯಕೆವೆಟ್ಟಲ್; ಮಾರಿಯ ಕೋಱೆಯನಲ್ಲಂ ಮುಱಿವ, ಭೈರವನ ನಿಡುಜಡೆಯುಂ ಪಿಡಿವ, ಕಾಳರಕ್ಕಸಿಯ ಕೊರ್ಮಾಗಳಂ ಸೆಳೆವ ಪಡೆವಳರೊಳರ್; ಗುರುಕವಿಗಳುಂ ಬಳಕೆವೆತ್ತ ಸಚಿವರುಂಟು; ಬಱಿಯೋಜಂ ವಸಿಷ್ಠಂ; ಸಿಂಗನ ಸಿಂಗಮುಂ ಮೊಲನೆಬಂಕೆಯುಂ ಮಣಲ ನೆಯ್ಯುಂ ತಂದೀವ ಸೋದರರ್ ಬಱಿಯೊಳಿರ್ಪರ್; ನಂಟರೆಲ್ಲರುಂ ನೇಹಿಗರ್, ನಾಡಿಗರ್ ನುಡಿಯೊಳ್ ನಡೆವರ್; ಜವಾಯ್ಸ್ಲಿಯೆನೆ ನಗರರಕ್ಷಕನಿರ್ಕುಂ; ಎಂತುಂ ಕಲ್ಯಾಣತಿ ಜವದಂಡೆ. ಅಂತುಮಲ್ಲದೆಯುಂ, ಲೋಕಕಂಟಕರೆನಿಸಿ ಭೂಭಾರಕ್ಕೆಂದು ಪುಟ್ಟಿದ ರಾವಣಕುಂಭಕರ್ಣಾದಿದುಷ್ಟರಾಕ್ಷಸರಂ ಸಮೂಲಂ ತತ್ತಱಿಂದಱಿದುದಱಿಂ ಮೂಜಗಮುಂ ಸೊಗಂ ಬಾೞ್ವುದು. ಮೇಣೇತರ ಚಿಂತೆ; ಕೈವಲ್ಯಸುಂದರೀವದನಾರವಿಂದಮಕರಂದಪಾನಲೋಲುಪ್ತಿಗಿದು ಪ್ರಾಪ್ತಲ್ತೆ" ಎಂದುಸಿರ್ದಂ.

ಬೞಿಕ್ಕಂ ರಾಘವಂ– "ಸ್ವಾಮಿ! ನರರ ಬಿಜ್ಞಾನಿಗರ ಸುರರ ಮುನಿವರರ ಮನದಬಯಕೆ ಪಿರಿದಾಗೆ ಆಯುಂ ಬಱಿದಾಗೆ ಶ್ರೀಯುಂ ಕೈವಿಡೆ ತಂತಮ್ಮ ದುಷ್ಕೃತಂಗಳ ಫಲಂಗಳತ್ತಣಿನಾರಕ್ಕಸರ್ ಪೊಂದಿದರಲ್ಲ ಮೊನೆಯೊಳಾತಂಗಳಂ ಗೆಲ್ವ ಕೊಲ್ವ ಬಲ್ಮೆ ತನಗೆತ್ತಣದು? ಅದೊಡಮಂತಿರ್ದ ರಾವಣಕುಂಭಕರ್ಣರೆಂದೊಡಾರವರ್? ಪುಟ್ಟಿತರ್ಕೆ? ಎಂತು? ಇಂತಿದಂ ಕೊನರ್ಗೆಯಿಂ ಪೇೞಲಕ್ಕುಂ" ಎನೆ;

ಜಿತ್ರಪಾತ್ರಾಪಿ ತಾಂ ಮಂದಹಾಸದಿಂ—"ರಘುಕುಲಪಯೋಧಿರಾಕಾಸುಧಾಕರ! ಈ ಕುಲಕೇಸಗ್ಗಳಕೇಸರಿಜನ್ಮಕೀನುಡಿ ತಗುಗುಂ. ಪ್ರಾರಂಬಕ್ಕವಂ ಪಣ್ಣಿ ಬಣ್ಣಿಮಂ ಕೇಳ್ದಯೆ! ಪ್ರಾ ಎನಗಱಿವು, ನಿನಗೆ ಬಿನದಂ, ಕೇಳಾಱುರಕ್ಕಸರ ಪುಟ್ಟಂ." ಎನುತುಂ ಪೇೞಲಾರಂಭಿಸಿದಂ:—

ಮುನ್ನಮೊರ್ಮೆ ಸನಕಸನಂದನಾದಿಯೋವರ್ ವಿಷ್ಣುವಂ ಪೂಜಿಸಲ್ಕೆಂದು ವೈಕುಂಠಕ್ಕೈತಂದು ಓಲಗಮಂ ಪುಗುತಿರ್ಪಂದು ಬಾಗಿಲೊಳ್ ಜಯವಿಜಯರೆನಿಪ ಪಡಿಯಱರ್ ತಡೆದರ್. ಮೂಗುದುದಿಯೊಳಿರ್ತ್ತ ಮುನಿಸು ಮುನಿಗಳ್! ಒಡನೆಯೆ ಕೋಪದಿಂ ಪೊಡವಿಯೊಳ್ ರಕ್ಕಸರಾಗಿ ಪುಟ್ಟುವೆಂದು ಕಾವಲರಂ ಬಯ್ದು ಪೋಪುದುಂ, ಮನದೆ ತಲ್ಲಣಂಗೊಂಡು ನಾಥನೆಡೆಗೆ ಪರಿತಂದು ಗೈದ ಗೈಮೆಯುಂ ಬಯ್ದ ಬಯ್ಗುಳಂ ಬಿನ್ನವಿಸಿದರ್. ನಾರಾಯಣನಿಂತಿದಂ ಪರಿಭಾವಿಸಿ ದ್ವಾರಪಾಲಕರ್ಗೆ— ನಿಗ್ರಹಾನುಗ್ರಹಸಮರ್ಥರ್ ವಲಂ ಮುನಿಗಳ್, ತೊವಳಾಗದವರ ನುಡಿ. ಆದೊಡಂ ನಿಮ್ಮನಿನಿತೊಂದು ಕೇಳ್ವೆಂ. ಎನ್ನ ನೇಹಿಗರೆನಿಸುತೇೞುಂ ಮೆಯ್ಯನಿಳೆಯೊಳ್ಬೞ್ದು ಬೞಿಯುವೆನ್ನಂ ಬೞಿಸಾರ್ವುದೊಂದು; ಪಗೆದು ಮೂಱುಂ ಮೆಯ್ಯಂ ಸವೆದು ಮೇಣೆನ್ನಂ ಕಾಣ್ಬುದು ಪೆಱತೊಂದು; ಇವಱೊಳಾವುದು ಮನಕ್ಕೆಱುವುದಂ ಪೇೞಿಮೆನೆ,; ಮಣಿದು ಜಯವಿಜಯರ್— ದೇವ! ಏೞುಂ ಜನ್ಮದೊಳೆನಿಸಿರ್ದುಂ ಕಾಲಮುಗಲ್ವುದಾಗದು ; ಪಗೆಗಳೆನಿಸಿಯುಮೆಂತಾನುಂ ಮೂಱುಂ ಜನ್ಮಮಂ ಕಳೆದು ಮತ್ತಂ ನಿನ್ನಂ ಸಾರ್ವುದೆ ಲೇಸು, ಎನುತೆ ಬೇಡಿಕೊಂಡರ್. ಅವರ್ಗೆ ಸಿರಿಯರಸಂ— ತಥಾಸ್ತು, ಎಂದು ಹರಸಿದಂ. ಕೇಳೈ! ಆಮುನಿಶಾಪದ ದೆಸೆಯಿಂ ಆಜಯವಿಜಯರ್ ಮೊದಲ್ವುಟ್ಟಿಂ ದೈತ್ಯರೆನಿಸುತೆ ಹಿರಣ್ಯಾಕ್ಷಹಿರಣ್ಯಕಶಿಪುವೆಸರಿಂ ಜನಿಸಿ ಹರಿಯೊಳ್ ವೈರದಿನಳಿದರ್. ಈಗಳವರ್ಗೆರಡನೆಯ ಜನ್ಮಂ. ಎಂತೆನೆ:— ಬ್ರಹ್ಮಂಗೆ ಪೌಲಸ್ತ್ಯನೆನಿಪ ಮಾನಸಪುತ್ರನೊರ್ವನುಂಟು; ಈತನಿಂ ವಿಶ್ರವಸ್ಸು ಪುಟ್ಟಿದಂ; ಈತಂಗೆ ಮಂದಾಕಿನೀಕೈಕಸೆಯರೆನುತಿರ್ವರ್ ಪೆಂಡಿರೊಳರ್. ಪಿರಿಯಳ್ ಧನದಂ ಕಿಱಿಯಳ್ ರಾವಣಕುಂಭಕರ್ಣವಿಭೀಷಣಶೂರ್ಪನಖಿಯರುದ್ಭವಿಸಿದರ್. ಇಂತು ಬ್ರಹ್ಮನಿಂ ಬಳಗಮೊಗೆದತ್ತೆನುತೆ ಮೇಲಿಂ ಮೇಲುಸಿರ್ದಂ."

ಬಾಲೆ! ಕೊಡನ ಕುವರನಿಂತು ಪೇೞ್ದುದುಂ ರಾಮಂಗೆ ದುಗುಡದಿ
ಮ್ಮಡಿಯಾದುದು; ಮೊಗಂ ಕಳೆಗಿಟ್ಟುದು; ಮೆಯ್ ಕಾವುಗೊಂಡುದು; ಕಿವಿಗೆ
ಕಿವುಡುಂ ಕಣ್ಗೆ ಕುರುಡುಮೆರಡುಂ ಪರಡಿಕೊಂಡುವು. ಈ ತೆಱನೊಳ್
ಮೂರ್ಛೆಗೆ ಸಂದ ರಾಯನೆಂತಾನುಂ ಬೇಗದಿಂ ಸೋದರರ್ ಶೈತ್ಯೋಪಚಾ
ರದತ್ತಣಿಂ ತೆಪ್ಪತ್ತನಾಗೆ, ಮುನಿಪಂ ನಿರ್ವಿಣ್ಣನಾಗಿ ನೋೞ್ಪುದುಂ, ಬೆವ
ರ್ತ ಮೆಯ್ಯಿಂ ಮತ್ತಂ ಮತ್ತಂ ಬಿಸುಸುಯ್ದು ರಾಘವಂ ಮುನಿಗೆಂದಂ:–

“ಆ! ನಿಕ್ಕುವಂ. ಪೊಲ್ಲದ ಕಜ್ಜಮಂ ಪಣ್ಣಿದೆನೈಸೆ! ಲೋಕದೊ
ಳೆನ್ನಂ ಕೂಡಿನೆನರೆ? ಉತ್ಕಟಮಾದುದೀಬಱಿಯೆತ್ತ. ಪೆಣ್ವದಿಂ ಪಾ
ತಕದಿನಿತೊಂದು ತಿಣ್ಣಮಂ ಪೊಱುವೆಡೆಂದೇಂ ಬಿದಿಮಾಡಿದನೇ! ಅಕ್ಕಟಾ!
ಬ್ರಹ್ಮದ್ರೋಹಿಯಾದೆನಲಾ! ಹೋ! ಪಾೞ್ಗೆಯ್ಮೆಯಿಂತುಟು. ಇಂದೀ
ಗಳ್ ಪೞಿಗೆ ಕಾರಣಂ, ಪೊಂದಿದಾಗಳ್ ನರಕಕಾರಣಂ. ಏವೆಂ! ಮುಂ
ತೇಂ ಬಟ್ಟೆ! ಆವ ಜನ್ಮಮಾವ ಹೋಮಮಾವ ಜಪಮಾವ ತಪಮಿದೋ
ಷರಾಶಿಯಿನೇಱಲಾಱದೆನಗೆ ಕಯ್ಯೀಗುಂ ಮುನಿ ಪೇೞಾ!”

ಇಂತು ಮರ್ತ್ಯರಂತಿರುಮ್ಮಳದಿನುಬ್ಬಸಂಬಡುವ ರಾಜಪರಮೇಶ್ವ
ರಂಗೆ ಬೆಳ್ನಗೆಯೊಳ್ ಬಿಂಜದೋಜನೋಜೆಯಿಂ–“ಲೇಸುಲೇಸೆಲೆ ಸೀತಾರ
ಮಣ! ಈಕಪಟನಟನೆಯನಾರ್ಗೆ ತೋಱುವೈ! ಬ್ರಹ್ಮಹತ್ಯಂ ಗಡ! ದೋ
ಷಂ ಗಡ! ಪೊಡವಿಯೊಳೊಮ್ಮಡಿಯಿರ್ದನೀಗಳಿಮ್ಮಡಿಗೈದಂತಿರಾಡುವೈ!
ಇಂತಿದಂ ಕಾಣುತೆ ನೋಡುಲಾಮುಂ ಭ್ರಾಂತರಲ್ತು. ಏಂ ಕೇಳ್ದಱಿಯೆವೆ
ದಾನವರುಪಟಳಕೆ ಬಣ್ಣಂಗುಂದಿ ಬಾರ್ತೆಗೆಟ್ಟು ದೂಱುವ ಬರ್ದಿಲರ್ಗೆ
ನಾರಾಯಣಂ– ಸೈರಿಪುದು ಸೈರಿಪುದು ಪಂತಿದೇರಂಗೆ ರಾಮನೆಸರಿಂ ಪುಟ್ಟು
ವನ್ನವೆಂದು ಸೈತಿಟ್ಟು ಮರಳ್ದುದ ತೆಱನಂ. ಆಆದಿನಾರಾಯಣನಿಂತು ಮೆಯ್
ವೆತ್ತು ಪುಟ್ಟಿ ನೆವದಿಂ ಜಾನಕಿಯಂ ಪೋಗೊಳಿಸಿ ದಾನವರೊಳ್ ಪಗೆಗಟ್ಟಿ,
ಕೋತಿಪಡೆಯುಂ ನೆರಪಿ, ಕಡಲಂ ಕಟ್ಟಿ, ಕಾದಿ ಬಂಡಣದೊಳನಿಬರಂ ಸೈಮಿ
ಸಿಗಿಟ್ಟುದುದು ಜನಮೆ ಎಂಗುಂ; ದಿಸೆಸುಟ್ಟೆ ಪರ್ಬಿದುದು ಜಸಂ. ಇಂತಿರೆ
ಏನುಮಂ ಮಱುನುಡಿಯಬಾರ್ತೆ ನಿಲ್ಲಂ.” ಎನುತೆ ಪಡಿನುಡಿದಂ.

ಅದರ್ಕೆ ಶ್ರೀರಾಘವಂ— "ಪರಾಂಜಪುಸಿವೃರ್ಜಿಡಿಮ ಬಲ್ಲರ್ಗೆ ನುಡಿ. ಎಗ್ಗರೆನಿಸಿ ಲೋಗರಾಡಿದರೆ ಮುಡದಿಗೆಂದು ಬ್ರಹ್ಮಘಾತಂಗೈದನೆಂದು? ಇಂತಿದಂ ಬಗೆಯಲ್ವೇಡಾ!" ಎಂಬುದುಂ

ಮುನಿಪಂ— "ಎಗ್ಗರ್ಗಂಗೆ! ಲೋಗರಾಡುಗೆ! ಬಿಡುವುದುಂ ತಡೆಯ ಲಾಪಂ ಸಾಲ್ವಂ! ಪರಂಗಮಂತಿರೆ ಪಡಿಗುಂ. ಪ್ರೇಕೆ! ಅಂತವರೊಳಂ ಪಾತಕಂ ಜ್ಞಾತಮಜ್ಞಾತಮೆಂದಿರ್ಗೆಯಿಕುರ್ಗೆ. ಜ್ಞಾತಮಾದೊಡೆ ದೋಷಂ ಅಜ್ಞಾತಮಾದೊಡೆಂ ಕಿರಿದಿದೆನೋನುಮೊಂದು ಪ್ರಾಯಶ್ಚಿತ್ತ"ಮೆನೆ

ಮತ್ತಂ ರಘುಪುಂಗವಂ— "ಇಂತಿದು ತಗದು. ಕಿಚ್ಚನಿರಿತೊಡಮ ಅರಿಯದೊಡಂ ಕಿಚ್ಚೆ ಸುಡದೆ! ಇದರಿಂ ನಿನ್ನನುರಿಯದಾಪದರ್ಗನ್ನಿಗಂತೊಂದು ಪರಿಹಾರಮುಂ ತೋರ್ಪುತ್ತೆನ್ನನುಮಂ ಲೋಗರುಮನುದ್ಧರಿಸಲ್ವೇಳ್ಕು" ಮೆಂದು ಕಾಲ್ಗೆರಗಿದಂ.

ಇಂತೆರಗಿದ ರಘುಪುಂಗವನಂ ಮುನಿಪುಂಗವಂ ಕಾರುಣ್ಯದಿನೆತ್ತಿ ತಕ್ಕೈಸಿ— "ಇನಿತೊಂದುಮ್ಮಳಿಗಮೇಕೆಗೊಂಡಿರೆ ತೊಡಂಕೇಂ? ದೇವಕಲುಂಟೆ! ಕೈಕೊಳ್ವುದಶ್ವಮೇಧಮಂ. ನಿನ್ನಯ ಪಿರಿಯರಿಂತು ಬೇಳ್ದು ಜೆಳ್ಗನಿಂ ದೆಸೆವೆಂಡಿಗಮ್ ಪಸರಿಸಂಗೈದುಂ ಬದಿರ್ಬಲಮೆಣ್ಣಳಂ ತೇಟಿಸಿಗೊಂಡರ್. ಇಂ ತೀಸಪ್ತತಂತುವಿಂ ಪಂಚಪಾತಕಂಗಳುಮೊಮರ್ಪದಲೊಳೆ ಪಡಲಿಡುಗುಂ; ಕ್ಷಾಮಡಾಮರಂಗಳುಂ ಬೇರುಡಿದು ಪಾಟ್ಸ್ರೀಕುಂ ಪೆರ್ಬಿಲೊಳ್; ನಿನ್ನ ಬಗೆಯ ಸಂದೆಗಮುಂ ಪಿಡಂಮೆಟ್ಟುಗುಂ; ಲೋಗರ್ಗೆ ಕಲ್ಯಾಣಮುಮೊಡ ಗುರ್ಗಂ; ಅದರಿಂದಿದೆ ನಿನ್ನಿಷ್ಟಾರ್ಥಮಂ ನೆರೆಯಿಕು" ಮೆಂದು ಬೋಧಿಸಿದಂ.

ಆಗಳ್ ರಾಘವಂ— "ಅಕ್ಕುಮದಾನುಂ ತಗೆಬಗೆಯೊಳಾಸ್ಸವೆಂ. ಆ ದೊಡಂ ಜನ್ನಕ್ಕೆ ಪೇಳ್ದ ಕುದುರೆಯ ಲಕ್ಷಣಮಾವುದೊ? ವಿಧಿಯೆಂತುಟೊ? ಮೇಗೆಮ್ಮಂದಿಗರ್ಗೆ ಸಾಧ್ಯವೊ? ಇದನೊಳ್ಮನಮೆಣಿಕೆಗೊಳ್ವುದು." ಎಂಬುದುಂ;

ಮುನಿ ತಾಂ—"ನಿಮಗಲ್ಲ ಮೇಣಾರ್ಗೆ ಸಾಧ್ಯಂ? ನೆರೆರಾಯರ ನೆರಂ, ಪಡಿಬಲದ ಬಲಂ, ಗುರುಪಿರಿಯರೊಲ್ಮೆ, ಪರಿಜನದ ಪೆಮರ್ಪ್, ಬಂಧುಗಳ ನಲ್ಮೆ

ಪೆಱಗಾರ್ಗೊರ್ಳವು? ಇವಱೊಳ್ ಸಂಕೆವೇಡಂ. ಕುದುರೆಯೊಳೇಂ? ನೆಯ್ದಿಲ್ ಪೆಳ್ವು: ಮೊಗದೊಳ್ ಕೆಂಕಂ; ಕೊಡಂಕೆಯೊಳ್ ಕಪ್ಪು; ಬಾಲದೊಳ್ ಪೊಂಬಣ್ಣಮೊಪ್ಪಿರೆ ಮೆಯ್ವಣ್ಣನ ಕುದುರೆಯೊಂದಂ ಪೊಲ್ವುದೈಸೆ. ನಿನಗೇಂ ದೊತ್ತಿತ್ತೈ! ವಿಧಿಯಿಂತುಟು. ಬೇಸಗೆಯ ಪುಣ್ಣಮೆಯೊಳಂತಪ್ಪ ಪಯಮನುಳಿದನ್ನ ಪಣೆಯೊಳ್ ಬಱಿವಿಡುವಂ ತನ್ನಗ್ಗಳಿಕೆಯುಂ ಬರೆದೋಲೆಯುಂ ಬಿಗಿದು ನಾಡೊಳೊಕ್ಕಲಿಂ ಯಥೇಷ್ಟಂ ತೊಱಲ್ಕೆ ಬಿಡುವುದು; ಎಂತೆಂತು ಕುದುರೆಯ ಬಟ್ಟೆಯಂತಂತು ಬೆಂಬತ್ತುವುದು ಕಾಪಿನ ಭಟರ್; ಬಲ್ಲಿದರ್ ಕಟ್ಟಿದೊಡೆ ಮೊನೆಯೊಳ್ ಮಾರ್ಕೊಳ್ವುದುಂ, ಸೋಲ್ತು ಕಪ್ಪಮನಿತ್ತೊಡೆ ಕೈಕೊಳ್ವುದುಂ, ಕಾವಲಗೆ ನೆಱೆಗುಂ; ಎನ್ನೆವರಮಶ್ವಮಿಳೆಯೊಳ್ ಸಂಚರಿಕುಮನ್ನೆವರಂ ಯಜಮಾನಂ ಮೃಗಶೃಂಗಧರಂ ನವನೀತವಿಲಿಪ್ತ ಸುಗಾತ್ರಂ, ಬ್ರಹ್ಮಚರ್ಯವ್ರತಮನಪ್ಪುಕೆಯ್ದು, ನಮೆನ ದೀನಾಂಧಬಧಿರರಂ ದಾನಧರ್ಮಂಗಳಿಂ ಪಾಲಿಸುತುಂ, ಬ್ರಾಹ್ಮಣರಂ ಭೋಜನದಿಂ ಸಂತುಷ್ಟಿಗೊಳಿಸುತುಂ, ಕಾಣಲ್ಕೆಂದು ಬರ್ಪ ಪುರದ ಮನ್ನೆಯರಂ ಮನ್ನಿಸುತುಂ, ಜನಯುರನ್ನೈದಿ ಪೂಜಿಸುತುಂ, ಕಾಲಮಂ ಸಮೆಯುಲಕ್ಕುಂ; ಕಡೆಯೊಳ್ ಯಥಾವಿಧಿ ಯಜ್ಞಪರಿಸಮಾಪ್ತಿಯಂ ಗೆಯ್ದು ಬ್ರತಮನುಱಿವುದೈಸೆ. ಇಂತೀಜನ್ನಮಂ ಜೇಳ್ದು ಲೋಕಮಂ ಕಾಯ್ದೈ; ಮೇಣ್ ನಿನಗಕ್ಕೆಮ ಸರ್ವಂ ಮಂಗಳಂ.”

ಎಂಬಲ್ಲಿಗೆ

ಶ್ರೀ ರಾಮಾಶ್ವಮೇಧದೊಳ್ ಯಜ್ಞೋಪದೇಶಂ ಎಂಬ ತೃತೀಯಾಶ್ವಾಸಂ

ಸಂಪೂರ್ಣಂ

---

## । ಚತುರ್ಥಾಶ್ವಾಸಂ ।

—:0:—

ಪೆಣ್ಮಣಿ ಕೇಳ! ಅನ್ನೆವರಂ ರಾಮಂಗಮೊಡಂಬಟ್ಟುದು; ವಸಿಷ್ಠಂಗಂ ಸರಿವಟ್ಟುದು; ಸೋದರರ್ಗಂ ಮನಂಗೊಂಡುದು. ಬಡನೆಮೆ ಸರಯೂತೀರದೊಳ್ ಮಱಿಸಿ ಕೋಱೆಯನಾಯ್ದು ಪುರೋಹಿತಾ

ಸುಮಂತ್ರದಿಂ ಸಾಲ್ವಾಪ್ರವದಳತ್ರಯದೊಳ್ ಯಾಗಶಾಲೆಯುಂ ನಿರ್ಮಿಸಿ ಕುಂಬೆ
ಯುಂ ಬಲಿದು, ಪಂದರವೆತ್ತಿ, ಕೊಟ್ಟಾರಮುಂ ಸಮೆದು, ವೇದಿಯುಂ ಸಮ
ಕಟ್ಟಿ, ತಗುವೆಡೆಯೊಳ್ ಕೊಂಡಮುಂ ಪಣ್ಣಿ ಯಾಗಂಗಳಂ ನೆರೆಯಿಸುತ್ತಿರ್ದರ್.

ಆಗಡೆ ವಸಿಷ್ಠಶಿಷ್ಯರ್ ಪೋಗಿ ಮುನಿಸಂದೋಹಮುಮಂ ಕರೆವುದುಂ;
ಶ್ರೀರಾಮಚಂದ್ರದರ್ಶನಲಾಲಸರ್ ನಾರದ ಪರ್ವತ ಕಪಿಲ ಯಾಜ್ಞ
ವಲ್ಕ್ಯ ಸಂವರ್ತಾದಿಮುನಿಗಳ್ ಶಿಷ್ಯಪ್ರಸಂಗಗಳಿಂ ತಳರ್ದು ತಳ್ವದೆ
ಕೋಸಲೆಗೆ ನಡೆತಂದು ರಾಘವನಂ ಕಾಣಿಸಿಕೊಂಡರ್.

ಇಂತು ಬಿಜಯಂಗೈದ ಮುನಿವರ್ಗಮನರ್ಘ್ಯಪಾದ್ಯಾಸನಾದ್ಯುಪಚಾ
ರಂಗಳಿಂ ಮನ್ನಿಸಿ ತತ್ಪ್ರೋಕ್ತವಿಧಿಯುಂ ಕೇಳ್ದು ಗೋಪ್ರದಾನಾದಿದಾನಂಗ
ಳಿಂ ಸತ್ಕರಿಸಿದಂ. ಮತ್ತಂ ಹರ್ಷಚಿತ್ತರಾದಾತಪಸಿಗಳುಂ ವರ್ಣಾಶ್ರಮ
ಧರ್ಮಂಗಳಂ ರಾಘವಂಗೆ ನಿರೂಪಿಸುತ್ತುಮಿರ್ದರ್. ಆ ಪ್ರಸ್ತಾವದೊಳ್—

ಮಾಮರನೆಳದಳಿರ ರಸಮಂ ಪಿಡಿದು ಕಳಕಂಠನ ಕಂಠನಾಳಕ್ಕೆಱೆ
ದುಬ್ಬಸಮಂ ಕಳೆದು ಕಲನಾದಮಂ ಪೆರ್ಚಿಸಿಯುಂ, ಅರಸೇಱಿಲ ದೊರೆ
ವಣ್ಣಂ ತೀವು ಸಕ್ಕೆಸುತರಗಿಳಿಯ ನಾಲಗೆಯುಂ ತೆಳ್ಪನಾಗಿಸಿ ತೊದಳ್ನುಡಿ
ಯುಂ ತಿರ್ದಿಯುಂ, ಪುಷ್ಪಧೂಳಿಯುಂ ಲೆಪ್ಪಂಬಱೆವದಿವ್ಯಗಾತ್ರೆಯ ಸುರ
ಯಿಯ ಪೊಸಬಂಡನೊಡಲ್ಗೆತ್ತು ಮಱಿದುಂಬಿಗಳ್ಗೆ ಸಂಪಗೆಯತ್ತಣಿನೊದ
ವಿದ ಶಿರೋಭ್ರಮಣಮನಱಿಯಿಸಿಯುಂ, ಬಸಂತಂ ಬೆಜ್ಜನೆನೆ ವೈದ್ಯದೋಱ
ಲೊಡಂ; ಅಂದು ಕೇಡುಕೋಡಿಂದೋಡಿ ಮಲಯಮುಮಂ ಮಱೆಗೊಂಡ
ಪವನನಿಂಗಳತ್ತಣಿಂ ಪೊಱಮಟ್ಟು ಮೆಲ್ಲಮೆಲ್ಲನೆ ಕೆಯ್ಯೆಡೆಯ ಬನಬನಮಂ
ಪುಗುತಂದು ಪೊಂಚಿ ಮುಂಚಿ ಕೆಳೆಯಂಗೆ ನೆರವಾದನೆನೆ ದಕ್ಷಿಣಾನಿಲಂ
ಮಂದಂ ಮಂದಂ ವಹಿಸುತ್ತಿರ್ಕುಂ; ಫಲವೃಕ್ಷಂಗಳೆಲ್ಲಂ ಕಾಯ್ಕಸುಗಾಯ್
ಯ ಪಣ್ ದೋರೆವಣ್ ತನಿವಣ್ಣಿಂದೆಸೆಯೆಯುಂ, ಗಿಡುಗಳೆಲ್ಲಂ ತಳಿರ್ಕೆಂ
ದಳಿರೆಳದಳಿರೆಲೆ ಬೆಳ್ಳೆಲೆ ಪಸುರೆಲೆ ಪಣ್ಣೆಲೆಗಳಿಂ ರಂಜಿಸೆಯುಂ, ಪೂವಳ್ಳಿ
ಗಳ್ ನನೆ ಕೊನೆಮುಗುಳ್ ಪೆರ್ಮುಗುಳ್ ಬಿರಿಮುಗುಳ್ಪೂಗಳೆಂಬ ಪೊಸಸೊಲ
ಗರ್ಳಿಂದೆ ಸೊಗಯಿಸೆಯುಂ, ಮನೋಹರಮಾಯ್ತು ಪೊಸಸುಗ್ಗಿ; ಬಿರ
ಯಿಗಳೆರ್ದೆವಿಡಿ ಬಿಲ್ಲನೆ ಬಿರಿಯೆ, ವಿಟವಿತಾನಕ್ಕೆ ಪೊಸಬೇಟದ ಸೊಂಪು

ನೆರೆಯೆ, ಕುಟಿಲಾಂಗನೆಯರ್ಗೆ ಜವ್ವನವೇೞ್ಗೆ ಮೊೞೆಯೆ, ಕಾವನೆತ್ತಂ ಮೆಯ್ವೋಱದೆ ಸಂಚರಿಸಲ್ತೊಡಂಗಿದಂ; ರಾಘವನ ಪ್ರತಾಪದಂತಿರೆ ನೇಸಱ ಕಾಯ್ಪುಂ ಪೆರ್ಚಿದುದು, ಪ್ರಜಾಲಕ್ಷ್ಮಿಯೊಡನೆ ವನಲಕ್ಷ್ಮಿಯ ಕಳತನುಂ ಪಿರಿದಾಯ್ತು.

ಇಂತು ವಸಂತಂಗೆ ಕಡುಜವ್ವನಂ ಬರೆವರೆ ಕಾಣುತೆ ವಸಿಷ್ಠಂ ರಾಘವಂಗೆ— ಇದೀಗಳ್ ಸಮಯಂ ಯಾಜ್ಞೀಯಾಶ್ವಮಂ ಸೃಜಿಸಲ್ಕೆ, ದಿಗ್ದೇಶಂಗಳಿಂ ಕಪ್ಪಕಾಣ್ಕೆಗಳಂ ತರಲ್ಕೆ, ನೆರೆದ ವಿಪ್ರಸಂದೋಹಮಂ ದಾನಂಗಳಿಂ ಸಮ್ಮಾನಿಸಲ್ಕೆ. ಅಂತಱಿಂ ನೀಂ ಪೊನ್ನಸೀತೆವೆರಸು ವ್ರತಮನಪ್ಪುಕೆಯ್ವುದೆಂದೆಚ್ಚಱಿಸಿದಂ.

ಮನೋರಮೆ- ರಮಣ! ಇಂತಿದೇಂ ಪೊನ್ನ ಸೀತೆಯೆಂಬೈ? ರನ್ನ ಸೀತೆಯೆತ್ತವೋದಳ್? ಜನಕಂ ಜನಕಂ ಕರೆಯುದ್ದರ್ನೇಂ? ಅಂತಿರೆಯುಂ ಮಗುೞ್ದುಂ ಕರೆಯಿಸಿ ಕೊಳ್ವುದಲ್ತೆ ನೋಂಪಿಗೆ.

ಮುದ್ದಣಂ- ಓ! ಮಱೆತೆನೀಯಿರಸಂ ಪೇೞಲ್ಕೆ. ಸಂದೆಯಂ ಸಾಜಂ. ಕೇಳ! ರಾಘವಂ ರಾವಣಕುಂಭಕರ್ಣಾದ್ಯರಂ ಮಱುಪುಟ್ಟಿಂ ಬರ್ಪುದೆಂದಟ್ಟಿ ದೇವರ್ಕಳ ಬಂದಿಯುಂ ಬಿಡಿಸಿ ಲಂಕಾಧಿಪತ್ಯಮಂ ಶರಣಂಗೊಪ್ಪಿಸಿ ತಾಂ ಸೀತಾಸಮೇತಂ ಅಯೋಧ್ಯೆಯೊಳರಸುಗೆಯ್ಯುತಿರ್ದನೆಂಬುದನಾಗಳೆ ಕೇಳ್ದಪೆಯಲ್ತೆ! ಇಂತು ಸಾಸಿರಗಾಲಂ ಕೞಿದೊಡಮಿವರೊಳ್ ಸಂತಾನಂ ಪುಟ್ಟುತಿಲ್ಲಂ. ಎನಿತ್ತಪ್ಪಸಿರಿಯಿರ್ದೊಡಂ ಮಕ್ಕಳಿಲ್ಲದನ ಬಾೞ್ಕೆಯುಮೊಂದು ಬಾೞ್ಕೆಯೆ! ಸಿಡುಮರನಂತಿರ್ದೊಡದೊಂದಿರವೆ! ನೀರೊಳಿರ್ದುಂ ಮೀಂಗಳ್ ಕಾನೊಳಿರ್ದುಂ ಮಿಗಂಗಳ್ ಬಾನೊಳಿರ್ದುಂ ಖಗಂಗಳ್ ಮಱಿಗಳನಾರಯ್ಯುತುಂ ಸೊಗಂ ಬಾೞ್ವುವೆನೆ, ಸಾಸೊಳ್ ಪುಟ್ಟಿಯುಂ ಮಾನವನೆನಿಸಿಯುಂ ಮಕ್ಕಳಂ ಪಡೆದಂ ಪಾಪಿಯಲ್ತೆ! ಪೆಱಂಗಿರ್ದಮೆ? ಪೇೞ್ವೊಡಿದಿತೊಂದುಮನ್ನುಱು ಪುತ್ರಹೀನಂಗೆ ಬದ್ದಮಿಕರ್ಗಂ. ಇದರೊಳಂ ಪ್ರಜಾಪತ್ತಿನಿಂ ಸ್ತ್ರೀಯರ್ಗೆ ಭಕ್ತಿಮೀಱುಗುಂ ದಿನಮೂಱುಗಂಗಳಂತದಂ ಮೞೆಗಯ್ದ್ವಾಗದೆ ನೆಡೆಯಿರ ಸುಮಗೋಳ್ಪ್ರಿಗಳ್ ನಾರಿಯರೊಳ್ ಮೊದಲೆಣ್ಕೆಗಂ.

ನೆಂದಿಂಗೆ ಪುಟ್ಟುವನೋ! ಆಡುತಾಡುತ್ತೆ, ನೆವಮಿಲ್ಲದೆ ನಗುತ್ತೆ ಪಱಿದು
ತಾಯ್ತಂದೆಯರ್ ಮಂತ್ರಿಕೆ ಬೆಸ್ಸನೆ ಸೌವರ್ಣಯ್ಯನ ಕಣ್ಗಳಂ ಕಿಱುಗೈಗಳಿಂ
ಮುಚ್ಚುತಾನಾರೆಂದು ಕೇಳ್ವ, ಮಾತೆಯ ಮೇಲುದದ ಸೆಱಗಿನೊಳ್ ತಲೆ
ಯಂ ಬೈತು ಆಂ ಗುಮ್ಮಂ ನುಂಗುವೆನಲ್ಲದೊಡೆ ತನಿವಣ್ಣನೀಯಿಮೆನ್ನು
ತುಂ ಕಾಡುವ, ಪೆಱತೊರ್ವರ್ ತಂದೆಯ ಪಿಂದೆಸೆಯೊಳಡಂಗಿ ತಾನೆಲ್ಲಿರ್ಪೆನೆ
ನುತಬ್ಬೆಯುಂ ಕೇಳ್ವ. ಮತ್ತಮಂದೊರ್ವರ್ ಕೃಪಿತಿಯುಂ ಲೀಲೆಯಿಂ ಪಟ್ಟಿಸಿ
ಮಾಪ್ರೂಳಿಪ ಮುಮ್ಮೊಗಮುಂ ಪಡಿಗೂಸುಗೆತ್ತು ತನಗೆ ತಂದೀವುದಂ
ಮು ಚಲದಿಂ ಮಱುಗುವ, ಮಗುಳ್ದೊರ್ವರ್ ತಾಯ್ ಪೊಯ್ದಳೆಂದು ತಾತಂ
ಗೆ ತೋಱುವ, ತಾತನಬ್ಬರಿಸೆ ತಾಯೊಳ್ ದಱುವ, ಸಿನ್ನರಂ ಜಱುಚು
ವ ಜಱುಚಾಡಿ ಬಱಲ್ವ. ಬಱಲ್ದು ಮಱುಗುವ, ಮಱುಗಿ ಪರಿತಂದು
ಅಬ್ಬೆಯ ಕಾಲಂ ಬಿಗಿಪಿಡಿವ, ಬಿಗಿಪಿಡಿದು ಬೆಣ್ಣೆಯನೀವುದೆಂದು ಮುಂಜೆಱ
ಗಂ ಸೆಳೆವ, ಇಂತು ತನುಮನಮನಪ್ಪಿಕೆಯ್ವ ದಿವ್ಯಸುಂದರವಿಗ್ರಹಂ
ಕುಮಾರನೆನಗಪ್ಪನೆಂದಿಂಗೋ ಸಖೀ !

ಮುದ್ದಣಂ:- ಪ್ರಾಣೇಶ್ವರೀ! ಇಂತು ತನಗೆ ಮಕ್ಕಳ್ ಪುಟ್ಟುತಿ
ಲ್ಲೆಂದೊಂದು ಪಂಬಲ್ ಪಿರಿದಾಗೆ, ಗಱಿಗೆಗಱಿಗೆಗೆ ಬಾಡಿ ಬೆಂಡಾಗಿ,
ಮತ್ತಂ ಕಂಡರಿಸಿದ ಬೆಳ್ಕರನೊಂದು ಪೊಪೆಗೆಸಗೇಕೆ ಸಿಂಗರಮೆನಗೇತರ್ಕೆ
ಭೋಜನಮೇನುತಿವಂ ಬೇಸಱಿನುಱಿನು ಆರೊಳಮೇನುಮನಾಡದೆ ನೋಡ
ದೆ ಸಜ್ಜೆವನೆಗಾಗಿ ಪ್ರೋಸ್ತ್ರಮಂ; ಚಂದ್ರಮತಿಯುಂ ಸಲ್ಪಾತಿನುಪಚರಿಸುತು
ಮಾರಯ್ಯುತುಂ ಬಱಿಪ್ರೋದಳ್.

ದೇವಿಯರಿನಿತೊಂದಿರವನೀಕ್ಷಿಸಿ ತೊಟ್ಟನೆ ಸೂತಿಯೊರ್ವಳ್ ತಳ
ಮರ್ ತಲ್ಪಾಲಿಂಗೋದೋಲಗಂ ಪರೆಯೆ, ಸಚಿವಂಬೆರಸು ಮಂತ್ರಣಂಗೊ
ಳ್ವ ರಾಯನೆಡೆಗೆಯ್ದಿ ಬಂದು– ಜೀಯ! ಏನೆಂದಱಿಪೆನಕ್ಕನಂದು ಮಟ್ಟಬ್ಬೆ
ಗನೊಳಿರ್ಕುಮಂ; ಏಸ್ಟೊಳೆಂದಲ್ಲಿ. ನೆಟ್ಟನೆ ಸಜ್ಜೆವನೆಗೆ ಪ್ರೋಸ್ತ್ರಮಂ,
ಚಂದ್ರಮತಿ ಪಸಿಂ ಬಲ್ಲುಗುಪದಿಂ ಬಂಗೊಂಡೆಯ್ದಿಳ್. ದೇವರ ದೇವಿ
ಯರಿರವನಱಿಯಲಕ್ಕುಮೆಂದು, ಬಿನ್ನವಿಸೆ; ಶ್ರೀರಾಮಚಂದ್ರನುಂ ಬಿಮ್ಮ
ನೆಬ್ಬಿ ವಿಗ್ರಹಮೆಯಿಂ ಕಣ್ಗೆಟ್ಟು ಚಿಂತಾಪರವಶತೆಯಿಂ ನವೆಗಂಬಿಂ ಬ
ಪ್ಪಡೆನೆ ಬಂದು ಮಂಚಾಸನಮಂ ಪೊಗುತಂದು ರಾಣಿಯುಂ ಪತ್ತುಮ

ದಮನೊಳಗೊಳಗೆ ತಮ್ಮ ಬಳಗಕ್ಕೆ ತಿಳಿಪಿ ಸಲ್ಲಪಿಸುತೆ ಪೋಸ್ರವೆನೆ ಮುಂದಸ್ವರಂಜೆರೆಯೆ ಕುವಿವು ನಿಜಾಶ್ರಯಂಗಳಂ ಸಾರ್ದುವು. ಮತ್ತಂ ವಿಪ್ರರ್ ಎತ್ತಿದ ಸೇರೆಗೈಯೊಳ್ ಸಂಧ್ಯಾಮಂಡಪಮನಲಂಕರಿಸೆಯುಂ, ವೈಹಾಳಿಯನುಱಿದು ಬಾಹುಜನಿವಹಂ ಬೀಡಂ ಪ್ರಗುತರೆಯುಂ, ಬೇರದವಸರದಿಂ ಮೆಯ್ದೆಗೆದು ಬಣಂಜಿಗರ ನೆರವಿ ತಮತಮಗೆ ಪೊಸವರದಿನೆಣಿಕೆಯೊಳರೆಯುಂ, ಜವಸಿನೊಂದು ಕಜ್ಜಮಂ ತವಿಸಿ ಬೇಸರ್ಗೆ ಕುಡಿಯರ್ ಕಡುಸುವಸ್ತ್ರಾನವಿನೊಂದೆಡೆಯೊಳ್ ನೆರೆದು ಶ್ರೀರಾಮಲೀಲಾವಿನೋದಮಂ ಪಾಡುತಿರೆಯುಂ, ಬಾಲಕರ್ ಆಟಪಾಟಂಗಳಂ ಮಱೆದು ತಾಯ್ವಿರೊತ್ತಂ ಪತ್ತಿರೆಯುಂ, ಮುಚ್ಚಂಜೆ ಸೊಗಯಿಸಿದುದು.

ಅನಿತಱೊಳ್ ನೀಲಿಯ ಕಡುವಣ್ಣದೊಳೆಬ್ಬಿದ ಪಂದಿಯ ತೊವಲಂ ಮುಸುಂಕಿಟ್ಟು ಮೆಯ್ದೋಱದೆ ಲೋಕಮಂ ನುಂಗಲ್ಕೆಂದು ಬಂದ ಮಂದೇಹರಾಕ್ಷಸನೆನೆ ಕತ್ತಲೆಯೆತ್ತಂ ಪರ್ಬಿದುದು. ಇದು ನಾಡಿದು ಕಾಡಿದು ನೆರೆಯಿದು ಕೆಱೆಯಿದು ನೆಲನಿದು ಪೊಲನಿದು ಬೆಟ್ಟಿದು ತಿಟ್ಟಿದು ನರನಿದು ಮರನಿದು ದರಿಯಿದೋವರಿಯಿದೆಂದು ಬಗೆಯಲ್ಬಾರದಾಯ್ತು. ಆ ಸಮಯದೊಳ್ ಪಗೆಯ ಸುೞಿವನಱಿವೊಡೆಂದು ಬಿಸುಗೈಯನಟ್ಟಿದ ಬೇಹುಕಾಱರನೋವೆನಲಾಗಸದೊಳೆಡೆಯೆಡೆಯೊಳಱಿಲುಂ, ಭೂಮುಖದ ಮನೆಮನೆಯೊಳ್ ಸೊಡರುಮೆಸೆದುವು; ದೇಗುಲದ ಭೇರಿ ಮೊಬಿಗೆ, ಸಂಕಿನೊಂದು ನಿಡುಸರಂ ಪೆರ್ಚೆ, ಡಕ್ಕೆಯ ಜೇಗಟೆಯ ಬಿಱುಸರಂ ಬಿಱಿಸಾಗೆ, ರಜನೀಮುಖಮೆಡ್ತಮಾದುದು.

ಇಂತಿರೆ ಅತ್ತಲರಸುಗೆಯ್ಮೆಯ ಕಜ್ಜದುಜ್ಜುಗಂಬಿಡಿದು ನಾಗರಿಗರಿರವನಾರಯ್ವೆನೆಂದು ರಾಯನಟ್ಟಿದ ಬೇಹಿನವರ್ ಮಱೆರೂಪಿಂ ಬೀದಿಗಳೊಳ್ ಬರೆಪರೆ– ಸೊಗವಿಂಬಾಗೆ ತಂತಮ್ಮ ಕೆಳೆಯರಂ ಕಾಣುತೊಂದರೆಗಱಿಗೆ ಸಲ್ಲೀಲೆಯಿಂ ಸಲ್ಲಾಪುಗುಡಲ್ಕೆಂದು ನೆರೆವನೆಯುಂ ಪೋಪ ಬರ್ಪ ಜನ್ಯನಿಗರ ನಡೆನುಡಿಗಳಿಸಿಡಿಕಿಱಿವ ಪಂತಿಯಿಂ; ವೇದವೇದಾಂತಪರರೊಕ್ಕತಮೊಡಗೂಡಿ ಚರ್ಚೆಯಿಂ ಪರತತ್ತ್ವಮನಱಿಕೆಗೆಯ್ವ ಜಾಣರೊಂದು ನೆರವಿಯಿಂ; ಕೊರಲ ಸುಣ್ಣಸಿ ಬೀಣೆಯಿಂಚರಂ ಪ್ರರಿಗೊಳೆ, ಮದ್ದಳೆಯ ತಾಳದ ಲಯಂ ಜತಿಗುಡೆ, ಜಾನಪೋಱಿದೊಳ್ ತಾಳಮಂತ್ರವಿಫೇದದಿಂ, ಜೇಂ

ಗೊಡವಂ ಮುಸುಱಿ ಮೊರೆವ ಮಱಿದುಂಬಿಗಳ ಗಾನದಂತೆ, ಮಧುಮಾಸ
ದೊಳ್ ಕೈವಂದ ಮಾಮರನೆಳದಳಿರಂ ಮನಂಬುಗೆ ಸವಿದು ಕೊರ್ವಿ ಕುಕಿ
ಲ್ವ ಗಂಡುಗೋಗಿಲೆಯ ಮಂಜುಳಸ್ವರದಂತೆ, ಆರಕ್ತಮಾದ ನೇಱಿಲಂ
ಕೊಕ್ಕಿಂ *ಕರ್ದುಂಕಿ ಚಂಚೂಪುಟಮನೂಱಿ ಅರೆಗಣ್ಮುಚ್ಚಿ ಪಕ್ಷಯು
ಗ್ಮಂ ಸಂಚಳಿಸೆ ಮಧುರಾಸವಮಂ ಸೀಯೆನೆ ಬರೆ ಪೀರ್ದು ತಣಿದುಂ ಸೊ
ಕಿನಂ ಗಱಿಪ್ರಪರಗಿಳಿಯ ಬಿಡುನುಡಿಯ ಭಂಗಿಯಂತೆ, ಕರ್ಣರಸಾಯನ
ಮಾಗೆ ಶ್ರೀರಾಮನಂ ಪಾಡಿ ಪೊಗಳ್ವ ಗಾಯಕಸಂದೋಹದಿಂ; ಬಗೆಯಿಂ
ತಂತು ಪಾಡು, ಪಾಡಿಂತಂತು ಹಾವಂ, ಹಾವಮಿಂತಂತು ಭಾವಂ, ಪ್ರಮಂಗೊ
ಳೆ ನವರಸೋದಯಕೆ ಪಱಿಪೆತ್ತಾಡುವ ನಟ್ಟುವಿಗರ ಕೂಟದಿಂ; ಜಾಲಕೋ
ರರಂಧ್ರದಿಂ ಫೀತ್ರಿಯಣಿಂ ನಾಪೊಳ್ಳೆ ಬಾಗಿಲಂ ಪಱಿಪಱಿದು ಬೊಂಬಾ
ಳಂಗಳನುರಿಯಿಸಿ ತಾಂ ಸಿಸ್ವಿಸೈದ ಸಜ್ಜನರ ಸಜ್ಜುಗೊಂಡ ಬೀಡುಗಳ
ಸಾಲ್ಗಳಿಂ; ಅನಾಥರುಂಡಿಲ್ಲದೊಡೆ ಬರ್ಪುದು, ತಂಗಟಿಲ್ತು, ಕವಸ್ತ್ರಮಿಲ್ತು,
ಪೂರಣಗಡುಬುಂಟು, ಓಗರಮುಂಟು, ಅಳಿಯುಂಟು, ಈಗಳೆ ಇಕ್ಕು
ವೆಂ, ತಳ್ವದಿರಿಮೆಂದು ತಲೆವಾಗಿಲೊಳ್ ನಿಂದು ಕರೆವ ಮುತ್ತೈದೆಯರ
ತಂಡದಿಂ; ಕೇರಿಗಳ್ ಸೊಗಯಿಸೆ- ನಾಡಂ ಸುತ್ತಿ ಕಂಡುಬನಮಿಪಲ್ಕೆಂದು
ಸೋವರಂ ಬಳಸಿ ಬಣ್ಣದ ಚೌಕಿಗೆಯೊಳಿರ್ಪ ರಾಯನಂ ಕಂಡು
ದೂರದಿಂ ತಲೆವಾಗೆ; ರಾಘವನಾತಂಗಳ್- ನಾಮೊಳ್ ಲೋಗಗೆ ಸೊಗಕೆ
ಕುಂದಿಲ್ಲಮುಳ್ತು, ಅಜ್ಞೆಗೆ ಭಂಗಮಿರವರೆ! ರಾಯನಂ ನಿಂದಿಸರಲೆ! ಇಂದಿ
ನ ವಾರ್ತೆಯೇಂ? ಪೇೞಿಮೆಂದಂ. ಅಗಳ್ ಬೇಹುಕಾಜರ್- ಜೀಯ!
ಮೂಜಗಮಂ ಕಾವ ನೀಂ ನೆರೆಯಿರ್ದು ತಿರೆಯಂ ಪೊರೆವಂದು ಲೋಗಗೆ
ಸೊಗಕ್ಕೆ ಕುಂದೆ! ವಿಶ್ವಮೆಲ್ಲಂ ನಿನ್ನಾಣತಿಯೊಳಿರ್ಪನಂ ಪ್ರತಿವಾನಸರ್
ಮೂಱಿಲಾರ್ಪರೆ! ನಾಮಮೊಂದು ದೇಹಿಗಳ್ಗೆ ತಾರಕಮಂತ್ರಮಾಗಿರ್ಪನಂ
ಪೞಿಯುಲುಂಟೆ! ಮೇಣಾಂ ಮುಮ್ಮೈಯ್ಯ ಮಷ್ಕ್ರತಿಗಳ್ ನಿಗುಂಬಿಸೆ ಬಾ
ಳ್ಕೆಯೊಂದು ತಗದೆ, ವಿಟ್ಟು ಫ್ರಟ್ಟಂ ಪಾರೆ ಪಾಪರ್ ದೇವರಂ ತೆಗಱಿಸ
ಲೊಡಮೇನಕ್ಕುಂ? ಚೋರಂ ಚಂದ್ರಮನಂ, ಸೋಂಬಂ ಪಗಲಂ, ಪಾಷಂ
ಡಿ ವೇದಂಗಳಂ ಪಱಪೆತ್ತಿರಕ್ಕುಮೆಂಬುದುಂ; ಅಲ್ದಂ ಮತ್ತಮಾಚರ
ಗೆ-ಮಾಂಜಮಸೆರಂ, ಬಿಸ್ರಗೆಯ ನುಡಿಜಾಣ್ಮೆಗವಸರಮಿಲ್ತು, ಕಂಡುದಂ

ಪೇೞ್ವುದೆನೆ; ಒರ್ವನೊರ್ವನ ಮೊಗಮನವಲೋಕಿಸುತ್ತೆ ಮೋನಮಿರ್ದರ್. ಇಂತಿರೆ ಮತ್ತಂ ಮತ್ತಂ ರಾಯನೇನಾನುಮೊಂದು ಪ್ರಸವಾರ್ತೆಯಿರ್ಕು ಮೆಂದು ಜಾರರ ಭಂಗಿಯಿನಱಿತು– ಎನ್ನಾಣೆ! ಅಯ್ಯನಾಣೆ! ಪೇೞಿಂ, ಮನ್ನಿಪೆಂ, ಅಲ್ಲದೊಡೆ ನಿಮ್ಮಂ ಶೂಲದ ತುತ್ತತುದಿಯೊಳ್ ಕಾಣ್ಬಿರೆಂದು ಪುರ್ವಿನ ಜರ್ವಿಂ ಗದಱೆ; ಅವರೊಳೊರ್ವಂ ಕಂಪಿತಕಾಯಂ ಪಾದಾವನತ ಶಿರನಿಂತು ಬಿನ್ನವಿಸಿದಂ:— ಕಾವಂ ನೀಂ ಮುಯ್ವೆತ್ತಿರೆ ಪೆಱಉಲುಂಟೆ? ಮೇಣ್ ನಿನ್ನಿಯನಾಣ್ಮನೊಳ್ ಬಯ್ತಿಡಲೊಡನೆಮಗಾವ ಬಟ್ಟೆ? ಗಾವಿಲಂ ಕಱುಬಿಂ ಪೇೞ್ದುದಂ ನಿಷ್ಠುರೋಕ್ತಿಯುಂ ದೇವರ್ಗೆ ನಿವೇದಿಸುವುದನುಚಿತಮೆಂದು ಮಾಣ್ದೈಸೆ! ಬಲ್ಲರ ಬಲ್ಲಹಂ ಕಾಪ್ಪೊಡಿಂತಿದು– ನಡುಗೇರಿಯೊಳೊರ್ವನಸಗಂ ಪೆಂಡತಿ ಮುಳಿಸಿಂ ಪೇೞದೆ ತವರ್ಮನೆಗೆ ಪೋಪುದುಂ ಕಳ್ಪುವಂದಳ್ಗೆ ಬುದ್ಧಿವೇೞ್ದು ತಾಯ್ತಂದೆಯಿರ್ ಬೞಿವಂದಳಿಯಂಗೊಪ್ಪಿಸಲೆಂದು ಕೋಪಮಂ ತಿಳಿಪಲೊಡಂ, “ಅಗಲ್ದ ಮಡದಿಯಂ ರಘುಜನಂತಿರೆ ಕೊಂಡಾಳೆಂ ಬಾೞೆಂ” ಎಂದು ಬಿಱುನುಡಿದಂ. ಕರ್ಣಕಠೋರಮಾಗೆ ಕೊಡಂಕೆಗಳಂ ಮುಚ್ಚುತ್ತಲ್ಲಿಂ ತೞರ್ದೆವು. ಇಂತಿದೊಂದು ವಾರ್ತೆಯಲ್ಲದಾವುದುಮಂ ಕೇಳ್ದುದಿಲ್ಲೆಂದು ಮುಗುಳ್ದೆೞಗೆ ರಾಯನವರಂ ಕೈಸನ್ನೆಯಿಂ ಕಳಿಪಿದಂ.

ಗಡತ್ತಿ! ಮುಂಗಾರ ಮೋಡಗಿನತ್ತಣಿಂ ಪೊಡೆಗಿಡುವೆಳಕಱಿಲೆನೆ ಮಂಡಲೇಶ್ವರಂ ರಜಕನೊಂದು ಪರುಷೋಕ್ತಿಗೆ ಮನಗೆಟ್ಟುಂ ಮರವಟ್ಟುಂ ವಿಚಾರಪರಂ ಮತ್ತಂ ನೀಡುಮೊಣಕೆಯೊಳ್ ನಿಟ್ಟುಸಿರ ಚಟ್ಟುಬ್ಬಸದಿಂ ತನಗೆ ತಾಂ– ಹಾ! ಹಾ! ಪ್ರಂಜರಿಗೆಯೆಂದೇ ಎರ್ದೆ*ಗೊತ್ತಿದೆಂ, ಇಂತು ಕರುಳಂ ಕೊಱೆಗುಮೆಂದಱಿತೆನಿಲ್ಲಕ್ಕಟಾ! ಪಾಪನೆಯೆಂದೇ ಬಸ್ರುಗೊಂಡೆ ನವಱಿಸಿದಲಗಮೊಂದಕ್ಕೆ ತಲೆಮುಟ್ಟೆಂ. ಅಃ! ರಜಕನೆನ್ನ ನೇಳಿಸಿದನಿಲ್ಲ ಮಾವಮೆಟ್ಟಿಱಿದಂ. ಸಾಜಂ. ಅಗಳ್ ರಕ್ಕಸನ ಬಂದಿಯೊಳ್ ಬಾೞ್ದಳಂ ಮುಗುಱ್ದುಮಾನಾಳ್ವುದಕ್ಕುಮೆ? ಮಾತೇಂ, ಸೀತೆ ಮನ್ಮನಃಪ್ರೀತೆಯೆಂದೊಡಂಬಟ್ಟೆಂ, ಇಂತು ಲೋಗರ ಮಾತಿಂಗೆ ಕೈಗಿಡುವೆನೆಂದೆಣಿಸದಾದೆಂ. ಇನ್ನೇವೆಂ? ಕೆಯ್ಯೊಲಸೊಳ್ ಜೆಳೆದ ಕುಱುಂಬುಲ್ಲಂ ಕಿೞ್ತು ಬಿಸುಡುವಂತಿರೆ ಸೀತೆಯಂ ಬಿಡುವೆಂ ಎಂದೇ ಬಗೆದು ಬೞಿಯಂ ನೋವರೊಳ್

ಲಕ್ಷ್ಮಣಂಗೆ- ಕೇಳ್ದೈ ತಮ್ಮ! ಎಮ್ಮೀಬಱಿಗಡರ್ದ ಪೞಿವಂ! ಮುನ್ನಂ ಲಂಕೆಯೊಳ್ ನೀನೆ ಪೇೞ್ದೆಯುತ್ತೆ ಸೀತೆ ಪೂತೆ, ಅವಳಂ ಕೈಕೊಳ್ವುದೆಂದು. ಈಗಳೇನಾಯ್ತು! ಎನೆ; ಮಱುಮಾತಿನೊಳ್ ಭರತಂ-ಸೌಮಿತ್ರಿ ಪೇೞ್ವುದೇಂ! ಎಮ್ಮಯ್ಯಂ ಪೇೞನೆ? ಅಗ್ನಿ ಪೇೞನೆ? ದೇವರ್ಕಳ್ ಪೇೞರೆ? ಭೂದೇವಿ ತಾಂ ಪೇೞಳ್? ಧೂರ್ತನೊರ್ವಂ ಪೇೞ್ದ ನಾಣ್ಣುಡಿಯ ನೆವಂ ಪಿಡಿದು ದೇವಿಯರೊಳ್ ಕುಂದನೆಣಿಸಲ್ಬಾರದೆಂದು ಕೈಮುಗಿದಂ. ಅವರ್ಕಗ್ರಜಂ- ತಮ್ಮ! ಕೆಮ್ಮನಿರಿ: ನೀನಱಿಯಯ್. ಧರ್ಮಮಂತುಟು. ಅಪವಾದಂ ಪೊರ್ದಿದಿಂಬೞಿಯುಂ ದೂಷಿತೆಯಾದೀಮಡದಿಯುಂ ಬಿಟ್ಟಲ್ಲದೆ ಮಾಣೆನೆಂಬುದುಂ; ಭರತಂ ಕಿವಿಗಳಂ ಮುಚ್ಚಿಕೆಯ್ಯೆ; ಶತ್ರುಘ್ನಂ-ಅಣ್ಣಯ್ಯ! ದೇವಿ ಸಾಕ್ಷಾಲ್ಲಕ್ಷ್ಮೀದೇವಿಯೆಂಬುದಂ ನೀನಱಿಯೆಯ? ಇಂತಿರೆಯುಂ ನೈಪಿನ ಬಿತ್ತಂ ನನ್ನಿಗಾಗರಮಂ ನೊಗದ ಬೀಡಂ ಸಿರಿಯ ನೆಲೆಯುಂ ಸಿಂಗರದ ಕಣಿಯುಂ ನಿನ್ನೀಕೊಂಡಾಟದ ರಮಣಿಯುಂ ಅರೆಮೆಯ್ಯಂ ಬಿಡುವುದೆಂಬರೇ! ಕಿಱುಗೂಸಂ ನಿನ್ನ ಕೈಯೊಳೀವಂದು ಜನಕನೇನೆಂದಂ, ಅಗ್ನಿಸಾಕ್ಷಿಯೊಳ್ ನೀನೆ ಏನೆಂದೈ! ಹಾ! ರಾಘವಾ! ಪಾವಕಪಾವನೆಯುಂ ತೊಱೆಯಲ್ಕಿಂತು ಮನಂದಂದೆಯ್? ದೇವ! ಕರುಣಾಕರನೆಂಬ ಬಿರುದಿಂಗಿದು ತಗುಗುಮೆ! ನಿನ್ನೀಜಸಕೆ ನಿನ್ನೀಧರ್ಮಗೆ ನಿನ್ನೀಬೀರಕಿಂತಿದು ಪಾಡೇ! ಸೀತೆಯನುೞಿದಂ ಸತ್ಯದೇವತೆಗಿನ್ನೆಡೆಯಾವುದು? ಭೂಮಾತೆಯೆಂತು ಪೊತ್ತಿರ್ಪಳ್! ಅಕ್ಕಟಾ! ನರಿಯೂಳಿಡೆ ಸುರಲೋಕಂ ಪಾೞ್ಪೋಕುಮೆ! ನಾಯ್ ಬಗುಳೆ ರಾವ್ರತಂ ಕೀೞುಗುಮೆ! ಪಂದಿಯೊಂದು ಡುಱುಕೆಂದೊಡೆ ಸಿಂಗಮಂಜಲೆವುದೆ! ಕೂಳಂ ಕೊಱಚಾಡೆ ನೀನೊಂದಾಡುವುದೇ! ಎನ್ನಾಣೆ, ಮಾತೆಯಾಣೆ, ಸೀತೆ ನೀತಿಗೆಟ್ಟಳಲ್ಲಂ. ಕಾವುದು ಕಾವುದೆಂದು ಕೈಯೊತ್ತಿ ಬೇಡುವುದುಂ; ಮತ್ತಂ ರಾಘವಂ ಸೋದರರ್ಗೆ- ಬಲ್ಲೆಂ ಬಲ್ಲೆನವಳಯೋನಿಜೆಯೆಂಬುದಂ ಪಾವನೆಯೆಂಬುದಂ ಪುಣ್ಯಶ್ಲೋಕೆಯೆಂಬುದಂ. ಆದೊಡಮೀಗಳೆನ್ನಳವಲ್ತು; ತೆಗಟ್ಗೆ ಮಾೞ್ಪೋದೆಂ. ಜನರಿಂತು ಬೋಧಿಸೆ ಪ್ರಮಾಣ್ವನೆಂತೊ! ಅದಱಿನೆನ್ನಂ ನಿರ್ನಿಮಿತ್ತದಿಂ ತಡೆಯದೆ ಯಥೇಷ್ಟಂ ಪೋಗಿಮೆಂದುಂ ಮಾಣೆ ನಿಮೋರ್ಕನಿಮರ್ಕತ್ತ ನಿರ್ಮಲನಪ್ಪ ಘಣಿಯೆಂತಂತೀಸೀತೆಯುಂ ತೊಱೆಯೆ ನೊಗಂಬಾೞ್ವೆನಿದು ಸಿದ್ಧಮೆಂ

ದು ದುಗುಡದೊಂದು ಕಾಯ್ಪಿಂ ಜಡಿದು ನುಡಿವಗ್ರಜನಂ ಕಂಡುಂ ಕಾಣದೆ ಹಾಹಾರಾವಂಗೆಯ್ಯುತೆ ಭರತಶತ್ರುಘ್ನರ್ ಪಿಂಜರಿದರ್.

ಆಗಳ್ ರಾವಣಾರಿ ಬಾಗುಱೊಂದು ಬಿಗುರ್ಪಿಂ ತಲೆ ತಿಣ್ಣಮಾಗೆ ಕೆಕ್ಕೆಯುಂ ಕರತಲದೊಳೂಱಿಯುಂ ಕರತಲಮುಸಿದು ಬಳ್ಕಿ ಅಂಕದೊಳಿಟ್ಟುಮಂಕಂ ಕವಕ್ಕದಿಸೆ ನೆಲನೊಳ್ ಧರಿಸಿಯುಂ ನೆಲಂ ನಲೆವಪ್ಪಿ ತಾನೆ ತಲೆಮಟ್ಟುಂ ಕಂಬನಿಗಱೆಯುತ ಕೆಲದೊಳ್ ಕೈಗಟ್ಟಿ ನಿಂದ ಲಕ್ಷ್ಮಣನಂ ಕರೆದು— ಅಣುಗನಮ್ಮ! ಇತ್ತಲ್ ಬಾರ್ಕೈ! ಅಂದಂದಿಂಗಮೆನ್ನಾಣತಿಯಂ ಮೀಱಿದೆಯಿಲ್ಲಂ ಬಲ್ಲೆಂ; ಈಗಳ್ ಪೆಱಗೆ ಕಱೆಯೆಂತಂತೆನ್ನೀಬಱಿಗೆ ಪಱಿಯೊದವಿದತ್ತೀಜಾನಕಿಯ ದೂಸಱಿನಾಕೆಯುಂ ಕಾನನಕ್ಕುಯ್ದು ತೊಱೆದು ಬಾರಾ! ಎಂದಂ. ಅದರ್ಕೆ ಸೌಮಿತ್ರಿ— ಜೀಯ! ಅಣ್ಣನಾಜ್ಞೆಯಂ ಮೀಱಿ ನಡೆಯೆ ಕುಂಭೀಪಾಕಂ, ನಿರ್ದುಷ್ಟೆಯಾದೀಅತ್ತಿಗೆಯನಱಿದುಂ ನಟ್ಟಡವಿಗುಯ್ದು ಬಿಡೆ ರೌರವಂ. ಎನ್ನೊಡೆಯ! ಅದಱೊಳಂ ತುಂಬಿದ ಬಸಿಱಿಯಲ್ತೆ! ಎಂತಯ್ ಕೊಂಡುಯ್ದು ಪಾಪಿ ಕೈವಲ್ಯಲಕ್ಷ್ಮಿಯುಂ ಬಿಡುವಂತಿರೆ, ನಿರ್ಘೃಣನಾಂ ಭಾಗ್ಯಲಕ್ಷ್ಮಿಯುಂ ಬಿಡುವೆಂ, ಎಂಬುದುಂ; ಮತ್ತಂ ಮತ್ತಂ ರಾಘವಂ ಚಲಮಂ ಪಿಡಿದು— ಬಾಲ! ಇಂತುಸಿರಲಾಗದೈ, ಪೀಸಂ ದೋಸಮಿಲ್ಲಂ, ಮಾರ್ನುಡಿಯದಿರ್, ಪೋ ಪೋಗೆಂದುಸಿರ್ದಂ. ಇಂತಾಗೆ ಲಕ್ಷ್ಮಣಂ ಬೇರದ ಮೊಯ್ಗೊಂಡು ಮನಂ ದಿಟಗೈದು ಅಗ್ರಜಾತಂಗೆ— ಎಲೆ ಅಣ್ಣ! ಇದೆಕೊಳ್ ಚಂಡಾಲಂ ಸಿದ್ಧಮಿಪ್ಪೆಂ. ಅದಿಯಣಾ! ಆಣತಿಯೆಂತಂತು ನಡೆವೆಂ. ಮುನ್ನಂ ಭಾರ್ಗವಂ ತಂದೆಯ ನನ್ನಿಗೆ ಮಾತೆ ರೇಣುಕೆಯುಂ ಕೊಲ್ಲನೆ! ಅಂತಿರಾಂ ನೀನಯ್ಯಂಗೆ ಪಡಿಯಾಗಿರೆ ಮಾತೆ ಸೀತೆಯುಂ ಕೊಲ್ವೆನೊ ಮೇಣ್ ಕಾಡೊಳ್ ಸಿಂಗದಿಕ್ಕೆಯೊಳ್ ಬಿಸುಡ್ವೆನೊ ಪೇೞ, ಎನೆ: ರಾಘವಂ— ತಾನೆ ಸೀತೆ ದೋಹದದಿನಡವಿಯ ಸಿರಿವೆಣ್ಗಳಂ ಕಾಣಲ್ಕೆಂದು ಬಯಸಿದಳಂತದಱಿನೀಸೆವದಿನಡವಿಯೊಳುೞಿದೆ ಬಾರೆಂದಾಡಿದಂ. ಲಕ್ಷ್ಮಣಂ— ದೊತ್ತಿತ್ತೆಂ, ಅಂತೆ ಯೆಸಗುವೆಂ; ಸಂದಿಯಮಣಂ ಬೇಡವೆಂದು ಬಿಮ್ಮನೆಬ್ಬಿ ನಡೆದಂ.

ಆವೇಳೆಯೊಳ್ ರಾಮರಾಜ್ಯದೊಳಿಂತನುಚಿತಮಾಗಿ ಅಱಂಗೆಟ್ಟುದೆಂದು ಬೆದಱಿ ತಾರೆಗಳ್ ದೆಸೆಗೆಟ್ಟುವು; ಚಂದ್ರಮಂ ಕಳೆಗೆಟ್ಟಂ; ಜಂಪತಿಪಕ್ಕಿ

ಕಂಗೆಟ್ಟುವು; ಕೈರವಂ ಬಣ್ಣಂಗೆಟ್ಟುವು; ಕುಮುದಿನಿ ಬಾಡುತ್ತಿರ್ಪುವು; ತುಂಬಿ ಮೊರೆಯುತ್ತಿರ್ಪುವು. ಇಂತಿದೇನಚ್ಚರಿಯದ ಗಲಿಬಿಲಿ? ಇದರಿದಿರೊಳಿರ್ಪುದಲ್ತೇ ಬಿಟ್ಟಮಂದು ಮುಯ್ಗೊಳದ ತಮಿತವಂ ಕಾರ್ಗಾಳ ಸುಟ್ಟುರುಳ್ದೊತ್ತಡಂಗೆ, ಪಕ್ಕಿಗಳ್ ಗಲಿಬಿಲಿಸೆ, ಕಾಸೆ ಭಾಸ್ಕರಂ ಬೇಗ ನುಪ್ಪವಳಿಸಿ ಮೂಡುವೆಟ್ಟನ ಕೋಡುಗಲ್ಲನೇರಿ ನಿಟ್ಟಿಸುತಿರ್ದಂ.

ಇಂತು ತಾತನ ನೇಸರ್ ಮೂಡೆ ಸೌಮಿತ್ರಿ ಮಾತೆಯಂ ಪ್ರೀಡೆಮಟ್ಟಂ ಪ್ರಾಣಮಟ್ಟು ಸರಯೂತೀರಮಂ ಸಾರ್ದು ಜಳಕಂಗೈದು ಕಾಲ್ಯಮನಾಗಿಸಿ ಸೂರ್ಯಂಗರ್ಘ್ಯಮಂ ಕುಡುವೆನೆಂದು ಅಂಜಲಿಯನೆತ್ತಿ ಅಪ್ರಪ್ರಾತಿಮವಿಲೋಚನಂ ಜಿತಸುಲೋಚನಾವಲ್ಲಭಂ ವಿಶ್ವಲೋಚನಂಗೆ– ಎಲೈ ಆರ್ಯ ಸೂರ್ಯನಾರಾಯಣ! ಎಂತೂ ತೋಳಬಿದೋಂಟಿದೊಳ್ ತುಱುಚಿ ಪ್ರಟ್ಟನಂತಿನ ನಿನ್ನೀಬಡಾಯೊಳ್ ಜಾಟಿನ ಪಂಚಪನಾಂ ಪ್ರಟ್ಟಿದೆಂ. ಕೊಡಲಿಯು ಕಾಮೆಂಜೊಲಾಯ್ತು ಪ್ರಟ್ಟು. ಅಗ್ರಜಂಗಾಂ ಬಿಜಯಸಿರ್ಪನಂ ರಾಜ್ಯಮನಾಳ್ದು ಕಾಪಿಡುವ ಭೂಸುತೆಯನಯೋನಿಜೆಯಂ ಮಂಗಳಸ್ವರೂಪೆಯಂ ಸೀತೆಯನಣ್ಣನಾಣತಿಯಿಂ ಕಾಡೊಳ್ ಬಿಸುಡಲ್ಕೆ ಬನ್ದನಾದೆಂ. ಅದಱಿನಿದೆ ಶ್ರೀಪಂ. ನೀಂ ಜಗಚ್ಚಕ್ಷುವಾಗೆ ಕುಂದುಕೊರತೆಯಂ ಕಡೆಗೊತ್ತು ತೆನ್ನನುದ್ಧರಿಸೈ, ಎಂದು ಕೈಮುಗಿದು ನಡೆದಂ.

ಅಂತು ಲಕ್ಷ್ಮಣಂ ನಡೆತಂದು, ಪೊಂದೇರನಣಿಗೆಯ್ದು, ದಿವ್ಯಾಶ್ವಂಗಳಂ ಪೂಡಿ, ವಾಗೆಯಂ ಕಯ್ಕೊಂಡು, ತಾನಡರದೊಯ್ಯನೆ ದೇವಿಯರ ಕನ್ನೆವಾಡದ ಕಟ್ಟಿದಿರೊಳಿರಿಸಿ, ಮೊಗವಾಡದ ಬಾಗಿಲೊಳ್ ನಿಂದಾದಂ ಕಲ್ಪನನಾಗಿ– ಇದೆ ಇದೆ ಬಣ್ಣದೇರ್, ವನಕುಯ್ಯೊನೆಂದೆ ರಾಘವನಪ್ಪವಂ, ತಳ್ವದೆ ಪೊಱಮಡಿಮೆಂದಂ.

ವನಕ್ಕೆಯ್ದಿ ಪುಣ್ಯಾಶ್ರಮಂಗಳಂ ಮೋಸೊವರ್ಗಯುಂ ಕಂಡು ಪಾವನೆಯಪ್ಪೆನೆಂದು ಬಗೆದ ಪಂಬಲ್ ಬೆಟ್ಟಿತಾಗೆ ಸೀತೆಗೆ ಕಣ್ಣೊಳ್ ಬೆಳಗಪ್ಪದುಂ, ಪೊಱವಾಗಿಲೊಳ್ ಪೆಸರ್ಗೊಡಿದು ಕರೆವ ದನಿಯಂ ಲಕ್ಷ್ಮಣನೆಂದಱಿತು, ಪಡಿಪೆಱೆದು ಪ್ರೊಡನಂದು, ಅರೆಮೊಗದೊಳಿರ್ಪ ಸೌಮಿತ್ರಿಗೆ– ಏನೈ ಮೈದುನ, ಜೀವಿತೇಶನೆನ್ನೊಂದು ಬಿನ್ನಪವಂ ತೂಱದೆ ನಲ್ಮೆ ಮಿಗೆ ಪ್ರೊರೆದನೆ! ನಿನ್ನಂ ಪೇಟ್ಟಿಟ್ಟನೆ! ಕರುಣಾಕರನಲ್ತೆ! ದೀನೆಯಂ ನಲ್ಲನಲ್ಲ

ಮೇಣಾವಂ ಕಾವಂ? ಅಕ್ಟನಡೆದಾಪದೆಗಳಾವಗಂ ಸೊಗಮಿರ್ಕೆ! ಅದೊಡಿನಿತೊಂದು ಬೇಗವಿಂ ಪೊಲ್ತ್ತದೆಯೊಳೇಂ ಕ್ಷೀರಂ ತಂದಯೆ? ಪಗಲಿನ್ನುಮೊಮೊರ್ಗಟಿಂ ಮೀಯುತ್ತಿಲ್ಲಂ. ಅನತ್ತೆವಿರ್ಗೆಱಗಿ ಪರಕೆಗೊಂಡೆನಿಲ್ಲ! ಮಾವಿಮರಂ ಬೆಸಗೊಂಡೆನಿಲ್ಲ! ಚಂದ್ರಮತಿಗೆ ಪೇಳ್ದೆನಿಲ್ಲ! ಏಗೆಯ್ವೆನೆನುತೆ ವಿಚಾರದಿಂ— ಅಪ್ಪದಪ್ಪದು ನಿಡುವಯಣಂ ಇರ್ದ ರಾಘವಂ ಪೇಳ್ವಿಂ ಅಕ್ಕಿಸೊವೆ ತಾಂ ತಮಗೆ ನೆಲೆಗೆಯ್ವರ್. ಎಂತುಂ ಕಿಱಿದುಂ ದಿನಕ್ಕೆ ಮರಳ್ದು ಬರ್ಪೆನೆತ್ತು! ಆಗಳ್ ಋಷಿಪತ್ನಿಯರೆಂಬ ಸಲ್ಗೆಯುಂ ಮೇಣುಂ ವನದೊಳ್ ಕಂಡ ಪೊಸಬಿನದಮುಂ ಬಂದಱಿಪೆ ಸಂತಸಮಿರ್ಪುದಿಕುಂ. ಅಯ್ಯಯ್ಯೊ! ಪೋಪಂ ಪೋಪಮೆಂದು, ಆನಂದಾಶ್ರುವಿಲುಳಿತ ಕಮಲವಿಲೋಚನೆ ಚಂದ್ರಮುಖಿ ಮುನಿಕಾಂತಾದರ್ಶನೋತ್ಕಂಠೆ ಪುಳಕಿತಸರ್ವಾಂಗಿ ಇಂತಾತುರದೊಳಿರ್ದಳ್.

ಎನ್ನ ರನ್ನಗೆಯ್ಪಿಡಿ! ಕವಡನಱಿಯದ ಬಾಲೆ ಮೆಯ್ಯ್ವೆರ್ಪಿನ ನಲ್ಲನೊಲ್ಮೆ ತನ್ನೊಳಿಂತು ನನ್ನಿಯೆಂದೇ ಸೊಗವಯಣದ ಬದುಕೆಯಿಂ ಬೀಗಿ ನುಡಿಯೆ ಕೇಳ್ದು ಮನಮುಱುಗದವರಾರೊ? ಪಾಲ್ಗಡಲೊಳುದಯಿರ್ಪ ಪುಟ್ಟಿದುದಂ ನೆನೆದಳಲ್ಲದೆ ನಂಜುರ್ಕಿದುದನೇಗೈದುಂ ಬಗೆಯದಾದಳ್. ಅಃ! ಭಾಗ್ಯಲಕ್ಷ್ಮಿ! ನಿನಗಮೀವಿಧಿಯಾಯ್ತು! ಕಾಱ್ಮುಗಿಲ್ಗಳೊಳೊಡಂಬಾಟ್ವೆಂದು ಬವಣೆ ನೇರ್ಪಟ್ಟುದೇ!

ಆಗಳೂರ್ಮಿಳೆಯರಸಂ ಜಾನಕಿಗೆ— ಮಾತೆ! ವನಕೆ ಪೋಪೆನೆಂದು ಕಾಂತನನೆತ್ತರ್ಕೆ ಬೇಡಿದಾ! ಏಂ ಸೊಗಮುಂ ಕಾಣ್ಬುದುಂಟು! ಮುನ್ನುಂಡುದು ಸಾಲದೆ! ವಿಪಿನಂ ಕ್ರೂರವ್ಯಾಘ್ರವೃಕಸೂಕರಚಮೂರುಕಂಠೀರವನಿಷೇವಿತಮಲ್ತೆ! ಅಬಗೆಗೇವೇಳ್ವೆನೊ! ಎಂಬುದುಂ; ಸೀತೆ— ಏನಯ್ ಲಕ್ಷ್ಮಣ ಇಂತೇಕುಸಿರ್ವಯ್? ವನಮುಂ ಕಾಣೆನೆ? ದುಷ್ಟಮೃಗಂಗಳ್ ಮಗೇಂ ಗೆಯ್ಗುಂ? ಬೇಂಟೆಗೆ ಪೋದಪೆವೆ? ಋಷ್ಯಾಶ್ರಮಕ್ಕೆ ಪೋಪರ್ಗೆ ಮೃಗಂಗಳ ಗೊಡವೆಯೇಕೆ? ಮುನಿಪತ್ನಿಯರ ವನದೊಳಿರರೆ? ಎಂತಾತೊ ಕಾಂತನಂ ಕಾಡಿ ಬೇಡಿ ಅನುಗೊಂಡೆನಿದಂ ತದೆನ್ನದಂದಮೆ ಕಂದ! ಶ್ರೀ ರಘುಕುಲಸಾರ್ಥಪೂರ್ಣಶಶಾಂಕನೊಲ್ಮೆ ಎನ್ನೊಳಿರೆ ಬನ್ನಮಾವುದುಮೊಂದದಯ್? ನಿಕ್ಕುವಂ ತಕ್ಕುದೆ ಪ್ರಶ್ನಂ, ಅಮ್ಮತ್ ರಥಮುಂ ಕಾಣಿಸಿದಾರಾ! ಎನು

ತುಸಿರ್ದಳ್. ಇಂತಾಗೆ ದೇವಿಯರ್ ಬಯಸುವಂತಿರೆ ಪಯಣಂ ಲೇಸಕ್ಕೆ ಎನುತೆ ಮನದೊಳ್ ಭಾಸ್ಕರನಂ ಬೇಡಿ ಮತ್ತಂ ಪ್ರಕಾಶದೊಳ್— ಇದೆ ರಥಂ ಸಿದ್ಧಮಡರಿಮೆನೆ; ಅಕ್ಕ ಎಂದೊಂದು ಮೂಱಡಿ ನಡೆದು ಸಸಂಭ್ರಮಂ ಲಕ್ಷ್ಮಣಂಗೆ— ಓ ಓ! ಇರಿರ್; ಬಂದೆಂ ಪುಣ್ಯತಪೋವನಮಂ ಕಾಣ್ಬಂ ದಾತುರಂ ಪಿರಿದಾಗೆ ಮುನಿಕಾಮಿನಿಯರ್ಗೆಂದು ಕಟ್ಟಿದ ಬಾಯನಂಗಳಂ ಮಱೆತಿನಲಾ! ತಂದಪೆನೆನುತೊಳಪೊಕ್ಕಳ್.

ಅಂತು ದೇವಿ ಪುಗುವುದುಂ, ಲಕ್ಷ್ಮಣಂ ಮುಂತಿರ್ಪ ತೇರಂ ದಿಟ್ಟಿಸಿ— ಎಲೆ ಪೊಂದೇರೆ! ನೀನುಮೆನ್ನಂತಿರೆ ಮುಮ್ಮೊಯ್ಯೊಳೇಂ ದುಷ್ಕೃತಿಯಂ ಕಟ್ಟಿದೆಯೊ? ಸೂಳ್ಪಿನ ಕಾಳಗಮೆಱೆಗಳ್ ಮುಂತಿರೆ, ಕಿಳಿರ್ವ ತುರಗವಱಿಂ ಪಿಂತೆ ಪರೆ, ನಡೆವ ಕಾಲಾಳ್ಪಡೆ ಕೆಲಬಲನೊಳಿರೆ, ಚಂಡಭಂಡನಕೆಂದರಿರಾಜರೊಳೆತ್ತಿ ನಡೆವ ಗಂಡುಗಲಿಯಂ ಕುಳ್ಳಿರಿಸಿ ಕೊಂಡುಯ್ವ ನೈಪ್ರಳ್ಯಂಗೆ ನಿನಗಿಂದು ಪೆಣ್ಣಂ ಪೆಣ್ಗೊಲೆಗೆಂತಂತು ವನಕೆ ಕೊಂಡುಯ್ವುದಾಯ್ತೇ! ಮಿಳಿರ್ವ ಕೇತನಮೀಗಳೆತ್ತವೋದುದೊ? ಪಾಪಿಯೇನಾಯ್ತೋ? ಆಃ! ನಿನ್ನೀ ಭಾಗ್ಯಮೆ! ತುರಂಗಮಂಗಳಿರ! ನೀಮುಮೇನಂ ಸಂಚರಿಸಿದಿರಯ್? ಇನ್ನೆಬರಂ ರಾಯನ ಪಯಶಾಲೆಯೊಳ್ ಬಳೆಮಂ ಬಾಱ್ದಿಮೀಮುತ್ತ ದಿನಂಗಳೊಳಂತೊಂದು ಯೋಗಂ ದೊರೆಕೊಂಡುದೆ! ಎಂದಾಡಿ ಮತ್ತಂ ಬಿಸುಸುಯ್ದು ರಥಪಯಂಗಳ್— ಓ! ಕೊಲೆಗನಾನಿರೆ ನಿನ್ನರಂ ನಿಮ್ಮನೇನೆಂದು ಪೞಿವೆನೊ? ತೇರೆ! ನೀನೀಕತೆವೊಱ್ತಗಂ ಭೂಮಿಯಂತಿರೆ ಭೂಸುತೆಯಂ ಪೊಱುವೆ ಗಡ! ತುರಗಂಗಳೇ! ನೀವುಂ ಧನ್ಯರ್; ಸೀತಾಕಟಾಕ್ಷವೀಕ್ಷಣಪರಿಪೂತಗಾತ್ರರಲ್ತೆ! ಅಱಗುಲಿಯೆನಾನೊರ್ವನೆ ದೇವಿಯರನೀವೊಱ್ತುಂ ಸೇವಿಸಿಯುಮಿಂದೀಗಳ್ ಪುಲಿಕರಡಿಸಿಂಗಂಗಳ ಬಾಯೊಳ್ ತೂಂಕಲೆಂದೆ ಕೊಂಡುಯ್ವಪೆಂ. ಅಕ್ಕಟಾ! ಅಬ್ಬೆ ಎನ್ನನೇನೆಂದು ಪೆತ್ತಳೊ! ಮೋಣಯ್ಯನೇನೆಂದು ಸಾಕಿದನೊ! ಮುನ್ನೆಮೊಳಪರೆಯದೋಳೇರೇಜ್ಞಾಲಂ ವನಂಬೊಕ್ಕು ಸೀತಾಪಾದಂಗಳನುಱಿದು ಶ್ರೀರಾಮಚಂದ್ರಮನಂ ತ್ರಿಕರಣಶುದ್ಧಿಯಿಂ ಸೇವಿಸಿಯುಂ ಪಡೆದ ನೈಬಿನೇಳ್ಗೆಗಿನಿತೊಂದು ಫಲವಾಯ್ತೇ! ಪರಪರಾ! ಎನುತೆ ಚಿಂತಿಸುತಿರ್ದಂ. ಅನ್ನೆಗಂ—

ತಾನೆ ಜರದಾಳಿಯ ಬಿಚ್ಚೋಲೆಯ ಚಂದನದ ಕುಂಕುಮದ ಕಮರ್ಣಿಯ ಕಸ್ತೂರಿಯ ಕರ್ಪೂರದ ಕಮ್ಮೆಣ್ಣೆಯ ಕಾವಿಗಪ್ಪಡದ ಕರಂಡಮಂ ಕೈಯೊಳ್ಕೊಂಡು ಅಂತಃಪುರದಿಂ ಪೊಱಮಟ್ಟು ಪೊಱವಾಗಿಲ್ಗೆ ಬಂದು— ತಳ್ವದಿರ್ ಪೋಪಂ ಪೋಪಮೆಂದು ಮೈದುನಂಗೆ ಕೇಳಿಸಿದಳ್. ಆಗಳ್ ಜಿತಾತಿಕಾಯಂ ಕಾಯದೊಂದು ಕಾಯ್ಪುಂ ಬಡಲಿನೊಂದು ಸೂಡುಂ ಸೀತಾಂಗನಾವದನಶೀತಾಂಶುದರ್ಶನದತ್ತಣಿಂ ತಿಳಿವು ಮಾಪರ್ಟಟ್ಟುದೋ ಎನೆ ನೃಥಚಿತ್ತನಾಗಿ ಚೆಕ್ಕನೆ ಕೆಲನನಿಱಿದು, ಪೂಡಿದ ರಥಮುಂ ನೂಂಕಿ ಸಜ್ಜುಗೆಯ್ದು ಕೈಯ ಕರಂಡಮುಂ ತಾಂ ಕೊಂಡಿಟ್ಟು, ದೇವಿಯುರಂ ರಥಮಲಂಕರಿಪುದೆಂಬುದುಮಂತೆಯೆ ಸಂಭ್ರಮದ ನಾಟ್ಯದಿಂ ತೇರನೇಱಿದಳ್. ಇಂತು ಜಾನಕಿ ರಥದೊಳ್ ಕುಳ್ಳಿರಲೊಡಂ ಲಕ್ಷ್ಮಣಂ ಬಗೆಯೊಳೆ ಕುಲದೈವಮುಂ ಭಾವಿಸಿ, ಗುರುಜನಮುಂ ನೆನೆದು, ತ್ರಿವಿಕ್ರಮಮೂರ್ತಿಯುಂ ಸ್ಮರಿಸಿ, ಧರೆಯನೆನ್ನೆ ರಥಮುಂ ಬಲವಂದು, ಹಯಂಗಳಂ ಬೋಳೈಸಿ, ತಾನುಮಡರ್ದು, ಎಡಗೈಯೊಳ್ ವಾಗೆಯಂ ಸಡಿಲ್ವಿಡಿದು, ಬಲಗೈಯ ಕಸೆಗೋಲನಲುಗಿ ಚಪ್ಪರಿಸಿ ಜಡಿದಂ.

ಸಾಧ್ವೀ! ನಳ ನಳಕೂಬರ ಮಾತಲಿಗಳಂ ಸಾಟಿಗೆಯ್ವುದ ಸಾರಥಿಗೆಯ್ಮೆಯಿಂದು ಜಾಣ್ಮೆಯಿಂ ಸೂಟಿಯಿಂ ನೂಂಕೆ ಪಾಱಿ ನಾಡಿಂ ನಾಡಿಂಗೆ ಧೀಂಕಿಟ್ಟುವೋ ಎನೆ ಪವನಜವಮುಂ ಮುಂಚಿ ವಾಜಿಗಳೋಟಂಗೊಂಡುವು. ತಿಣ್ಣನೆ ಸುತ್ತುವ ಪಾಱುಂಬಳಿಯ ಗಱಿಗಱಿಮುಂ, ಬಿಣ್ಣನೆ ತೂಱಿ ಬೀಸುವ ಪ್ರತಿಕೂಲಪವನನೊಂದು ಘುಗುಘುಗಿಲುಂ, ದಿಮ್ಮನೆ ಕುದಿವ ಕುದುರೆಗಳ ಖುರಪುಟದ ಪಟಪಟಮುಂ, ದೇವಿಯುರಂ ಪಿಡುಪ್ರದಾಗವನ್ನೆಯುಮುಕ್ಕುಮೆಂದು ಕೂಡಿ ಮುಱುಕದ ಮೊಱೆಯಿಂ ಬೇಟ್ಟುವೆನೆ ರಾಘವಾನುಜನ ಕಿವಿಗೆ ಕಠೋರಮಾಯ್ತು. ಪತಾಕೆಯೊಂದು ರಾಘವನೂಣೆಯುಮಂ ಕಾಣೆನೆಂದು ವಿಮುಖಮಾದುದು. ಕೆಲಬಲನ ಸ್ಥಾವರಜಂಗಮಂಗಳ್ ಕಂಡುಂ ಕಾಣದಂತಿರೆ ಕಣ್ಮಱೆಯಾದುವು.

ಇಂತು ರಥಂ ಪೋಗೆಪೋಗೆ ನೋಟದಳತೆಯೊಳ್, ಹರಿಯುಂಗುಟದ ತುತ್ತತುದಿಯೊಳ್ ಪುಟ್ಟಿಯುಂ ಭಸ್ಮಧರನ ತಲೆಯುಮಡರ್ದುಂ ಪಾರ್ವತಿಗೆ ಸವತಿಯಾಗಿಯುಂ ಪೊಂಬಸಿಱಿನ ಗುಂಡಿಗೆಯುಂ ಪೊಕ್ಕು ಪೊಱಮ

ಟ್ಟುಂ ಧರೆಗಿೞಿದು ಬಂದು ಲೋಕಪಾವನೆಯೆನಿಸುತೋರಂದದೆ ಪಾತಾಳದತ್ತಣ್ಗೆ ಪೋದ ತ್ರಿಪಥಗೆ ಕಾಣಿಸಿಕೊಂಡಳ್. ಇಂತೊಪ್ಪುವ ಭಾಗೀರಥಿಗರ್ಮೆಯ್ಯೊಳಂ ಸಾರ್ವರ್ತುಕಮೆನಿಸಿ ಕಾಂಗಿನ ದಾಳಿಂಬದ ಚೆಂದೆಂಗಿನ ಸುೞಿವಾೞೆತಾೞೆಯೀಳೆಯ ಕಿಱುನಾರಂಗನ ಕಬಿವೆಯ ಪೊಸತೋಂಟಂಗಳ್ ಕಣ್ಗೆಡ್ಡವಾಗಿ ಸಾಲ್ಗೊಂಡುವು. ಅಲ್ಲಿಗಲ್ಲಿಗೆ ಪಣ್ತು ತೊಂಗಲಿಂಬಿಡಿದ ಮುದ್ದಿಗೆಯ ಕಾವಣಮುಂ, ಕಂಪುಗುವ ಬಿರಿಮುಗುಳನೊಪ್ಪುವ ಕಾಡುಮಲ್ಲಿಗೆಯ ಬಳ್ಳಿವಾಡಮುಂ, ರಾಜಿಸೆ ನೀರ್ದಾಣದೊತ್ತಿನೊಳ್ ಪಚ್ಚನೆ ಬೆಳೆದ ಹರಿತಶಾಡ್ವಲಮುಂ, ಸುತ್ತುಂ ನೀಳ್ದ ಪೊಚೆಮಂಗೆಯ ಜೊಂಪಮುಂ, ವಿರಾಜಿಸೆ ಮುಗಿಲನಿಱುಂಕುವ ಪೆರ್ಮರಂಗಳ್ ಪಂತಿವಿಡಿದೊಪ್ಪಿರೆ ನದೀಪ್ರದೇಶಂ ಚೆಲ್ವಾಯ್ತು.

ಅನಿತಱೊಳ್ ಕಣ್ಣಳತೆಯ ಪೊಚ್ಚಂ ಕೈಯಳತೆಯೊಳಾಗೆ ರಥದಿನಿೞಿದಿರ್ವರುಂ ದರ್ಶನಸ್ತುತಿಗೈದು ಮತ್ತಂ ದಾಂಟಲ್ಕೆಂದು ಅಂಬಿಗರೊಡನೆ ಬೈತ್ರಮನೇಱಿದರ್. ಆಗಳ್ ತನ್ನಂ ಮನ್ನಿಪೆಂದು ನೆವದಿಂ ಬಂದಳೆಂಬ ಸಂತಸದಿಂ ಲೋಕಪಾವನೆಯೊರ್ಮೆ ಬೞಿಯೊಳ್ ಸುೞಿಸುೞಿವುದೊರ್ಮೆ ಹೈಮಕಂಕಣದಿನೊಪ್ಪುವ ತೆರೆಗೈಗಳನಪ್ಪಲ್ಕೆಂದು ಮೇಲ್ವಾಯ್ವುದೊರ್ಮೆ ಬೆಳ್ನಗೆಯೊಳ್ ನಕ್ಕುವೊಲೊರ್ಮೆ ಮೆಯ್ವೆರ್ಚೆ ನಲಿನಲಿವುದೊರ್ಮೆ ಮೆಲ್ನುಡಿಯಿಂ ಸ್ವಾಗತಮಂ ಕೇಳ್ದುಂ ದೇವಿಯನುಪಚರಿಸುವಳೆಂಬಂತಿರೆ ಬೞಿವೞಿಯೊಳ್ ಸುೞಿಯಿಂ ಸಿಡಿವ ಸೀರ್ಪನಿಯಿಂ ಕಿಱುದೆರೆಯಿಂ ನೊರೆಯಿನುಬ್ಬರದ ನೆರೆಯಿಂ ಕಳಕಳದೊಂದು ಮೊೞೆಯಿಂ ಗಂಗೆ ಕಂಗೊಳಿಸಲೊಡಂ, ಸೀತೆ ಮನದೆ-ನೀನೆ ಗತಿಯೆಂದು ನಂಬಿವರ್ಪ ಸಜ್ಜನರ್ಗೆರ್ದೆಯೊಳಂ ಬೀವ ವೈಗೊರ್ಬಿನ ಬಿಂಕದಿಂ ತುಡುಕಿ ಮೇಲ್ವಾಯ್ವ ದುರ್ಜನರನೆರ್ದೆ ಮೆಟ್ಟುವ ನಿನ್ನ ಪೆರ್ಮೆ ಪೆಱಗೊರ್ಳವೆ? ಮುಟ್ಟೆ ಸೇವಿಪರ ಪಂಕಮನೊರ್ಮೆದಲೊಳೆ ಪಾೞ್ಗಡಿಸುತುಂ ಶಶ್ವಜ್ಜೀವನಮನೀವ ಕಾವ ಜೀವಕೋಟಿಯನೊಡಲೊಳ್ ಬಯ್ತಿಟ್ಟು ವಿಶ್ವರೂಪಿಣಿಯೆನಿಸೆ ಮೆಱೆವ ನೆಲೆಗಾಣದ ನಿನ್ನೀಮೈಮೆಯುಮಂ ಬಣ್ಣಿಸಲಾವಂ ಸಾಲ್ವನೆಂದು ಗುಣಸ್ತವನಂಗೆಯ್ದಳ್. ಸೌಮಿತ್ರಿಯುಂ ತನ್ನ ಮುತ್ತ ಪಿರಿಯರನುದ್ಧರಿಸಿದ ಭಾಗೀರಥಿಯುಂ ಬಲ್ಲಂತೆ ಪೊಗೞ್ದಂ.

ಅನ್ನೆಗಂ ಪಾಱೋಡಂ ಕರೆಮುಟ್ಟೆ ಬರೆ ನಾವಿಕರ್ಗೆ ತರಣಪಣ್ಯಮ ನಿತ್ತು ಮನ್ನಿಸಿ ಇರ್ವರುಮನುಕೂಲದೆಡೆಯ ಪುಳಿನದೊಳಿೞಿದರ್. ಆಸ ಮಯದೊಳ್ ನಿಡುವಯಣದೊಂದು ಬೞಲ್ಕೆ ಕಡಿದಾಗೆ ಬಾಯಾಱಿ ತನ್ನ ಕರಂಗಳಿಂ ಗಂಗಾಜಲಮಂ ಮೊಗೆದೀಂಟಲ್ಕೆಂದು ತೀರಿನಿೞಿದು ಬಾನ ನಡು ವೆ ನಿಂದವನೆನೆ ನಡುವಗಲ ಭಾಸ್ಕರಂ ನಿಶ್ಚಲಂ ಪೊಳೆಯುತಿರ್ದಂ. ತೊಳಗಿ ಬೆಳಗುವ ರವಿಯ ಕಿರಣಂಗಳೆತ್ತಂ ಪೊಱೆಯ ಜಲದೊಳ್ ಮಾರ್ಪೊಳೆಯ ಲೊಡಂ ಪೊಲ್ಪೊಱೆಯೆನೆ ಗಂಗೆ ಪಱಿಸುತಿರ್ಕುಂ. ನೇಸಱ ಕಾಯ್ಪಿನ ಸೂಡಿಂ ಬೆಂದು ಕುಂದಿ ನಂದಿ ಕಾಲ್ಗೆಟ್ಟು ಪವನನಾಗಳ್ ಬೆಚ್ಚನೆ ಬೀಸು ತಿರ್ದಂ. ಗಂಗೆಯ ತಡಿಯೊಳಿರ್ಕೆಲನೊಳಂ ಬಿಸಿಲ ಜಳಕ್ಕೆ ನೀರಡಸಿ ಹರಿ ಣಗಣಂ ಬಂದು ನಿಂದು ಮುಂಗಾಲಂ ನೀರೊಳೂಱಿ ಪಿಂಗಾಲಂ ನೆಲದೆ ಪಿಂತಿಟ್ಟು ಮುಸುಂಡಂ ನೀಡಿ ಕಣ್ಮುಚ್ಚಿ ನೀರಂ ಕುಡಿದು ತಣಿದು ಮರಲ್ದು ವು. ಮಱಿಗೊಣಸುಗಳೋರೊಂದೆಡೆಯ ತಣ್ಣೆೞಲೊಳ್ ಗಾಳಿಗೆ ಮೆಯ್ಯೊ ಡ್ಡುತ್ತೊಱಗಿ ಕೊಡಂಕೆಯಾಡೆ ಫೇನಮುತ್ಕಟಮಾಗೆ ಅರೆಯೆಚ್ಚಱೊಳ್ ಮೆಲ್ಕಾಡುತಿರ್ದುವು. ಸೋಗೆನವಿಲ್ಗಳ್ ನಾಟ್ಯರಂಗದತ್ತಣಿಂ ಬೀಡುಗೊಂ ಡುವು. ಖಗಂಗಳ್ ನಿಡುಮರಂಗಳ ತೂಱಲ್ಗೊಂಬನಡರ್ದು ಮೋನಮಿರ್ದು ವು. ನೀರ್ವಕ್ಕಿಗಳ್ ಜಳಕೇಳಿಗೆ ಮೊಗಸಿದುವು. ಇಂತು ಮಧ್ಯಾಹ್ನಕಾಲಮ ಪ್ಪುದುಮವರ್ ಚೆನ್ನಸುಗೆಯ ನೆೞಲ್ವಡಿಯ ನುಣ್ಮಱಲೊಟ್ಟಲೊಳ್ ಕೆಂದಳಿ ರಿಂ ನಲ್ವಾಸುಗೆಯ್ದು ಕ್ಷಣಂ ಕುಳ್ಳಿರ್ದು ಮೇಣ್ ತೀರ್ಥದೊಳ್ ಮಿಂದರ್. ಅಂತು ಮಿಂದು ಸೀತೆ ತನ್ನ ಕಿಱುವೆರಲ ಶ್ರೀರಾಮಮುದ್ರಿಕೆಯಂ ಕೈಯೊಳ್ ಕೊಂಡು ಗಂಗಾಜಲದಿನಭಿಷೇಕಂಗೆಯ್ದು ಲಕ್ಷ್ಮಣಂ ತಿಱಿತಂದ ಪುಷ್ಪದಿನ ಲಂಕರಿಸಿ ತನಿವಣ್ಗಳಂ ಸಮರ್ಪಿಸಿ ತೀರ್ಥಪ್ರಸಾದನೈವೇದ್ಯಂಗಳಂ ಮೈದು ನಂಗಮಿತ್ತು ತಾನುಂ ಕೈಕೊಂಡಳ್. ಲಕ್ಷ್ಮಣನುಂ ಗಂಗಾಜಲಸ್ನಾನಪರಿಪೂ ತಕಳೇಬರಂ ದೇವಿಯರಂ ಮೂಱುಂ ಸೂೞ್ ಬಲವಂದು ಮಣಿದು ಇತ್ತು ದಂ ಮಹಾಪ್ರಸಾದಮೆಂದು ಭಕ್ತಿಯಿಂ ಸ್ವೀಕರಿಸಿದಂ. ಅಂತಿರೆ ಬಿಸಿಲ್ ತಣಿ ಯೆ, ತಂಗಾಳಿ ಮೈದೋಱೆ, ವಿಹಗಂಗಳ್ ನೇರದಿಂ ಪಾಡೆ, ಮಾರ್ತಂಡಂ ಪ ಶ್ಚಿಮಾಭಿಮುಖನಾಗೆ, ಸೀತಾಲಕ್ಷ್ಮಣರುತ್ತರಾಭಿಮುಖರಾಗಿ ಪೊಱಮಟ್ಟರ್.

ಇಂತು ನಡೆನಡೆದು ಬಲ್ಪೊದ್ದರಂಬೋಗಿ ನಟ್ಟಡವಿಯಂ ಪೊಕ್ಕು ಕಟ್ಟ ಕಡೆಯೊಳಣ್ಣನ ಕಟ್ಟಾಣತಿಯನೊರೆದು ಲಕ್ಷ್ಮಣಂ ಭೂಮಿಜೆಯನುೞಿಸಿ ಪೋದಂ.

ಎಂಬಲ್ಲಿಗೆ
ಶ್ರೀರಾಮಾಶ್ವಮೇಧದೊಳ್ ಸೀತಾಪರಿತ್ಯಾಗವೆಂಬ ಪಂಚಮಾಶ್ವಾಸಂ
ಸಂಪೂರ್ಣಂ

॥ ಷಷ್ಠಾಶ್ವಾಸಂ ॥

ಮನೋರಮೆ–( ಕಂಬನಿಗಱೆದು ) ಆಃ! ಎನ್ನೊಡೆಯ! ನೀನುಮಿಂತು ಕಲ್ಮನನಾದಯ್ ಬರ್ತಡವೆಯೆ ದೇವಿಯಂ ಕಾರಡವಿಯೊಳುೞಿದು ಲಕ್ಷ್ಮಣಂ ಪೋದನೆಂಬೊಡೆ. ವ್ಯಸನಂಗಮಾದೊಡಮೆಂತು ಮನಮಾದುದೋ! ಮೇಣೆಂತು ದೇವಿಯುರ್ಗೆ ಕಾವಲಿರದೆ ಪೋದನೋ! ತೊಱೆದು ಪೋಪನ್ನಂ ಸೀತೆಯೇನೆಂದು ಮಱುಗಿದಳೋ! ಅಕ್ಕಟಾ! ಪೆಣ್ಗಳೊಂದು ಬಾೞ್ತೆ ಬಾೞ್ತೆಯೆ!

ಮುಪ್ವಣಂ–( ತಾನುಂ ಸುರಿವಶ್ರುಜಲಮಂ ಕಿಱುವೆರಲಿಂ ಮಿಡಿದು ) ಪ್ರಾಣೇಶ್ವರೀ! ಈ ಇರವನೇನೆಂದು ಪೇೞ್ವೆನೊ? ಅಱಿಲ್ ಕೊರಲನಾಂಕುಗುಂ. ಮುಂಗತೆಯನಾನುಂ ಪೇೞ್ವೆಂ.

ಮನೋ– ಪೆಣ್ಣೊಡಲಲ್ತೆ! ಎಂತು ಸೈರಿಪೆಂ. ಸೀತೆ ಏನಾದಳ್, ಪೇೞಿ.

ಮುಪ್ವ–(ನೀಡುಂ ಸುಯ್ದು)ಆಯ್ತು, ಕೇಳ್. ಅಂತು ಗಂಗೆಯಂ ಸ್ತುತಿಸಿ ಮುಂತೆ ಸೀತೆಯುಂ ಪಿಂತೆ ಸೌಮಿತ್ರಿಯುಮಾಗೆ ಪಯಣಂಬೋದರ್. ಸೀತೆಗೆ ವೈಖಾನಸರ ಮುತ್ತೈದೆಯರನೆಂದಪ್ಪೊೞ್ತಿಂಗೆ ಕಾಣ್ಬೆನೋ ಎಂಬೊಂದು ತವಕದಿಂ ನಡೆ ಮುಂಚಿಮುದು; ಲಕ್ಷ್ಮಣಂಗೆ ಅಣ್ಣನಾಣತಿಯನೆಂತೊರೆವೆನೋ ಮೇಣೆಂತು ದೇವಿಯಂ ತೊಱೆವೆನೋ ಎಂಬೊಂದು ಮುಗುಡದಿಂ ಪಿಂಚಿಮುದು. ಆಃ! ಚಂದ್ರಶಾಲೆಯೊಳ್ ಮಾರ್ಗಯುಂ ಶತಪಥಂಬೋಗೆ ಬಸನಱಿವ ಗರ್ಭಿಣಿ ಇಂತು ಬಿಸಿಲ ಬೇಗೆಗೆ ಕಾಪಥದೊಳನಾಯಸಂದೋ

ಇದೆ ಉಲ್ಲಸದಿಂ ನಡೆದು ಪೋಪಳೆಂದೊಡೆ ತವಕಮೆಂತಪ್ಪರುಮಂ ಮಾಡುಗೊಂಡಲ್ಲದೇಂ ಪೋಕುಂ! ಇಂತು ಮುಂಬರಿದು ಪೋಗೆಪೋಗೆ ಸೀತೆ ಪಿಂದುಳಿದು ಬರ್ಪ ಮೈದುನಂಗೆ— ಏಂ ಕಂದ! ನಡೆಯೊಳ್ ಪಿಂದಾದಯ್? ಪಥದೊಳ್ ಕಲ್ಮುಳ್ಗಳಣಮಿಲ್ಲಂ. ಇಂತಿರೆ ಪೆಣ್ಣಾಂ ಸಾಗಿವರೆ ನೀಂ ಗಂಡುಗಲಿ ನಡೆಯಲಾಱೆಯೆನೆ, ನಾಣಲೇ! ಪಿಂಚದಿರ್ ಬಾರೆನುತೆ ಬಱಿವರ್ಪನ್ನಂ ಪಯಣಂಮಾಣ್ದು ನೆರೆವರೆ ಪಂತಿಗೊಂಡು ನಡೆಯುತಿರ್ದಳ್. ಮತ್ತಂ ಪೂೞ್ತು ಪೊೞ್ತಿಂಗೆ ರಾಘವಾನುಜಂಗೆ ಕೆಲಬಸ ವನಂಗಳಂ ತೋಱಿ ಅಂದಿನ ದಂಡಕೆಗೊರೆಯಾಗದೆಂದು ತೂಗಿ ಬಣ್ಣಿಪಳ್. ಎಂತಾನುಂ ಮೊದಲ್ ನುಡಿನುಡಿಗೊಂಡು ಬಱಿಯುಮೆಡೆಯೆಡೆಗೊಂದು ಕಡೆಯೊಳ್ ಕಡೆಕಡೆಗೊಂದು ಹುಂಕಾರಮೆ ಲಕ್ಷ್ಮಣನ ಪಡಿನುಡಿಯಾಯ್ತು. ಅಂತಪ್ಪುದುಂ ಲಕ್ಷ್ಮಣನ ಮೊಗಮಂ ನಿಟ್ಟಿಸುತೆ ತಾಂ ಬೞಲ್ದಿರ್ಪನಿಸೀತನುಮಾಯಸದಿಂ ಬೇಸತ್ತನೆಂದಱಿತು ಕೆಮ್ಮನೆ ಮೆಲ್ನಡೆಯಿಂ ಪೋದಳ್. ಲಕ್ಷ್ಮಣನುಂ ಬೆನ್ನನೆ ಬೆನ್ನನೆ ನಡೆದಂ. ಆ ಮಾೞ್ಕೆಯಿಂ ಕಡುದೂರಂ ನಡೆದು ಘೋರಾರಣ್ಯಮನೊಂದಂ ಪೊಕ್ಕರ್. ಮುನ್ನಮೆ ನಡೆನಡೆದು ಬೞಲ್ದು ಬಿಸಿಲ ಜಳಕ್ಕೆ ಬಾಡಿ ಬಸವೞಿದ ಬಾೞೆ ಕುಗಳ್ ಕಂಗೆಟ್ಟಳೆರ್ದೆ*ಗುಂದಿದಳ್ ಬಾಯ್ಬಿಟ್ಟಳ್. ಹಾ! ಈ ಪೞುವನೇನೆಂದು ಪೇೞ್ವೆನೋ! ನೇಸಱ ಕದಿರ್ಗೆ ಇಂಬಿರದೆ ಕೞ್ತಲೆಗೆ ಬೀಡೆನಿಸಿರೆ ಒಂದೆಡೆಯಿಂ ಸಿಂಗಗರ್ಜನೆಯುಮೊಂದೆಡೆಯಿಂ ಪೆರ್ಬುಲಿಯ ಮೊಱೆಯುಮೊಂದೆಡೆಯಿಂ ಗಜದ ಬೃಂಹಿತಮುಂ ಕೇಳಿಸೆ ಭೀಕರಮಾಗಿರ್ಪುದು; ಕರಡಿಗಳ್ ದಾರಿಯೊಳಡ್ಡಂಗಟ್ಟಿ ಮೇಲ್ವಾಯ್ವುವು; ಪೆರ್ಮಾವುಗಳೆತ್ತಂ ಬುಸುಗುಟ್ಟುತ್ತೆ ಪರಿವುವು.

ಆಪ್ರೊೞ್ತಿಂಗೆ ಭೂಮಿಜೆ ದೆಸೆಗೆಟ್ಟು ತಿಟ್ಟನೇಱಿ ಬೆಟ್ಟನಿೞಿದು ಕೞಿದು ಅಗೞ್ತೆಯುಂ ದಾಂಟಿ ದರಿಯುಂ ಸಾರ್ದು ಮರನಂ ಪಾಯ್ದು ಕಲ್ಲನೆಡಹಿ ಮುಳ್ಳಂ ತಡವಿ ಕಣ್ಣಾಣಮುಳ್ಕಿ ಬಳ್ಕಿ ನಡೆನಡೆದು ಕಾಲೊಡೆದು ನೆತ್ತರ್ ಬಸಿಯೆ ಮೆಯ್ಗುಂದಿ ಧರೆಗೆ ಪಮ್ಮಯಿಸೆ ಸೌಮಿತ್ರಿ ಮುಂದುಗಾಣದ ದೇವಿಯನುಪಚರಿಸುತಿರ್ದಂ. ಆಗಳ್ ಕಿಱಿದಾನುಂ ಬೇಗದಿಂ ಮುಚ್ಚೆಱಿದು ದುಃಖಾರ್ತೆಯಾಗಿ ಮೈದುನಂಗೆ— ಓ ಲಕ್ಷ್ಮಣಾ! ನಡೆಯಲಾಱೆನಯ್. ನೋಡು ನೋಡಯ್ ಕಲ್ಗಡಿ ಮುಳ್ಗಳಿಂ ಕಾಲಿಂ ಬಸಿವ ನೆತ್ತರಂ.

ಬಸಿಱಿನೊಂದು ಬೇನೆಯಿಂ ನೊಂದೆನಕ್ಕಟಾ! ಮೈದುನಾ! ಎತ್ತಲುಂ ಮೊಱೆವ ಸಿಂಹಶಾರ್ದೂಲಭಲ್ಲೂಕವೃಕಸೂಕರಾದಿದುಷ್ಟಮೃಗಂಗಳ ನಿಷ್ಠುರಧ್ವನಿಗೆ ಅಳ್ಕುವೆನಯ್! ಹಾ! ಕಂದಾ! ಈ ದುರ್ಘಟಮಾದ ಕಾರಡವಿಯೊಳ್ ಋಷಿಗಳ ಪುಣ್ಯಾಶ್ರಮಮುಂಟೇ! ನಿಕ್ಕುವಂ ನೀಂ ಬಟ್ಟೆದಪ್ಪಿದಯ್. ಹಾ! ಹಾ!! ಪಸಿದ ಪುಲಿಯ ಬಾಯ್ಗಿಂದು ತುತ್ತಾದೆನಲಾ! ಹಾ ರಾಘವಾ! ಹಾ ಪ್ರಾಣನಾಯಕಾ! ಕೆಟ್ಟೆನೆಲ್ಲೈ. ಹಾ ಕರುಣಾಕರಾ! ನೀನೆ ಪುಣ್ಯಮೂರ್ತಿಯಿರೆ ಪುಣ್ಯಾಶ್ರಮಂ ಪೆಱತುಂಟೇ! ಕಮಲಮನುೞಿದುಂ ಮಧುಭ್ರಾಂತಿಯಿಂ ಕಿಂಶುಕಕ್ಕೆಱಗುವ ಭ್ರಮರಿಯಂತಿರೆ ನಿರ್ನೆರಂ ಕಾಡೊಳಾಬೆಂ. ನಿನ್ನಡಿದಾವರೆಯನುೞಿದು ಬಂದೊಡಿಂತೆನಗೀವಿಧಿಯಾಯ್ತೇ! ಹಾ! ಶ್ರೀರಾಮಚಂದ್ರಮಾ! ಮುಂತೇನಯ್ ತನಗೆ ಬಟ್ಟೆ! ಎಂದು ಬಾಯಾಱಿ ಮಱುಗಿದಳ್.

ಮೋಹನಾಂಗೀ! ಇಂತು ಪ್ರಲಪಿಸುವ ರಾಘವನರ್ಧಾಂಗಿಯಿರವಂ ಕಂಡು ಲಕ್ಷ್ಮಣದೇವನ ಬಗೆಯೊಳೇನಕ್ಕುಂ ಬಗೆಯ. ಬಂದೆಡೆಯೊಳಗ್ರಭವನ ಕಟ್ಟಾಣತಿ; ಬಂದೆಡೆಗೆ ಸೀತೆಯುತ್ತಣ ಮಱುಕುಂ. ಏವಂ? ದೇವಿಗೆ ನೀನಂಜದಿರೆಂಬೊಡುಂಟೆ? ಪುರಕೆ ಮರಲ್ವೆನೆಂಬೊಡುಂಟೆ? ತಾನೆ ಕಾವಲಿರ್ಪೆನೆಂಬೊಡುಂಟೆ? ಆಃ! ತಲೆವೋಕನೊಂದು ಮಾಟಮೇ! ಅಂತಾಗೆ ರಾಘವಾನುಜಂ ಶಶ್ವದ್ಗಳದಶ್ರುಧಾರಾಸಿಕ್ತಕಪೋಲಂ ಕಂಪಿತಕಾಯಂ ಸೀತೆಯ ಪದದೆಡೆಯೊಳ್ ಮೈಯಿಕ್ಕಿ— ದೇವಿಯರೆನ್ನಂ ಕಂಡನೆಂದು ಸಂಬೋಧಿಸದಿರಿಂ. ಪಗೆವನೆಂದೇ ಬಗೆಯಿಂ. ಇನ್ನೆವರಮಣ್ಣನಾಣತಿಯುಂ ನಿಮ್ಮೊಳೆಂದೆನಿಲ್ಲ. ನಾಡೊಳಾವನೊ ಮಡಿವಳನೊರ್ವನಭವ್ಯಮಾಗೆ ದೇವಿಯರೊಳ್ ಕುಂದಿಟ್ಟು ದೇವರಂ ಚುನ್ನಮಾಡಿದಂ ಗಡ! ಅಂತೀದೂಸಱಿನಗ್ರಭವಂ ನಿಮ್ಮಂ ವಿಪಿನದೊಳುೞಿಪಿ ಬರ್ಪುದೆಂದೆನ್ನಂ ಪೇೞ್ದಂ. ಇದೆಕೊಳ್ಳಿಂ ಸ್ವಾಮಿಕಾರ್ಯಧುರಂಧರಂ ಅಗ್ರಜನಾಜ್ಞಾನುವರ್ತಿ ವೀರಾಗ್ರಗಣ್ಯಂ ಕೃತಕೃತ್ಯಂ ನಚ್ಚಿನ ಮೈದುನನೆಂ ಲಕ್ಷ್ಮಣನೆಂ ಈ ಬಸಗೆಯುಂ ಪೇೞಲ್ಕೆಂದು ಬನ್ನಿಕ್ಕಿ ಪೊೞಲ್ಗೆ ಪೋದಪೆಂ, ಎಂದಂ.

ಸುಂದರೀ! ಅತಿಕಾಯಮೈರಿಯುಮಿರ್ದ ಸೊಲ್ಲನಾಲಿಸೆ ಬೇರದ ಹರವಸಂ ತೋಱುಗುಂ. ಅತ್ತಿಗೆಯೀವೊಂದವಸ್ಥೆಗೆ ಪೞಿಯಿಸನೆ, ಬೇಯನೆ, ನೋಯನೆ! ಜಗದೆ ದುಃಖದೊಳ್ ಪೞಂಗಿದರ್ಗೆ ಮೇಣುಂ ಮೋಕ್ಷ ಮುಃಖ

ಮೊದಮೆ ಬೀರದ ರೋಸಕ್ಕೆಡೆಮಕರ್ಮಂ. ಇಂತು ಲಕ್ಷ್ಮಣಂ ಪಾಷಾಣಕಠಿನ ಹೃದಯನಾದನೈಸೆ! ಎಂತುಂ ಕುಱು ಪೋದುದೆ? ಮನದೊಳ್ ಮಮ್ಮಲ ಮಱುಗಿದಂ, ನೊಂದಂ, ಬೆಂದಂ.

ಲಕ್ಷ್ಮಣನಂತಿರ್ಕೆ. ಸೀತೆಯಿರವನೇನೆಂಬೆನೊ! ಹಾ! ಹಾ! ( ಕಂಬನಿಯಿಡುವಂ. ) ಮುಂಗಾರ ಸಿಡಿಲ ಮೊಳಗಂ ಕೇಳ್ದು ಸುರುಂಟುವಣಂಬೆಯು ತಿಟ್ಟಗಂತೆ ಸೆಟ್ಟನೆ ಬೀಸುವ ಬಿಱುಗಾಳಿಯ ಪೊಯ್ಲ್ಗೆ ಗರೆಮುಱಿದು ಬಾಡುವ ಕರ್ಪೂರವಾಳೆಯಂತೆ ಬಮೊರ್ದಲೊಳ್ ದೇವರನಾಡಿದ ಪರುಷತರ ವಾಕ್ಯಮಾರ್ಗಣಂ ಕರ್ಣಕೋಟರಮಂ ನಾಂಟೆ ಮೊಗಂಗುಂದಿ ದುಃಖಾವೇಶದಿಂ ನಿಶ್ಚೇಷ್ಟಿತೆಯಾಗಿ ಮೇಣೊರ್ಮೆ ಹಮ್ಮುದಂಬೋದಳ್. ಅನಿತಱೊಳ್ ಲಕ್ಷ್ಮಣಂ ನೆರೆಯೊಳೊಱ್ಕುವಬರ್ಯ ನೀರಂ ಸೆಟ್ಟೆಲೆಯೊಳ್ ತಂದು ದೇವಿಯೊಳ್ ತನ್ನೊಂದು ಕಡೆವೊಱ್ತಿನ ಸೇವೆಯೆಂದು ಪಾದಕಮಲಮಂ ತೊಳೆದು ಕಣ್ಗೆ ಸುರಿದು ಕೈಗೆ ತೊಡೆದು ದೊನ್ನೆಯಂ ಪತ್ರಪುಷ್ಪಮೆನೆ ಬೈತಲೆಯೊಳ್ ಶೇಖರಿಸಿದಂ.

ಈ ಶೈತ್ಯೋಪಚಾರಸಪರ್ಯೆಗೆ ಪ್ರಸನ್ನೆಯಾದಳೆನೆ ಕಣ್ದೆಱೆದು ಕೈಯಲುಗಿ ಕಾಲ್ಮಗುಳ್ಚಿ ಸುಯ್ಲ್ಡಿದಳ್. ಇಂತು ಮೆಯ್ಯಱಿತು ಅಳವುಗಱಿದ ಮನದಱಲಿಂ—ಹಾ! ಹಾ! ಕಂದ, ಲಕ್ಷ್ಮಣಾ! ಇಂತುಮೆನ್ನೊಂದು ಬಾಳ್ಕೆಯುಸಕಱಿಮುದೇ! ಮಾವು ಬೇವಾಯ್ತೇ! ಕರ್ಪು ಕೈಪೆಯಾಯ್ತೇ! ತೆಂಗಾಯ್ ಸಿಂಗಾಯಾಯ್ತೇ! ಬಂಡೊಸರ್ವ ನೆಯ್ದಿಲ್ ಸೆಂಡುಮಲ್ಲಿಗೆಯಾಯ್ತೇ! ಇಂದಿಗೆ ಕೂರ್ಮೆಗಡಲ್ ಬಱುತುದೇ! ಹುಣ್ಣಿಮೆಯ ತಿಂಗಳಂ ರಾಹು ಕಣ್ಣೆವೆ ಮುಚ್ಚಿ ನುಂಗಿದುದೇ! ಧರ್ಮಂ ಕರ್ಮಡುಮ್ರೆಕ್ಕುದೇ! ನೀತಿ ಬಾರ್ತೆಗೆಟ್ಟುದೇ! ನನ್ನಿ ಬೆನ್ನಿತ್ತುದೇ! ಹಾ ಕಂದ! ಅನಾಥೆಯಾದೆನಯ್. ಹಾ! ಹಾ! ಮಜ್ಜೀವಿತೇಶನಿಂದೆನ್ನಂ ಕಾಱಡವಿಯೊಳ್ ಬಿಟ್ಟು ಬಾರೆಂದನೇ! ಎನ್ನೊಡೆಯಂ ತೊಱೆದನೇ! ಕೂಱಿನೊಂದು ಪಿಸುಣ್ಗೆ ನಿರಪರಾಧಿನಿಯನೆನ್ನಂ ಬಲಿಗಿತ್ತನೇ! ರಾಮಚಂದ್ರಮನಿಂದೆನ್ನಂ ಕೈಬಿಟ್ಟನೇ! ಹಾಹಾ! ಪ್ರಾಣನಾಥನಿಂದೆನ್ನಂ ಮುಟ್ಟನೇ? ಅಕ್ಕಟಾ! ಬಾಳ್ಗೊಲೆಯಾದೆನಲಾ! ಹಾ ಕರುಣಾಕರಾ! ಇನ್ನೆನಗೆ ಗತಿಯಾರಯ್? ಹಾ ನಲ್ಲ! ಮುಂತೆನಗೆ ಬಟ್ಟೆಯಾವುದಯ್? ಹಾ ಕಾಂತ! ಆವಗಂ ನೀನೆ ಗತಿಯೆಂದು

ನಂಬಿ ಸೇರ್ದರ್ಗಳಂ ಇಂತೊರ್ಮೊದಲೊಳೆ ತ್ಯಜಿಸಲ್ಕೆಂತು ಮನದಂದಯ್? ಎನ್ನೊಳಾವುದೂಣೆಯುಮಂ ಕಂಡಯ್? ಊರೊಳ್ ಮಾರಿಯೆಂದು ಮನೆ ಪ್ರೇೞಿಯುಂ ಮಾೞುಗುಡುವರೇ! ಪೊಲ್ವೞಿತುದೆಂದಾವಂ ಪೊಯ್ವರೇ? ನಿರ್ವ್ಯಾಜಮುಸಗನೊರ್ವರ್ಂ ತೆಗೞ್ದನೆಂಬಬಲೆಯನಿಂತು ಕಾಡಡವಿಯೊಳ್ ಬಿಡುವರೇ! ಹಾ! ಮನೋವಲ್ಲಭ! ಆಂ ನಿನ್ನರ್ಧಾಂಗಿಯಲ್ತೆ! ಪಟ್ಟದರಸಿಯಲ್ತೆ! ಎನ್ನನುೞಿದೆಂತರೆಮೆಯ್ಯೊಳಿರ್ಪಯ್! ಎಂತು ಪಟ್ಟವಣೆಯನೇಱಿಪಯ್! ಹಾ ರಾಘವಾ! ನಿನ್ನಡಿಗಳಾಣೆ ಎನ್ನೊಳ್ ಕೊಱತೆಯಿರೆ ಮನ್ನಿಸಿ ಕಾಪ್ಪದಯ್. ಕೈಮುಗಿದು ಬೇಡುವೆಂ, ಬೇಡುವೆನೆಂದು ಪಲುಂಬಿದಳ್.

ಮತ್ತಮೆಱೆಯನಂ ನೆನೆದು— ಹಾ! ರಮಣ! ಅಂದೆಳಮೆಯ್ಯೊಳೆನ್ನ ಮದುವೆಗೆಂದು ನೆರೆದ ರಾಯರ ಸೊರ್ಕಂ ಮುಱಿವಂತಿರೆ ಬಂದು ಹರನ ಬಿಲ್ಮುಱಿದ ನಿನ್ನ ಬೀರಮುಮಂ, ನಿನ್ನ ಘನಶ್ಯಾಮಲಕೋಮಲಗಾತ್ರಮುಮಂ, ನಿನ್ನ ಸೊಬಗುಗುವ ಮುಖಕಮಲಮುಮಂ, ನಿನ್ನ ಸೊಗಸುದೋಱುವ ಸವಿನುಡಿಯ ಜಾಣ್ಮೆಯುಮಂ, ನಿನ್ನ ನಡೆವ ಬಿಂಕದ ಗಾಡಿಯುಮಂ, ನಿನ್ನ ಕರ್ಣಾಂತವಿಶ್ರಾಂತಸರಳಸುಲೋಚನದರೆನೋಟವ ನೋಟಮುಮಂ, ಆ ನಿನ್ನ ಕಿಱುನಗೆಯ ಬಗೆಯುಮಂ ಕಂಡು ಸೋಲ್ತು ಮೆಚ್ಚಿದೆನಲ್ತೆ! ಅಂದಿಂದಿಂಗಮೆರವಿಲ್ಲದ ಕಡುಗೆಡೆಗಿಂದು ನೆರವಿಲ್ಲದ ಬಿಡುಗಡೆಯಾಯ್ತೇ! ಆಃ! ಚೆನ್ನ! ಅಗಳೆ ವನವಾಸಮಂ ಪೋಪಂದು ಅರೆಗಳಿಗೆಯಾನುಂ ನಿನ್ನಂ ಬಿಟ್ಟಿರಲಾಱೆನೆಂದು ಬೆಂಬತ್ತಿದೆನಲ್ಲೆ. ಈಗಳೆಂತಯ್ ಚಮೂರುಪಂಚಾಸ್ಯ ಭಲ್ಲೂಕ ವೃಕಸೂಕರಭೀಕರಮಾದೀನಟ್ಟಡವಿಯೊಳೊರ್ವಳೆ ನಿನ್ನನಗಲ್ದು ಯಾವಜ್ಜೀವಮುಮಿರ್ಪೆಂ? ಹಾ! ಕರುಣಾಕರಾ! ಮುನ್ನಂ ವಿಪಿನದೊಳ್ ನಿಚ್ಚವಯಣಂಬೋಪಂದು ಆನೆನಸುಂ ಬಳಲ್ದಿರೆ ಬಲ್ಬಬಿಲ್ದಳೆಂದು ಪತ್ತೆ ಸಾರ್ದು ಕೈವಿಡಿದು ಕರ್ನೆಲಬಿಲ್ಗುಯ್ದು ತೊಡೆಯೊಳ್ ಕುಳ್ಳಿರಿಸಿ ಮೆಯ್ದಡವಿ ತನ್ನ ಚೇಲಾಂಚಲದಿಂ ಬೆಮರ್ತೆನ್ನೀಮೊಗಮಂ ಪೂಸಿ ಬೀಸಿಯುಂ ಬಾಯಾಱೆ ನೆಟ್ಟನೆ ತಿಳಿಗೊಳನ ಪನಿನೀರಂ ಕಮಲದೆಲೆಯೊಳ್ ತಂದಿತ್ತುಂ ನಿಡುವಯಣಕ್ಕೆ ಬೇಸಱಲೊಡಂ ಬಿನದಮಂ ತೋಱಿ ನಗುವಂತು ಮಾಡಿಯುಂ ಕಲ್ಲೆಡಮೆ ನೊಂದಳೆಂದು ಮಱುಗಿಯುಂ ನಿಲೆ ನಿಂದುಂ ಪೋಗೆ ಪೋಗಿಯುಂ ನಗೆ ನಕ್ಕುಂ ಉಪಚರಿಸಿನ ನೀನೀಗಳ್

ಎಂತು ಕಲ್ಪನನಾಗಿ ಮಾಲತಿಯಂ ಮೊಕ್ಕೆಯಿಂ ಸಿಂಗರಿಸಿದಯ್! ಹಾ! ರಾಮಚಂದ್ರಮ! ದುಷ್ಟರಾಕ್ಷಸನೆಂದು ಪ್ರಸಿದವಸಿ ಎನ್ನಂ ಕಳ್ದುಯ್ಯಲೊಡಂ ಬಿಡಲಾಱದ ಮೋಹದಿಂ ಮಱುಗಿ ಕೊರಗಿ ಪ್ರಹುಂಕಿಸಂದು ತ್ರಿಬ್ಬಣಂತು ಪಿರಿದಾಯಸದಿಂ ಕಡಲ್ಗಣೆಗಟ್ಟಂ ಕಟ್ಟಿ ರಕ್ಕಸರೊಳ್ ಕಾದಿ ಮೊನೆಯೊಳ್ ಗೆಲ್ದು ಎನ್ನಂ ವನಕಟ್ಟುವ್ರೊಡೆಂದೇಂ ಮರಳ್ಚಿದಯ್? ಹಾ! ಕಾಂತ! ನಿನ್ನಂ ಮಗುಳ್ದೆನ್ನೆಂದಿಂಗೆ ಕಾಂಬೆನೋ! ಎಂದಿಂಗೆ ನಿನ್ನ ಸವಿನುಡಿಯನಾಲಿಪೆನೋ! ಇನ್ನೆಂದಿಂಗೊಡಗೂಡುವೆನೊ! ಹಾ! ಹಾ! ಆಬಿನ್ನಣದ ಆಬೆಡಂಗಿನ ಆಸೊಗಸಿನ ಆಗಾಡಿಯ ಆಸಿಂಗರದ ಆನಟನೆಯ ಆಅಂದದ ಆಹಾವದ ಆಭಾವದ ಆನೋಟದ ಆಬೇಟದ ಆಕೂಟದ ಸುಗ್ಗಿಯನೆಂತು ಮಱೆವೆನೋ! ಹಾ! ರಾಮಾ! ಎಂದು ಸೀತೆ ಬಾಯಬಿಡುತ್ತಿರ್ದಳ್.

ಇಂತು ಬಣ್ಣಿಸಿ ಬಣ್ಣಿಸಿ ಮಱುಮಱುಗಿ ಬಿನ್ನನಿರ್ದ ಮತ್ತಂ ಲಕ್ಷ್ಮಣನೊಳ್– "ಕುಱುಂಬನ ಕುತ್ತಕ್ಕೆ ಕುಱಿಯ ಪಿತ್ತಮೆ ಮದ್ದಾಯ್ತು." ನೀನುನಿಬರ್ ಮೈದುನನಿರ್ದುಮೆನಗೀಪಾಡುಗೈದಿರೇ! ಅಣ್ಣಂಗೆ ನಯಂಬೇಳ್ದಿರೇ! ತುಂಬಿದ ಬಸಿಱಿದುಳ್ಳೆ, ಬಡಲನೆಂತಾಂ ಪಿಡಿದಿರ್ಪೆಂ? ಅತ್ತೆವಿರಿಂತಿದ ಕೊರ್ಪ್ಪಿದರೆ? ನಚ್ಚಿನ ಬಂಟಂ ಹನುಮಂತಂ ಕೆಮ್ಮನಿರ್ದನೆ? ಸುಮಂತ್ರಪ್ಯಗೆ ಮನಂ ಬಂದುದೆ? ವೃದ್ಧಂ ಜಾಂಬವಂ ತಡೆಯದಾದನೆ? ಹಾ! ಹಾ! ಹೆಣ್ಣೆನ್ನೊಂದು ಬಾಳ್ಕೆ ಬಾಳ್ಕೆಯೆ? ಎಂದು, ಬಱಿಯಂ ತನಗೆ ತಾಂ ತಿಳಿದು— ಆಃ! ನಿನ್ನನ್ನರನೇಕೆ ನಿಷ್ಕಾರಣಂ ದೂಱುವೆನೊ? ಹತಕರ್ಮ ಬಾಯ್ದಾಱಿ ಮಱುಗುವೆನೋ? ಇಂತಿದೇಂ ಕಾನನರೋದನಮಾಗದೇ? ಪೂರ್ವಜನ್ಮದೊಳಾವ ದಂಪತಿಗಳೊಳ್ ಭೇದಮಿಕ್ಕಿದೆನೋ! ಆವ ಹದಿಬದೆಯಂ ಪಱಿದೆನೋ! ಬೊಮ್ಮನೆನ್ನ ಹಣೆಯೊಳ್ ಬರೆದುದಿಂತುಟ್ಟೈಸೆ! ಇಂತು ರಾಘವನೆನ್ನನುಱಿದೊಡನಾನೆಂತುಮಾತನಡಿಯಂ ಬಿಡೆಂ. ಆತನೆ ಎನಗೆ ಗುರುವಾತನೆ ನಾಥಂ ಆತನೆ ಜೀವನಾತನೆ ಬಾಂಧವಂ. ರಾಘವನ ಶಾಸನಂ ನಾಡಂ ಸಮಂತು ಕಾಡಂ ಕೊಱುತ್ತಿಲ್ಲದಾಳ್ದುಮತ್ತೆ. ಆನೊರ್ವರ್ಗಳ್ ಪೇೞ್ಳ್? ಎನ್ನ ಪೂರ್ವಸಂಚಿತದಿನಿಂಬಟ್ಟಿಯದಾದುದಲ್ಲ ಆತನೇಗೆಯ್ದುಂ; ಕರುಣಾಸಾಗರನಲ್ತೆ! ನಂಬಿದರಂ ಕಾವನೆಂಬ ಬಿರುದುಳ್ಳನಲ್ತೆ! ಆತನಡಿಯೊಳ್ಮೆಯೊಂದಿರ್ದಪೆಯ್! ಎಂದು ಮತ್ತಂ ಕಣ್ಬಸಿದುಂಬಿದಳ್.

ಇಂತಾಡಿದ ಜಾನಕಿಯ ಮಾತಂ ಕೇಳ್ದು ಲಕ್ಷ್ಮಣನುಂ ಮಱುಗುತೆ ಕಿಱೆಕ್ರಗನಾಗಿ ನಿಂದಿರ್ಪುದುಂ; ಸೀತೆ ಮೇಣ್ ಸೌಮಿತ್ರಿಗೆ–ಕಂದಾ! ಏತರ್ಕೆ ನಿಂದಿರ್ಪಯ್? ತಳ್ವಿದನೆಂದು ನಿನ್ನೊಳಗ್ರಜಂ ಕೋಪಿಸನೆ? ಅಣ್ಣನಾಜ್ಞೆ ಸಂದುದಲಾ! ಪೋಗು ಪೋಗೈ, ಎನುತೆ ಪೇೞ್ದಳ್. ಅಗಳ್ ತನ್ನಂ ತಾಂ ಪೞಿದು ದೇವಿಗೆ— ಅವನಗಲ್ದೆಳಗಱುವಿನಂತಿರ್ದೆನ್ನೊಂದಿರವಾಯ್ತೇ! ಅಣ್ಣನಾಣತಿಯೆಂಬೊಂದು ನೇಣ್ ಗೋಣಂ ಬಿಗಿದೀೞ್ದಂ. ಆಗಳೆ ಬಲ್ಲಗೆಯೊಳ್ ಬೇಡಿದೆಂ. ದೇವರ ಚಿತ್ತಕ್ಕೆ ಬಾರದಾಯ್ತು! ಎನ್ನ ಬಿನ್ನಪಂ ಪಾಪೆಯುಂ ತುೞಿಲ್ದೈದಂತಿರೆ ಪೋಚ್ಚಱಿದಾಯ್ತು. ದೇವಿ! ಎನ್ನೊಂದು ಮುನ್ನೊಡಲ ಅಱಿಗೆಯ್ಮೆಯ ಬೆಸುಗೆಂಬಿನೀಗಳೀ ಪಾತಕಕ್ಕೆ ಕೈನೀಡುವನ್ನೊಡಾದವಾದೆಂ. ಅಂತಿರೆ ಗೋರಿಟ್ಟೈ ಸೈಪಂ ದುರ್ವಿಷಯಂಗಳ್ಗೆ ಸೂಱೆಗೊಟ್ಟು ನಿರಯದ ಬಾಗಿಲ್ಗಾಪಿಗೆಂದು ದಕ್ಷಿಣಾಭಿಮುಖನಾಗಿ ಪೋಪನಂತೆವೋಲ್ ಪುಣ್ಯರೂಪಿಣಿಯುಂ ಕಾಡಿಗೊತ್ತಿಯಿಟ್ಟು ಪಾೞ್ವೀದ ನಾಡಿಂಗೆ ಮಗುೞ್ದಿಪೆಂ. ಮಾತೇ! ಇಂತಿರ್ಪೆನಂ ನಿರ್ಘೃಣನಂ ಕುಲಘಾತುಕನಂ ದುಷ್ಟನನುದ್ಧರಿಸೌ, ಎಂದು ಸೀತೆಯಕಾಲೊಳ್ ಕೆಡೆದಂ.

ಇಂತಡಿಗೆಱಗಿದ ಮೈದುನನಂ ಸಂತಮಿಟ್ಟು ಏೞೇೞ್ ಕಂದ, ಕೈವಿಡಿದ ನಲ್ಲನೇ ಮುನಿವೆಱೆಯೊಳಾರೇನೆಂಗುಂ. ನಿನ್ನೊಳೇನಪರಾಧಂ? ಪೆಣ್ಣಿನಿಸಿ ಪುಟ್ಟಿದೆನ್ನಯ ದೋಷಂ. ಪೊೞ್ತೞಿವುದಲ್ತೆ. ಪೋಗಯ್. ನಿನ್ನೊಳ್ ಪೆಱತೇನೆಂಬೆನೊ? ನಿನ್ನಂ ನಿನ್ನಣ್ಣಂ ಕೇಳ್ದೊಡೆ, ನಿನ್ನಾಣತಿಗಬಲೆ ಮಱುಗಿದಳಿಲ್ಲ; ಮಾನುರ್ಡಿದಳಿಲ್ಲ; ಮುನಿಸಾಂತಳಿಲ್ಲ; ಬೆರ್ಚಿದಳಿಲ್ಲ; ಕೂಱ್ಕದಿಗೊಂಡಳಿಲ್ಲ; ದೂಱಿದಳಿಲ್ಲ; ನೀನೇ ಗತಿಯೆಂದು ನಿನ್ನಡಿಯಂ ನೆನೆಯುತೆ ಕಡೆಪೊೞ್ತಂ ಪಾರುತಿರ್ಪಳೆಂದು ಬಿನ್ನಯಿಸಯ್. ಅತ್ತೆವಿರ್ಗೆ— ನಿಮ್ಮ ಪರಕೆಗೊಂಡು ಬಾರದಿರ್ಪೆನಮೆನಗೀವಿಧಿ ಬಂದುಗೂಡಿದುದು. ಈಗಳ್ ನುಡಿಯಿಂದಮೆ ಮಣಿದು ಕ್ಷಮೆಯುಂ ಬೇಡುವೆನೆಂದೆನ್ನ ನುಡಿಯೊಳೆ ಪೇೞಿಯ್. ಊರ್ಮಿಳಾದ್ಯರಂ— ನಿಮ್ಮೊಳ್ ನಿಧಾನಿಸದೆ ಬಂದೊಂದಾಣೆಯುಮಂ ಮನ್ನಿಸಿ ತನ್ನನೆಂದೆಂದುಂ ಮಱೆಯದಿರ್ಪುದೆಂದು ಕೇ

ಳ್ದಳೆಂದು ಕೇಳಯ್. ಮೇಣಯ್ಯೆಂ ಬೞಿವೞಿಯಿತ್ತ ನಲ್ದೊಡವುಗಳೊಳ್ ಎಕ್ಕಸರಂ ಶ್ರುತಕೀರ್ತಿಗೆ ದುಕ್ಕಂಡವ ಪಿಂಡುಗಂಕಣಂ ಮಾಳವಿಗಾಜಕ್ಕಸರಂ ನಿನ್ನರಸಿಗೆ; ಮಿಕ್ಕಿರೆಯಿಂ ದಾಸಿಯರ್ಗೆ ಪರ್ಚುಗುಡ್ಯೆ. ಅಂತುಮಲ್ಲದೆಯುಂ, ಎನ್ನ ಬಲ್ಗಾಲದ ನಚ್ಚಿನ ಸಲ್ಗೆಳದಿ ಚಂದ್ರಮತಿಗಾ ಎನ್ನ ಚಂದಿರಗಾವಿಸೀರೆಯುಂ ಬಣ್ಣಗುಪ್ಪಸಮುಂ ಹಬ್ಬದ ನಿಚ್ಚವಚ್ಚವುನೆಲ್ಲಮುಂ ಮೆಚ್ಚನಿತ್ತು ಆಂ ಮುನ್ನಂ ಬಾಸೆಯಿತ್ತ ಪೂರ್ಣಪಾತ್ರಮೆಂದೆ ಮಱುಗದಂತಿರೆ ಪೇೞ್ವೆ. ನಿನಗೆನ್ನೊಳ್ ದಯೆಯಿರ್ಕುಮಪ್ಪೊಡೆ ಲೋಗರನುವಿಂಗೊಂದು ದಮ್ಮಣಿಯನೇರ್ಪಡಿಸ್ಯೆ. ಮೇಣ್ ಮುನಿಸತಿಯರ್ಗೆಂದು ತಂದು ರಥದೊಳುೞಿವಿಟ್ಟ ಬಾಯಿನಮನೊರ್ವರ್ ಮುತ್ತೈದೆ ಪಾರ್ವತಿಗೆ ಕುಡಿಸ್ಯೆ. ಆ ಎನ್ನ ಪೂಜೆಯ ಕವಿಲೆದುಱುವಂ ಆವೆನ್ನ ಮುದ್ದಿನೆಳಗಱುವಂ ಬಡವಾಗದಂತು ಪೇೞ್ದು ನಿನ್ನಬ್ಬೆಗೆ ಕೈವರ್ತಿಸ್ಯೆ. ಇನಿತೊಂದೆನ್ನೀಕಡೆಗಾಲದೆ ಪುಟ್ಟಿದ ಬಯಕೆಯುಂ ಸಲಿಸ. ನಿನಗೆ ಮೇಲಕ್ಕೆ! ಮೇಣ್ ಪಯಣಂ ಸೊಗಮಕ್ಕೆ! ಎಮ್ಮೆಲ್ಲರ್ಗೆ ಶ್ರೀರಾಮನಡಿದಾವರೆಯೊಲ್ಮೆಯೊಂದು ವಜ್ರಪಂಜರಮಕ್ಕೆ! ಪೋಗ್ಯೆ, ಎಂದು ಪರಸಿ ಲಕ್ಷ್ಮಣಂಗೆ ಪಯಣಕ್ಕಾಣತಿಗೊಟ್ಟಳ್.



ಆಗಳ್ ಸೌಮಿತ್ರಿ ಡೋಲಾಯಮಾನಮಾನಸನಾಗಿ ದೇವಿಯರಂ ಬಲವಂದು ಕೈಮುಗಿದು ದೆಸೆಸಳರ್ಗೆ— ಈಕೆ ನಿಮಿಕುಲದೆ ಪುಟ್ಟಿದ ರಾಜಯೋಗಿಯಪ್ಪ ಜನಕನಣುಗುಗುವರಿ, ರಕ್ಕಸರ ಬಳಗಮುಂ ಸದೆದು ದೆಸೆವಲಿಗೊಟ್ಟು ನಿಮ್ಮಂ ಪೊರೆದ ಶ್ರೀರಘುರಾಮನ ಪಟ್ಟದ ರಾಣಿ. ಎಮ್ಮಣ್ಣನಾಣತಿಗಿವಳಂ ವನದೊಳಿರಿಸಿ ಪೋಪೆಂ. ಪೂರ್ಣಗರ್ಭಿಣಿ. ನೀಮೆಲ್ಲರ್ ಕಾವಲಿರ್ದು ಕಾಯಿಮೆಂದು; ಭಾಸ್ಕರಂಗೆ- ಎಲೆ ಆದಿತ್ಯ! ನಿನ್ನ ಕುಲವಧುವಿವಳ್ ನಿನ್ನ ಬೞಿವಳ್ಳಿ ಮಡಲ್ವೊಡಿವಳ್ ತಾಯ್ವೇರ್. ಅಂತದಱಿಂ ಇವಳೊಳ್ ದಿಟ್ಟಿಯಿರ್ಕೆ! ಎಂದು; ವನದೇವಿಗೆ— ಎಲೆ ಶಾಕಂಭರಿ! ಇದೆಕೊಳ್ ಭಾಗ್ಯಲಕ್ಷ್ಮಿ ನಿನ್ನ ಕೆಳೆತನಕ್ಕೆಳಸಿ ಬಂದಿರ್ಪಳದುಕಾರಣಂ ನೀನುಮಿವಳುಮೊಡಗೆಳದಿಯರಾಗಿ ಸಂತಮಿರ್ಪಿರೆಂದು ಕೇಳಿಸಿ ಅಗಲ್ದು ಪೋಪನೆಂಬೊಂದು ಬೇಸಱಿಂ ಖಿನ್ನನಾಗಿ ತನ್ನನೆ ನೋಳ್ಪ ದೇವಿಯರ

ವಂ ನೆನೆನೆನೆದು ಗಾಳಿಗೆ ಮಾಱೊಡ್ಡಿ ಪೋಪ ಪತಾಕೆಯ ಕೌಸುಂಭಾಂಬರಮಂತಿರೆ ಮನಂ ಪಿಂದುಱಿಯೆ ನಡೆವಟ್ಟೆಯುಮನೆ ಪಲವುಂ ಪಂಬಲೊಂದು ಪಂದುಗಂ ಬೆಟ್ಟಿತಾಗೆ ಬೀೞ್ಕೊಂಡಂ.

ಮುದ್ದಣಂ— ಅತ್ತಲಯೋಧ್ಯಾನಗರಿಯೊಳ್ ಜನ್ನಗುದುರೆಯುಂ—

ಮನೋರಮೆ— ಸುಡು ಸುಡು ನಿನ್ನ ಜನ್ನಗುದುರೆಯುಂ! ಆಕತೆಗೀಗಳ್ ಪೊತ್ತೇ? ಆಃ! ಸೀತೆಯೇನಾದಳೆಂತಿರ್ದಳೆಂದು ಪೇೞಯ್?

ಮುದ್ದಣಂ— ಬಾಲೇ, ಆಯ್ತಾಯ್ತು. ಅಂತು ಲಕ್ಷ್ಮಣಂ ಬಿನ್ನೈಸುತ್ತೆ ಪೋಪ್ಪುದುಮಾದೆಸೆಯನೆ ನೋಡಿ ನೋಡಿ ದುಃಖಂ ಮಱುಗೊಂಡೋರಗೆಯು ತನ್ನೊಂದು ಬವಣೆಗೆ ಮೆಳ್ಪಟ್ಟು ಚಿಂತಿಸಿ ತನ್ನೊಳ್ ತಾಂ— ಆಃ! ನಿಮಿಕುಲಕಂ ಚಲಕಂ ಗಂಡನೆನೆ ಪೆಸರ್ವಡೆದು ಪಱಿನುಡಿವೆಂದಿರ ಬೈತಲೆವಣಿಗೆ ಬೆಲೆಗಟ್ಟಿ ಬ್ರಹ್ಮರ್ಷಿಗಳ್ಗಂ ತತ್ತ್ವಮಂ ಬೋಧಿಪ್ಪೊಂದು ಜಾಣ್ಮೆಯಿನೇೞ್ಗೆವೆತ್ತ ಜನಕರಾಜಂಗೆ ಮುದ್ದುಮಗಳೆನಿಸಿಯುಮಖಂಡಮಂಡಲೇಶ್ವರರ್ ಮಣಿಗೊಂಡು ಪದುಮಾಬ್ಜ್ವಸಂ ತನ್ನ ಜಸದೆಸಕದಿಂ ನೆಗೞ್ತೆವೆತ್ತ ಸಾರ್ವಭೌಮರಾಘವನಂ ಕೈವಿಡಿದು ಪಟ್ಟದರಸಿಯಾಗಿಯುಮಂತಪ್ಪದ ಸಱಿಮಿಂಡಿಯರ[illegible]ಲ್ಲೈಸಿಯುಂ ಬಟ್ಟೆನೆಗೀಗಳಿಂತೊಂದು ವಿಧಿ ಬಗೆದುದೇ! ಹಾ! ಆ ಎನ್ನರಸನ ಅಂಗಸಂಗಮಿನ್ನೀಕಾಲಕುಂಟೇ! ಅಯ್ಯೋ! ಆ ಸಿರಿಯಾಪಟ್ಟಮಂಚದಾ ಅಂಚೆದುಪ್ಪುೞ ನಲ್ಲಾಸಿನಾಪಟ್ಟೆಕೌಳುಡೆಯಾ ಪುಷ್ಪದಾಗಂಧದಾಸಿರಿಯ ಸುಖಾನುಭವಮನಿನ್ನೆಂತು ಮಱೆತಿರ್ಪೆನೋ? ಆಃ! ಆಃ!! ಇಂದ್ರಚಾಪದ ಪಾಂಗಿನಿಂ ಪಲತೆಱವಣ್ಣದಿಂ ರಂಜಿಪ ಆ ಎನ್ನ ಪೂದೋಂಟದ ಸೊಬಗೇ! ಆ ಎನ್ನ ನೀರಾಟದ ತಿಳಿಗೊಳನೊಂದು ಸೊಗಸೇ! ಹಾ! ಎನ್ನ ಮುದ್ದಂಚೆ! ಅಗಲುವೆನ್ನ ಮಂಜೀರದ ಮಂಜುನಾದಂ ಕೇಳ್ವೆ ಪಿಂದೆಸೆಯೊಳೆ ಕೇಂಕರಿಸುತೆ ಬಱಿವರ್ಪ ನೀನಿಂದಾರಂ ಬಱಿಸಾರ್ವಯ್? ಹಾ! ಎನ್ನ ಪಂಜರದ ಸಾರಿಗೆಯೇ! ಪಾಲನೆಱೆವಳಾವಳೋ? ಹಾ! ಹಾ! ಕಾಲದೊಂದು ಗತಿಯೇ! ಓ! ಏತಱ ಮಾತೊ? ನಿಮಗೇಂ ಸೊಗಸೇಸೊ? ಬರ್ಕೆ ಪೋಗೆ ಪೆಱಳೊರ್ವಳ್ ಕುರ್ಗಂ. ಆನೊರ್ವಳೆ ಬಡವೆ ಬಱುವೆಯಾದೆಂ. ಉಃ! ಪೋಕೆ ಪಱಿ

ಪೞಿಲಿನೇಂ? ಇವು ಭೋಗಂಗಳ್ ನಶ್ವರಂಗಳಲ್ತೆ! ಅನೆರಾಯುಗುವರಿಯಾಗಿ ಪುಟ್ಟೆನೆ? ಕಾಡಂ ಪೊಕ್ಕು ರಕ್ಕಸರ ಬಂದಿಗೊಳಗಾಗೆನೆ? ದೇವಿಯಾಗೆನೆ! ಈಗಳೀಬವಣೆಗೆ ಬಾರೆನೆ? ಸಾಜಂ ಸುಖದುಃಖಂಗಳ್ ಪಗಲಿರುಳಂತೆವೋಲ್ ಲೋಕದೊಳ್ ಪರಿವರ್ತಿಸಿರ್ಕುಂ. ಇವಱೊಳೆನಗಲ್ಕಱು ಪೋಯ್ತು. ಶ್ರೀರಾಮನೊಲ್ಮೆಯೊಂದೆ ಶಾಶ್ವತಂ. ಆತನ ನಾಮಸ್ಮರಣೆಯೆ ಎನಗೆ ಬಟ್ಟೆ. ಹೇ ಕಲ್ಯಾಣರೂಪ! ನೀನೆನ್ನಂ ಕೈವಿಡದಿರಯ್. ಹೇ ಕರುಣಾಕರ! ದೆಸೆಗೆಟ್ಟೆನ್ನಂ ಮಱೆಯದಿರ್. ಹೇ ಜಗದೊಡೆಯ! ಪೆಣ್ಣೆನ್ನೊಳ್ ಕರುಣೆಯಿರಲಯ್. ರಾಮಾ! ರಾಮಾ!! ರಾಮಾ!!! ಎಂದು, ಧ್ಯಾನದೊಳಿರ್ದಳ್.

ಅಪ್ಪೊೞ್ತಿಂಗೆ ವೇದಪುರುಷನೇ ಮಂಗುಪಿನೊಂದು ಪರಿಜಿಂ ಮೆಯ್ಗೊಂಡು ನಡೆತಂದನೋ ಎನೆ, ಮೂಡಿವರ್ಪ ನೇಸಱ ಪಸುಳೆವಿಸಿಲ ಬೆಳ್ಗಿಂಪಿನ ಪೊಸಪೊಂಗರಿಂ ಕಣ್ಗೊಳ್ವ ಪೂರ್ವಾದ್ರಿಕೂಟಮೆಂಬಂತಿರೆ ಮುಂದಲೆಯೊಳಱೆಗೆಂಪಿನ ಬೆಳ್ವೆಳಗಿಡಿದ ಜಡೆಮುಡಿ ವಿರಾಜಿಸೆ, ಮಾಗಿಯ ಬೆಳ್ಮುಗಿಲಾಗಸದಂತಿರೆ ಭಸಿತೋದ್ಧೂಳಿತಲಸಿತಲಲಾಟಂ ಕಣ್ಗೊಳಿಸೆ, ಇನ್ನೀ ತನಸಿದಿರ್ಚಿ ಕೈಮಾತೆನೆಂದು ಆಣೆಯಿಟ್ಟು ಕಾವನರೆಮುರಿದ ಕರ್ವುವಿಲ್ಲೆಂಬಂತಿರೆ ಶಿಥಿಲಮಾಗಿ ಜೋಲ್ವ ಪುರ್ವೆಸೆಯೆ, ಜ್ಞಾನದೃಷ್ಟಿಯು ನೆರವೊಪೊಱನೋಟಮೇವುದೆಂದು ಮುಱಿದು ನೋಲ್ಪಿನನ ತುಱುಗೆಮೆಯುರದೆಱೆದ ಕಣ್ಣೊಚ್ಚತ್ತಮಾಗೆ, ತನ್ನೆಚ್ಚಿಯ ಮುಱಿನೋಟದ ವಿಶ್ರಾಂತಿಯೆಡೆಯೆದೆನೆ ನೀಳ್ದ ನಾಸಾಪುಟಂ ರಂಜಿಸೆ, ಭಾರತಿಯ ಪದ್ಮಪೀಠಂಬೋಲ್ ಮುಖಕಮಲಮೊಪ್ಪಿರೆ, ಗೊರವನ ಬೆಳ್ಗೊರಲೊಳಮರ್ದ ಹಾಲಾಹಲದ ಕರ್ಪೆಳಗುಮಱುಗಲ ಮಾೞ್ಕೆಯಿಂ ಶಂಖಧವಳಕಂಠದೊಳ್ ಪತ್ತುವಿಡಿದೇಕಮುಖರುದ್ರಾಕ್ಷಮೊಂದು ತೆಱಂಬೊಳೆಯೆ, ಜೋಗಗೆಳೆಯರೆಣ್ಬರೇಱಿವರ್ಪನ್ನ ಮಱುವಗೆಗಳಿಂ ಪೊಸೆದ ನಿಚ್ಚಣಿಗೆಯೆಂಬಂತಿರಿರ್ಬದಿಯೊಳಮೆಲ್ಗಳ ಸಾಲ್ಗಳ್ ತೋಱೆ, ಸಡಿಲ್ದಮಾಂಸದಾಪಿನ ಪಲವುಂ ಪುರಿಗಳೆಂಬಂತೆವೋಲ್ ಸೆರೆಗಳೆತ್ತಂ ಪಡಲ್ತಿರೆ, ನಡುವಿನೊಳುಟ್ಟ ವಲ್ಕಲಂ ತೊವಲುಡೆಯುಮ ಕೃತ್ತಿವಾಸಂಬೋಲ್ ಮನೋಜ್ಞಮಾಗಿರೆ, ವಾಲ್ಮೀಕಿ ತಾನಾಬಟ್ಟೆಯೊಳೆ ಬರುತುಮಿರ್ದಂ.

ಇಂತು ಬರುವರುತೆ ಕಟ್ಟಿದಿರೊಳ್ ಅರೆವೆಱೆಗಲ್ಲವುಂ ಕರಪಲ್ಲವದೊಳೞುಱಿ ಮುಂಬಗಲ ಪೆಱೆಯಂತೆ ಕಳೆಗೆಟ್ಟುಂ, ತನ್ನೊಂದು ಕಣ್ಬೊಗರಿ ಕಾಳಿಂದಿಯ ಕರ್ಮಡುವಿನೊಳೋಲಾಡುವ ಬಾಳೆಮೀನಪಾಂಗಿನಿಂ ಪೊಳೆಯುತಿರೆ ಎತ್ತಂ ನೋಲ್ಪ ಪೆಣ್ಣೊರ್ವಳೆ ಕಂಡಚ್ಚರಿವಟ್ಟಾರವಳೆಂದಱಿವೊಡೆಂದು ಮುಟ್ಟಯಿಸಿ ಬಂದು— ಆರಾ? ವನದೇವಿಯಂತಿರ್ದೀವನದೊಳೊರ್ವಳೆ ಇರ್ಪುದೇಂ? ಎಂದು ಬೆಸಗೊಂಡಂ. ಈನುಡಿಗೆ ಸೀತೆ ಮನದೊಳೊಂದು ಭಯದಿಂ ಗಕ್ಕನೆೞ್ದು ಪಿಂಜರಿದು ಮುನ್ನಿನೊಂದು ಬನ್ನಮಂ ನೆನೆದು ರಕ್ಕಸರ ಮಾಯೆಯೆಂದೇ ಬಗೆದು- ಎನ್ನಾಣೆ! ರಾಮನಾಣೆ! ಪತ್ತೆಸಾರದಿರ್ ಸಾರದಿರ್, ಎಂದು ಕಿಸುಗಣ್ಣಿ ಮರನಂ ಮಱೆವೊಂದಳ್.

ಇಂತಪ್ಪುದುಮಾಪ್ರತ್ತಿನ ಪುತ್ರಂ ಆವಳೊ ಬಾಲೆ ತಲ್ಲಂಕಂಗೊಂಡಳೆಂದು ಪುಸುಮಾತಿನೊಳ್- ಬಾಲೆ! ಆಂ ಅನ್ಯರಲ್ತು; ತಪಸಿಗಳ್. ಕಾಡೆನಾಡಾಗೆ ಈಯಡೆಯ ಆಶ್ರಮದೊಳೆ ಇರ್ಪೆವು. ಅಂಜದಿರಾ! ನೀನಾರ್ಗೆ? ಪೆಸರೇನೆಂದು ಪೇೞಾ, ಎಂದುಕೇಳ್ದಂ.

ಇದರ್ಕೆ ಸೀತೆ— ರಾವಣಂಬೋಲ್ ಪುಸಿತಪಸಿಗಳ್ ಪಲಂಬರೊಳರ್; ಸವಿನುಡಿಯಿಂ ಬೋಸರಿಸಿ ಮಾಯೆಗೈವರ್. ನಿಮ್ಮಂದಿಗರೊಳೇಂ ಮಾತೊ? ಶ್ರೀರಾಮನಾಣೆ! ಸನಿಯಂ ಬಾರದಿರ್ ಎಂದು, ಮಾರ್ನುಡಿವುದುಂ; ಮುನಿಪಂ ರಾಮನಾಮಮಂ ಕೇಳ್ದು ಸಂದೆಗದಿಂ ತಾನುಂ— ದೇವೀ, ರಾಮನಾಣೆ! ತನ್ನಾಣೆ! ಅಂಕವಡುವವಸಿಯಲ್ತು, ವಾಲ್ಮೀಕಿ ಕಣಾ! ಬೞಿವೋಕಂ; ನಿರ್ಜನಪ್ರದೇಶದೊಳಿರ್ಪೀಬಾಲೆ ನಿನ್ನನಱಿವೊಡೆಂದೆ ನುಡಿಯಿಸಿದೆಂ ಪೆಱತೆಣಿಸದಿರೆಂದು ಪ್ರಾರ್ಥಿಸಿದಂ.

ಆಗಳ್ ಭೂಸುತೆಗೆ ಮನದ ಭಯದ ಕವಲ್ ಪತ್ತುವಿಡೆ, ಸಂದೆಯಮನಸುಂ ಪೆಡಂಮೆಟ್ಟೆ, ದಿಟದ ನಂಬುಗೆಯಿಂಬುಗೊಳೆ— ಅಂತಪ್ಪೊಡೆ, ನೀಂ ಮಾನ್ಯಂ. ನಿನಗೆಱಗುವೆಂ. ತಂದೆ! ಎನ್ನಿರವನೇನೆಂಬೆನೊ? ಜನಕರಾಜಂಗೆ ಮಗಳಾಗಿ ದಶರಥಂಗೆ ಸೊಸೆಯಾಗಿ ಶ್ರೀರಾಮಂಗೆ ಪಟ್ಟದರಸಿಯಾಗಿ ಬಾೞ್ದೆನ್ನ ಬರ್ದುಂಕು ಈಗಳ್ ವನದೊಳಾಯ್ತು! ರಕ್ಕಸನೊಳ್ ಬಂದಿವಾೞ್ದೆನ್ನನೊಪ್ಪುಗೊಂಡನೆಂಬೊಂದು ಲೋಕಾಪವಾದದ ದೂಸಱಿಂ

ಶ್ರೀರಘುಜನೆನ್ನನಡವಿಯೊಳ್ ಬಿಸುಟ್ಪುದೆಂದು ಲಕ್ಷ್ಮಣಂಗೆ ಬೆಸಸಿತ್ತು ಕಳುಪಿದನೈ! ಅಂತುಲಕ್ಷ್ಮಣನಿಂಗಳ್ ಉೞಿದು ಪೋಪಿನಂ ಕಾಡಿಂಗೆ ಕೋಳುವೋದೆನೆಂಬೊಂದು ಭೀತಿಯಿಂ ಬೆದಱಿ ಬೆಬ್ಬಳವೋಗಿ ಬನಗಲ್ತಲೆಗೆ ಕಱಂಗಿದೀವಮರಂಗಳಿಱುಂಬಿನೊಳ್ ದೆಸೆಗೆಟ್ಟು ವನಪಿಶಾಚದಂತಿರೆ ಇದೆಕೊಳ್ ಮಱುಗುತಿರ್ಪೆಂ, ಎನ್ನೀಅಱಿವೆಯ್ಯುಂ ಬಾವಿದಾವ್ರಗಳ್ಗೊಪ್ಪಿಸಿ ಎನ್ನಿನಿಯನಂ ಮಗುೞ್ದುಂ ಕಾಣಲಕ್ಕುಮೆಂದೊಡೇವೆನೈ! ಅಱುದಿಂಗಳ ಗರ್ಭಿಣಿಯುಪ್ಪಿನಂ ಆತ್ಮಹತ್ಯಭ್ರೂಣಹತ್ಯದೋಷಂಗಳೊರ್ಮೊದಲೊಳ್ ಬಂದೊದವುಗುಮೆಂದೆ ಮಾಣ್ದೆಂ. ಹಾ! ಎಂದು, ಆತನ ಪಾವಕಾನತೆಯಾದಳ್.

ಇಂತೆಱಗಿದಳಂ ಕಂಡು ಮುನಿಪಂ—ಅಂತಾಗದಾ! ನಿಕ್ಕುವಂ ನೀಂ ಮಕ್ಕಳಂ ಪಡೆವುದುಂಟು. ಮಱುಗದಿರ್. ಎಡೆಯೊಳ್ ಎಮ್ಮಾಶ್ರಮಂ. ಜೋಗವಟ್ಟಿಗೆಯಾಣೆ! ರಾಘವನಾಣೆ! ಮಗಳೆಂದೆ ನಿನ್ನಂ ಸಲಪುವೆಂ. ಏೞ್ದಾ, ಎಂದು ಸಂತಯಿಸಿ ಭಾಗ್ಯಲಕ್ಷ್ಮಿಯುಂ ಕೊಂಡುಯ್ವ ದೀನನಂತಿರೆ ಸಂತಸದಿಂ ತನ್ನಾಶ್ರಮದತ್ತಗ್ಗೆ ಕರೆದುಯ್ದಂ.

ಇಂತು ಸೀತೆ ಕಿಱುದಾನುಂ ದೂರಂಬೋಗೆ ತನ್ನ ಕೂಡುವಳಗದ ನಿಚ್ಚದಂಪುಗದೊಂದು ಮಿಡುಗಿಂ ನಂಜುಂಡ ಬಾನ್ನವಿರಂ, ಗಜಮುಖನ ಬಿರಿವೊಡೆಯ ಬಾವಂ, ಅಱುಮೊಗನ ತೇರ ಸೋಗೆಯುಂ, ಪಾರ್ವತಿಯ ಸಿಂಗಮುಂ, ತನ್ನ ಬಸವನಂ ಇನ್ನಾನುಂ ಪಗೆಯುಂ ಮಱೆತು ಸಂತಂ ಪುದುವಾೞ್ವುದೆಂದು ಬುದ್ಧಿವೇಳಿಕೊಡಮುದುವೆ ವಿರಾಗಮುಂ ಪುಟ್ಟಿಸೆ ಪ್ರಪಂಚದೊಳ್ ತನಗೇತಱ ಸುಖಮೆಂದು ತಾವೊಂದುಗೂಡಿ ತಪಶ್ಚರ್ಯಕ್ಕೆಂದು ವನಂಬೊಕ್ಕು ನಿರ್ವೈರದಿನಿರ್ಪವೆನೆ; ಬಂದೆಡೆಯೊಳ್ ಬೈಗಿನ ಕಿಱುಮುಗಿಲೊಡ್ಡಂ ಕಂಡುಲ್ಲಸದಿಂ ಪೊಂಗಿ ಇಡಿಕಿಱಿದ ಪೀಲಿಗಳಂ ಬಿದಿರ್ಚಿಯುಮಣಿಗಟ್ಟಿ ಕೇಗಿ ತನ್ನೊಂದಾಡಂಬರದಿಂ ಮಯೂರಂ ತಾಂಡವಕ್ಕಾರಂಭಿಸಲೊಡಂ ತಾನುಂ ವಾಲ್ಮೀಕಿಯೆನೆ ಪುತ್ತಿನೊಂದು ವ್ಯಾಳಂ ಪೊಱಮಟ್ಟು ತೀಡುವ ತೆಂಬೆಲರ್ಗೆ ಮೆಯ್ಯೊಡ್ಡಿ ಪರಿದು ರಂಗಂಬೊಕ್ಕು ನೆರೆಯೊಳ್ ಮಂಡಲಾಸನಂಬಲಿದು ಕುಳ್ಳಿರ್ದು ನಾಟ್ಯಂ ಮನಂಗೊಂಡುದೆನೆ ಪೆಡೆಯೆತ್ತಿ ತಲೆದೂಗಿ ಸಭ್ಯಂಬೋಲ್ ನಿಟ್ಟಿಸುತಿರೆಯುಂ, ಕೆಲಸಾನುಂ ಕಾಲದಿಂ ಸಮಾ

ಧಿಷ್ಠನಿರ್ಪುದುಂ ಪ್ರೇಱುಗೆ ಬಳೆವ ಬಿಂಬಲ್ಜಡೆಯೆನೆ, ಮತ್ತಮೊಂದೆಡೆಯೊಳ್ ಗೋಣ್ಣವಿರ್ ಮುಮ್ಮುಡಂಬರಂ ಮುಸುಂಕಿರೆ ಪಟ್ಟ್ಯಂದು ಮುತ್ತು ಸಿಂಗಕ್ಕೆ ತನ್ನ ಕೇಸರಮೆ ಜಾಲಮಾಗಿ ಪರಿಣಮಿಸೆ ಕಾಲ್ ಸಿರ್ಕಿನೊಳಾಗೆ ಮಗುೞ್ದುಂ ಮಗುೞ್ದುಮೇೞಲಾಟಿಸಿಯುಮಾಱದಿರೆ ಪೊರಳ್ದುರುಳ್ವುದಂ ಬೞಿಯೊಳ್ ಕಡವೆ ಕೇಳ್ದು ನೆಟ್ಟನಾಯೆಡೆಗೆ ಬಂದು ತನ್ನೆರಡುಂ ಶೃಂಗದಿಂ ಸಿರ್ಕುಂಗೊಂಡಲಂ ಬಿಡಿಸುತಿರೆಯುಂ, ಇಂತಿದು ಪುಣ್ಯಾಶ್ರಮದ ಮೈಮೆಯೆಂದು ಬಗೆವಂದು ಸಂತಸಂದಾಳ್ದಳ್. ಅಂತು ಮುಂತೆ ಮುಂತೆ ಬರ್ಪುದುಂ—

ಎಮ್ಮಂದಿಗರೆಂತಂತು ಪಸುಗೆಗೊಂಡುಂ ಪಡಿಯುನೆ ಚರುಚಾರುಗಂಧಸುಂ ಕವರ್ದನೆಂಬೊಂದು ಪ್ರರುಡಿಂ ಜನ್ನಗೊಂಡದ ಬೇಳುರಿ ಚಟಚಟಿಸಿ ಕಿಡಿಕಿಡಿವ್ರೋಸ್ರಮುಂ, ಕಿಸಿಸಿಂ ಕಿಚ್ಚಿಂ ತಳ್ತುಯ್ದುಂ ಧೂಮಧ್ವಜಮುಂ ಮುರಿದುಮಿಂಬಗೆಯುಂ ಮುನಿಗೆ ದೂಪಲ್ಕೆಂದಿದಿರ್ದಂದನೆನೆ ಚರುಪುರೋಡಾಶಂಗಳ ನಱುಗಂಪ್ರವೊರೆದ ಪಾವನಪವನಂ ತೀಡೆ. ಆಗಳ್ ಪವಿರ್ಭಾಗಮುಂ ಕೈಕೊಳಲ್ಕೆಂದು ತಪೋವನಕಿೞಿದು ಬಂದಿಂದಿರನ ಮುಗಿಲ್ದೇರೆನೆ ಹೋಮಧೂಮಂ ನಾಲಾಳ್ಗೆಱುನೊಳ್ ಚೆದಱಿ ತಳ್ತಿರೆ. ಮುಂದೆಸೆಯೊಳ್ ಗೋರಂಟೆಯ ಮರುಗದ ದವನದ ಪಸುರ್ದನೆಯ ಗೊಜ್ಜಿಗೆಯ ಜಾಜಿಯ ಮುಡಿವಾಳದ ಮಡಿಯ ಎಡೆಯೆಡೆಯ ಸಂಪಗೆಯ ಸುರಯಿಯ ಬಕುಳದ ಸಿರಸದಸುಗೆಯ ಮರಂಗಳನಪ್ಪೈಸಿದ ಕಾಡುಮಲ್ಲಿಗೆಯ ಮೊಲ್ಲೆಯ ನೀಲಗಂಧಿಯ ಬಳ್ಳಿಗಳೆಡೆಯನಿಡಿಕಿಱಿದ ಬಂದುಗೆಯ ಪಾದರಿಯ ಪತ್ತಿಯ ಗಿಡುಗಳಪಂತಿಗಳ್ ತೋಂಟದೊಳ್ ಸ್ರಾವೆಂಮುಂ ಮುಱಿಯದೆಸೆವ, ಪಣ್ ಎಂದುಂ ಬೀಯದ ಫಲವೃಕ್ಷಂಗಳೆತ್ತಂ ತುಱುಗಿ ಬೆಳೆದಿರೆ ಘ್ರಸುಧ್ವನದಸಿನದ ಮೆಂದುಂ ಕಿವಿಗಿನಿದಂ ಕಱೆಯೆ, ಋಷ್ಯಾಶ್ರಮೋಪವನಂ ಸೀತೆಗೆ ಕಣ್ಗೆವಂದತ್ತು.

ಅಂತುಮಲ್ಲಲ್ಲಿಯುಂ ಮಟ್ಟಿಯ ಮುಟ್ಟಿಗೆದರ್ಳಿಯ ಸಮ್ರದಿಗಳನಳತೆಯೊಳ್ ಕೊಯ್ದುರ್ಪಿನಾಱಿಂ ತಲೆಮ್ರೆೞೆಗಟ್ಟಿ ತರ್ಪ ವಟುಗಳಿಂದೆಯುಂ, ಬೆಳ್ಳನತ್ತದ ಬನಪ್ಪಿಯ ಪಚ್ಚೆಲೆಯನೊಟ್ಟಿ ಗಱಿಕೆಯ ತೊಳಚಿಯ ದಾಂಗುಡಿ

ಯುಂ ಚಿವುಂಟ ಬಾೞೆವಟ್ಟೆಯೊಳ್ ಮೂಡಿ ತರ್ಪ ಬಾಲವಟುಗಳಿಂದೆಯುಂ, ಕುಂದದ ಪಾರಿಜಾತದ ಮಂದಾರದ ಪಾಟಳಿಯ ಬಿರಿಮುಗುಳಂ ತಿರಿತರ್ಪ ಮುನಿಕನ್ಯೆಯರಿಂದೆಯುಂ ಪುಣ್ಯಾಶ್ರಮಂ ಮನೋಹರಮಾಯ್ತು.

ಮತ್ತಮಲ್ಲಿ ಉಟಜಾಂಗಣದೊಳೊಂದೆಡೆಯೊಳ್ ಸಂಜೆಯ ಶುದ್ಧಿಗೆಂದು ಪೊಡೆಯೊತ್ತೆ ಬಾಲಂ ನಿಮಿರೆ ಲಂಡಮನುಚುರ್ವಾಕಳಿಂ, ಆಕಳ ಗೋಮಯಮಂ ಕಲಂಕಲ್ಕೆಂದು ತಮ್ಮ ಕರಪುಷ್ಕರದಿಂ ನೀರಂ ತಂದು ತುಱುಂಕುವ ಮಱಿಯಾನೆಗಳಿಂ, ಮಱಿಯಾನೆಗಳ್ ಕಲಂಕಿದ ಪೆಡೆಯಂ ತುದಿವಾಲದಿಂ ಬಱಿವ ಚಮರಿಮಿಗಂಗಳಿಂ, ಚಮರೀಮೃಗಂಗಳ ಸಾರಣೆಯೊತ್ತುಗೊಂಡು ನೆಲನ ತಣ್ಣಸಾಱೆ ತಮ್ಮ ಮೊಗದ ನರೆನವಿರಿನುದುರ್ತೆ ಪೋಪ ಗಂಡುಗರಡಿಗಳಿಂ, ಕರಡಿಗಳ್ ಸಜ್ಜುಗೈದ ನೆಲನೊಳ್ ರಂಗವಲ್ಲಿಯಂ ಬರೆವ ಕಗೋರ್ಡಗಂಗಳಿಂ, ಮತ್ತಮದೊಂದೆಡೆಯೊಳ್ ಎಕ್ಕಲನಗುಟ್ದು ಗೋರಿಟ್ಟ ಗೆಱಿಸಿಂ, ಸಿಂಗನಾಯ್ದು ಪರಿಪಿಡುದಿರ್ವಣ್ಣಂ, ಮೇಣೊಂದೆಡೆಯೊಳ್ ಶೌಚದ ಸ್ನಾನದ ವೇದಪಾರಾಯಣದ ಸಂಧ್ಯೋಪಾಸ್ತಿಯ ಜಪದ ತಪದ ಸಂಕೀರ್ತನೆಯ ಉಪದೇಶದ ಯೋಗಾಭ್ಯಾಸದ ಪುರಾಣಶ್ರವಣದ ಋಷಿವರ್ಗದಿಂ ಸೊಗಯಿಸಿದು.

ಇಂತೊಪ್ಪುವಾಶ್ರಮಮಂ ಕಂಡು ಸಂತಸಮಾಗೆ ವಾಲ್ಮೀಕಿವೆರಸು ಸೀತೆ ಸಂಜೆಯೊಳ್ ಸಂಧ್ಯಾದೇವಿಯಂತಿರೆ ಮುನಿ ತೋಱಿದೆಲೆವನೆಯಂ ಆಶ್ರಮವಾಸಿಗಳ್ ಪೊಗೞೆ ದೇವರ್ಕಳ್ ಕೊಂಡಾಡೆ ಬಂದು ಪ್ರವೇಶಿಸಿ ಮುನಿಯ ಪಾಲನೆಯೊಳ್ ಸೊಗದಿನಿರ್ದಳ್.

ಎಂಬಲ್ಲಿಗೆ

ಶ್ರೀ ರಾಮಾಶ್ವಮೇಧದೊಳ್ ವಾಲ್ಮೀಕಿದರ್ಶನಂ ಷಷ್ಠಾಶ್ವಾಸಂ

ಸಂಪೂರ್ಣಂ.

## ಸಪ್ತಮಾಶ್ವಾಸಂ.

ಮುದ್ದ:— ಎನ್ನ ಕೊಂಡಾಟದ ಬಾಳ್ವೆಣ್ಣವೆ! ಇಂತು ಭೂಜಾತೆ ಪ್ರಾಚೇತಸನೊಳ್ಮೆಗಾಪಿಂ ಪುಣ್ಯಾಶ್ರಮದೊಳಿರ್ಪಿನಮಿತ್ತಲ್ ಸಾಕೇತನಗರದೊಳ್ ಸೀತಾರಾಮಂ ತನ್ನಬಿರ್ದಿನ......

ಮನೋ:— ನಲ್ಲ! ಏನಾತೊ? ಸೀತೆಯನಂತುಟೀದುಮೇತಕ್ಕೆ ಸೀತಾರಾಮಂ. ಪೋ! ಮಾಣ್! ಅವಂಗಿನ್ನೆತ್ತಣ ಸೀತೆ? ಅಪ್ಪೊಡಿನ್ನಾ ಕಲ್ಲೆದೆಯಂ ರಾಮನೊ ಭೀಮನೊ? ಛೀ.

ಮುದ್ದ:— ಎನ್ನ ಕೈಗಳಸವೆ! ಇಂತುಮೆಂಬರೆ! ಶ್ರೀರಾಮಂ ಕಲ್ಲೆದೆಯನೆ! ಆ! ಬಳಿಕ್ಕಮಾತನ ಪ್ರಳಾಪಮಂ ನೀಂ ಕೇಳ್ದುದಿಲ್ಲಂ.

ಮನೋ:— ಏಂ ತಾನೆ ತಳೆವ್ರೋಯ್ದುಂ ಮಱುಗಿಪನೆ?

ಮುದ್ದ:— ರಾಮಂ ತಳೆವ್ರೊಯ್ದನೇಂ? ತಾಂ ಯಶೋಧನನಪ್ಪಿನಂ ಲೋಕಾಪವಾದಭೀತಿಗಡವಿಗಟ್ಟಿದನಲ್ಲದರಸಿಯೊಳೇಂ ಪಗೆಯೆ?

ಮನೋ:— ಪಗೆಯೇಂ ನಗೆಯೇಂ? ಬಡವೆಯೊರ್ವಳ್ ಕಾಡಿಂಗಾದಳ್ಳೈಸೆ?

ಮುದ್ದ:— ಇಂತಿದನೆ ನೆನೆನೆನೆದಬಿಂಬಂ ಪಲುಂಬಿದಂ.

ಮನೋ:— ಏಂ ತನಗೆ ಪೆಱರ್ ಪೆಂಡಿರಿಲ್ಲೆಂದೆಯೆ?

ಮುದ್ದಣಂ:— ಪರಿಹಾಸಂ ಸಾಲ್ಗುಂ ಕೇಳ್. ಏಗಳ್ ಲಕ್ಷ್ಮಣಂ ಸೀತೆಯಂ ಕೊಂಡುಯ್ದನೆಂಬ ವಾರ್ತೆ ಕೇಳಿಸಿದುದಾಗಳ್ ಪಶ್ಚಾತ್ತಾಪದಿಂ ರಾಘವನ ಮನಮೊಳಗೊಳಗೆ ಬೆಂದು ಬೇಗುದಿಯೊಳಿರ್ದತ್ತು; ಮೇಣೆಂಮ ವನದೊಳಿಱಿಪಿ ಬಂದೆನೆಂದನಂದೆ ಬಮ್ಮೆಯೆ ಉರ್ಕಿಪುದು.ಮಾತೇಂ?

ರಾಘವನಿಂತೊಂದು ದುಗುಡದಿಂ ತನ್ನೊಳ್ ತಾಂ— ಆಃ! ಬಿದಿಯೇ! ಎನ್ನೊಳಮಿಂತು ಮಾಡುವರೇ? ಎನ್ನ ಬಾಳ್ಕೆಯಿಂತು ನಂದಿಮುದಲೇ! ಏಂ ಮಾಜೆಯೊ! ಸೊಗಂಬಾಳ್ವೆರೊಳ್ ಮಿಱ್ತುವಂ ಸಂಚುಗೆಯ್ದುಂ, ಘನುವಾಳ್ವೆರೊಳ್ ಪಗೆಯುಂ ದೂಪಟ್ಟೆಯುಂ, ತಾಂ ಪಿಡಿದಿರ್ಪರೊಳ್

ಕಾನನಂ ಕಾವಲ್ಮಾಡಿಯುಂ ನೋಟನಾಟಂಗಳ್ಗೆ ತೋಱಿಪನಲ್ತೆ! ಓ! ನಿನ್ನನೇಂ ಬಯ್ವೆಂ! ನೀನುಮೆನ್ನಂತಿರೆ ನಾಣ್ಣುಡಿಯೊಳ್ ನೊಂದ ನೈಸೆ! ಹಾ! ಲೋಕಾಪವಾದದೊಂದೇಬಿತ್ತರದ ಬಲ್ಮೆಯೇ! ಎಂತಪ್ಪರುಮಂ ಬಿಟ್ಟರಯೇ! ನಿನ್ನೀದೂಸಱಿಂ ಮದುವೆನಿಂದ ಮಡದಿಯುಂ ಬಿಟ್ಟಿಪುರ್ದಾಯ್ತು. ನಿಷ್ಕಳಂಕೆಯೆಂದಱಿಯೆನೆ? ಪಾವನೆಯೆಂದಱಿಯೆನೆ? ಹಾ! ಹಾ! ಸೀತೆ! ಎನ್ನಂ ಕೈವಿಡಿವಿನಂ ನಿನಗೊದವಿದ ಭಾಗ್ಯಮೇ! ಎನ್ನನೆ ವರಿಪೆನೆಂದಾವ ದೈವಮುಂ ಮುಂ ನೋಂತೆಯೊ! ಅಕ್ಕಟಾ! ಕೈವಿಡಿದಿನ್ನೆಬರಮೊಂದು ದಿನಮಾದೊಡಂ ಸೊಗಮುಂ ಕಂಡುದುಂಟೇ! ಎಳವೆ ವನಸಂಚಾರದೊಳಾಯ್ತು; ಬಳಪಿ ರಕ್ಕಸರ ಬಂದಿಯೊಳಾಯ್ತು; ಕಟಿವೆ ಪುಲಿಕರಡಿಗಳನಗುರ್ವಿಸಿದ ಕಾರಡವಿಯೊಳಾಯ್ತಲ್ತೇ! ಅಯ್ಯೋ! ಅಬ್ಬೆಯಿಲ್ಲದ ಪೆಣ್ಮಗಳನೊರ್ವಳಂ ಕಾಡಿಗೊತ್ತೆಗೀವೆನೆಂದೇಂ ಮದುವೆನಿಂಬೆನೇ! ಆಃ! ಚೆನ್ನೇ! ನಿನ್ನಾಪಾತಿವ್ರತ್ಯಮನಾಸೌಜನ್ಯಮನಾವಿನಯಮುಮನೆಂತೊ ಮಱೆವೆಂ. ಮುನ್ನಮಯ್ಯನ ನನ್ನಿಗೆ ವಿಪಿನಕ್ಕೆ ತೆರಳ್ವನ್ನಮಾಂ ಪೊಱಮಟ್ಟೆನೆಂದು ಕೇಳ್ದುಮಗಲ್ದಿರಲಾಱದೊಂದುಮೋಹದಿಂ ಬೆಂಬತ್ತಿದ ನಿನ್ನಂ ತಕ್ಕೊರ್ಮೆಗೆಟ್ಟುಂ ಪೇೞದೆಯುಮಾನೆ ಪೞಿವಿಂಗಟ್ಟಿದೆನೇ! ಕಿಱುನಗೆಯ ಮೋಡಿಯೊಳೊರ್ಮೆ ತಾಂ ಬೞಲ್ದಂ–ನಲ್ಲ! ಬೞಲ್ದೆಯ! ಕುಳ್ಳಿರ ಎಂದು ಪಾಸಱೆಯಂ ತೋಱಿ ತಾನುಮೊತ್ತಿ ನೋಳ್ಪಮುಂಡಿಸಿ, ನೆವದ ಬಣ್ಣನೆಯೊಳ್ ನುಡಿಯಿಸಿ, ಕೂಡೆವ್ರೀದಂದಿನ ಪಸುಱದ ದಿನಂಗಳನಿನ್ನುಂ ಮಱೆತೆನಿಲ್ಲಕ್ಕಟಾ! ಮಗುೞ್ದೊರ್ಮೆ ನಗರಂಬೊಕ್ಕು ತಾಂ ಪಟ್ಟದರಸಿಯಾದೆನೆಂಬೊಂದು ಸಂತಸದಿಂ ತನ್ನೋರಗೆಯ ಕೆಳದಿಯರ್ಗೆ ತೊೞ್ತಿಗೆ ಮೆಚ್ಚನಿತ್ತುದೇಂ ಲೆಕ್ಕಕೊಳಗೆ! ತನ್ನ ಬಾವದ ನಲ್ಮೆಯೊಲ್ಮೆಯ ನುಡಿಯೊಳರವೆಂಡಿರ ಪೆರ್ಮೆಯ ಸೊರ್ಕಿನ ಕೊರ್ವಿನ ಬಿಂಕಮುಣ್ಟೇ! ಆಃ! ಸಿಗ್ಗಾಳ! ಆಗಳುಂ ಸುಶೀಲದಿನೆ ಬಾಗಿ ನಡೆವ, ಕಜ್ಜಮಿರೆ ನುಡಿಗೊಂದು ನುಡಿವ, ನೆವದಿಂ ನಗುವ, ಹುಸಿಮುನಿಸಿಂ ಮುನಿವ, ತಿಳಿಪೆ ತಿಳಿವ, ನಿನ್ನ ರತಿರಹಸ್ಯಮನಿನ್ನೆಂತು ಮಱೆವೆನೋ! ಬಲ್ಗಾಲದಿಂ ತನಗೆ ಮಕ್ಕಳಾದುದಿಲ್ಲೆಂದು ಪೆರ್ಚುಂ ತವಿಸಿ ನೋಂಪಿಯಂ ನೋಂತಳ್ಗಡಾ! ಎಂತೆಂತೊ ದೈವಮನುಗ್ರಹಿಸಲೊಡಮೀಪೆಱ್ತಿಗೀಗತಿ

ಯುಮಾಯ್ತು. ಅಕ್ಕಟಕ್ಕಟಾ! ಆಗರ್ಭಿಣಿಯೆಂತು ಪ್ರಸವವೇದನೆಯುಂ ಸೈರಿಪಳೊ! ಇನಿಯಂ ಕೈವಿಟ್ಟನೆಂಬೊಂದು ದುಗುಡಮೊಂದು; ವನವಾಸದ ಬವಣೆಯೆರಡು; ಕಾಳ್ಮೃಗಂಗಳತ್ತಣಿಂ ಭಯಂ ಮೂಱು; ಬಱುವೆಯೆಂಬೊಂದು ಬೇವಸಂ ನಾಲ್ಕು; ಬಸಿಱ ಬೇನೆಯೈದು; ಅಯ್ಯೋ! ಈ ಉಮ್ಮಳಿಕ್ಕೆಂತಸುವಿಡಿದಿರ್ಪಳೋ! ಹಾಹಾ! ಲಕ್ಷ್ಮಣಂ ಕಾಡೊಳಱುಪಿ ಮರಳ್ವನ್ನಮೇನೆಂದಳೋ! ಎನಿತ್ತೞಲ್ದಳೋ! ಎಂತು ಸುಮ್ಮನಾದಳೋ! ಮೇಣುಂ ತಾಂ ಬೆನ್ನನೆ ಬರ್ಪೆನೆಂದಳೋ! ಎನ್ನಂ ಬಯ್ದಳೋ! ಈಗಳೇನಾದಳೋ! ಹರಹರಾ! ಆತನೊಳಮೀತೆಱನನೇನೆಂದು ಕೇಳ್ವೆನೊ! ಎನಗಾವ ಮೊಗಮೊ! ಸುಡು ಸೀತೆಯಿಲ್ಲದೀನಾಡಂ! ಹಾ! ನಾಯಿಕೇ! ಹಾ! ರನ್ನೆ! ಆಮಿರ್ವರುಂ ಕಾಡೊಳಾದೆವಲ್ತೆ! ಎಮಗಾವುದು ಬಟ್ಟೆ! ರಾಜ್ಯದಿನೇಂ? ಐಸಿರಿಯಿನೇಂ? ಇಂತಿವು ಪೆಱವರೊಡಮೆಯಲ್ತೆ! ಈಗಳಾನುಂ ಪೆಱರ್ಗೆ ಮಾಱುವೋದೆಂ; ಇನ್ನೆನಗೆ ಸಂತಸಮಾವುದೊ! ಸೊಗಮಾವುದೊ! ಕೆಳೆತನಮಾವುದೊ! ಬಾೞ್ತೆಯಾವುದೊ! ಹಾ! ಹಾ! ಜಾನಕೀ! ಎಂದು ಪಲವಗೆಯೊಳ್ ಬಣ್ಣಿಸಿ ಮಱುಗಿದಂ. ಅನಿಗಾಲಮೀವಿಯೋಗದುಃಖಮುಂ ನೆನೆನೆನೆದು [illegible]ಳಯಿಸುತ್ತಿರ್ದಂ.

ಇಂತಿದು ಕಣಾ! ಸೋದರರಂ ಸೊಮ್ಮುಗಿಡಿಸಿದುದು, ಅಗಸ್ತ್ಯನಂ ನೆಲೆವಸ್ಸಿಸಿದುದು; ಸಾಜಮಲ್ತೇ ಪತಿಪತ್ನಿಗಳೊಳ್ ವಿಯೋಗದುಃಖಂ! ರನ್ನೆ! ಆನೊರ್ಮೆಯುಂ ನಿನ್ನನುೞಿದು ಬಾೞೆಂ. ಅಂತವಱಿನೆಮ್ಮೊಳಾವಗಂ ಪ್ರಮಾಜ್ಞೆಯುಂ ದೀರ್ಘಾಯುಮುಂ ಶಿವಂ ನೆಲೆಗೆಯ್ಗೆ! ಸ್ವಸ್ತಿ!

ಮನೋರಮೆ! ಮುಂಗತೆಯಂ ಕೇಳ. ಅಂತು ಕುಂಭಸಂಭವನ ಬೆಸನಂ ಪಿಡಿದು ಅಶ್ವಮೇಧಮುಂ ಕೈಕೊಂಡ ರಾಘವಂ ಸ್ವರ್ಣಸೀತಾಸಮೇತಂ ದೀಕ್ಷೆನಿಂದಂ. ಅಗಸ್ತ್ಯಂ ಬ್ರಹ್ಮನಿರ್ದಂ. ವಸಿಷ್ಠನಾಚಾರ್ಯನಾದಂ. ಮೇಣ್ ಋಷಿಗಳ್ ಅಧ್ವರ್ಯೂದ್ಗಾತೃಹೋತಾರರುಂ ಋತ್ವಿಜರುಂ ಸಾಮಾಜಿಕರುಮಾಗೆಸೆದರ್. ಆನ್ನೆಗಮಾಚಾರ್ಯಂ ಶುಭಮುಹೂರ್ತದೊಳ್ ಸಿಂಗರದ ಚೆನ್ನ ಜನ್ನಗುದುರೆಯುಂ ಪೇೞ್ದಂತು ಪೂಜಿಸಿ ಬೞಿಯಗ್ಗಳಿಕೆಯ ಬಿರುದೋನಂ ಬರೆದೋಲೆಯುಂ ಪಣೆಗೆ ಬಿಗಿದು " ನಿರಾಕುಳಂ ಚಪ್ಪನ್ನ

ದೇಶಂಗಳಂ ಸಂಚರಿಸುತುಂ ಕಪ್ಪಕಾಣ್ಕೆಗಳಂ ಕೂಡಿತರ್ಪುದು.'' ಎಂದು ಶಿರದೊಳ್ ಮಂತ್ರಾಕ್ಷತೆಯನಿಟ್ಟುಂ ಬಿಟ್ಟಂ. ಆಗಳ್ ಯಜಮಾನಂ–ಈ ಪೊಱ್ತು ಪೋದೊಱವ ಯಜ್ಞೀಯಾಶ್ವದ ಬೆಂಬಳಿವೋಗಿ ನೆರಂಗೂಡುವ ನಾಡೆಱೆಯರ ಕೋಟ್ಟಜಮನೋಟ್ಟಯಿಸಿಯುಂ, ಬಲ್ಪಿಂ ತಡೆವರೊಳ್ ಪೊಣರ್ಕೆಯಿಂ ಮರಳ್ಚಿಯುಂ, ಗೆಲ್ಲವೆಣ್ಗೆ ಜಸದ ಪೊಸಚೆಲ್ಲೆಯುಮಂ ಸೂಡಿ ಕೂಡಿವರ್ಪ ಬಲ್ಲಾಳ್ತನದ ಗಂಡುಗಲಿಗಳಿರಾ! ಎನ್ನೀಕೈವೀಳೆಯುಮಂ ಕೈಕೊಳ್ಳಿಂ, ಎಂಬುದುಂ; ಆಂ ತಾನೆಂಬಾಕೆವಾಳರ ಗಲ್ಲಣೆಯ ಬಲ್ಲುಲಿಯಂ ಮಾಣಿಸಿ ಪುರ್ವಿನೊಂದು ಜರ್ವಿಂ ಕಂಠದೊಂದು ಹುಂಕೃತಿಯಿಂ ಬೀರರ ಜಂಗುಳಿಯೊಳ್ ನುರ್ಗಿ ಬೀದಿಗೊಂಡು ರಾಯನಿದಿರ್ವಂದು ಶತ್ರುಘ್ನಂ– ಆರುಮಲ್ತಾನೆ ಕೊಳ್ವೆಂ, ಎಂದಂ. ರಾಯುಂ ತನ್ನ ಕಿಱುದಮ್ಮನ ಬೀರದ ಮೈಸಿರಿಯ ಬಿಂಕದ ಮೈವಳಿಯ ನುಡಿಗೆ ಸಂತಸಂಗೊಂಡು– ಲೇಸು, ಲೇಸೈ! ಭರತಂ ನಗರಪಾಲಕಂ ನೇರ್ಪಡೆ, ಲಕ್ಷ್ಮಣನೆನ್ನ ಕೈಗುಂದಿನೂಱಿಗದೊಳಿರೆ, ನೀನಲ್ಲದಾವಂ ಮೇಣೀಕಜ್ಜದೊಳ್ ಸಾಲ್ವಂ. ಪೋ, ಕ್ಷಾತ್ರಧರ್ಮಂಗಳೊಳಮುಪಾಯಂಗಳೊಳಂ ನೀಂ ಜಾಣನಿರ್ಪನಂ ಪೆಱತಾವುದಂ ನಡೆನುಡಿವೇೞ್ವೆಂ? ಆದೊಡಂ ಕೇಳ್; ಮೊನೆಗಲ್ಲದೆ ಬರ್ಪ ಪಿರಿಯರುಂ ವಿಪ್ರರುಂ ಸೇವ್ಯರಪ್ಪಿನಮವರಂ ಕಡೆಗಣ್ಚದಿರ್. ಹರಿಹರರೊಳ್ ಭೇದಮೆಣಿಸವರಂ ನೀನುಂ ಭೇದಮೆಣಿಸದಿರ್; ಜೀವನಂ ಪಶುಜೀವನಮೆಂದುಂ ವ್ಯಾಘ್ರಜೀವನಮೆಂದುಂ ವ್ಯಾಳಜೀವನಮೆಂದುಂ ಉತ್ತಮಮಧ್ಯಮಾಧಮವಿಭೇದದಿಂ ಮೂಡೆಱನಿರ್ಕುಂ. ಲೋಗರ ಶಿಕ್ಷೆರಕ್ಷೆಗಳೊಳವಱೊಂದು ಜಾಣ್ಮೆಯಿರ್ಕೆ. ರಣದೊಳ್ ನಿರಾಯುಧರಂ ಮೂರ್ಛಿತರಂ ಸಮಂತು ಪಲಾಯಿತರಂ ನೋಯಿಸದಿರ್; ಮತ್ತಂ ಪುತ್ತನೀಱಿವರಂ ಪುಲ್ಲಂ ಕರ್ಚಿದರಂ ಬಾಯೊಳ್ ಬೆರಲನಿಟ್ಟರಂ, ಮುಟ್ಟದಿರ್; ಮಱೆವೋಸದ ಕವಡುಬಿಜ್ಜೆಯುಂ ಕಾಳೆಗದೊಳ್ ಮಾಣ್; ಪೆಣ್ಗೊಲೆಗೆಳಸದಿರ್; ಇಂತು ನಯಂಬಿಡಿದು ಮಾರ್ಮಲೆವರಿರಾಯರಂ ಗೆಲ್ದು ಬಾರೈ, ಎಂಬುದುಂ; ನೆರೆಯೊಳೆ ನಿಂದಾಲೈಪ ಸೀತಾವರಜಂ ಲಕ್ಷ್ಮೀನಿಧಿ ತಾಂ ಮುಗುಳ್ನಗೆಯಿಂ ರಘುಪ್ರವರಂಗೆ– ಭಾವ! ಇಂತುಟಲೆ ಕ್ಷಾತ್ರಧರ್ಮರಹಸ್ಯಂ. ನೀಮೆ ಪಂಡಿತರೈಸೆ! ಮುನ್ನಮಾತಾಟಕೆಯುಂ ಕೊಲ್ವಂದೀ ಅಱಿವೆತ್ತವೋದುದೋ?

ಭಾರ್ಗವನೊಳ್ ಪೋಣರಿರೆ! ವಾಲಿಯೊಳಂದೇತಱ ಕಾಳೆಗವಾಯ್ತೊ? ನಿಮ್ಮಯ್ಯಂ ತಾಂಡವನನೇನೆಂದು ಕೊಂದನೊ! ಈಲಕ್ಷ್ಮಣಂ ಶೂರ್ಪಣಖಿಯ ಕಿವಿಮೂಗುಗಳಂ ಜೆಚ್ಬ ಬೆಸುಗೆಯಂ ಕೀಱಿನೆ! ಇಂತಿದು ಬಱಿವಿರುವಲ್ತೆ! ಈಗಳ್ ಶತ್ರುಘ್ನನುಮಂತಿರೆ ಧರ್ಮವಂ ಬಱಿಸಲ್ವಂ! ಎಂದು ವಿನೋದವಾಗೆ ಹಾಸ್ಯಮನಾಡಿದಂ. ಅದರ್ಕೆ ರಾಘವಂ– ಆಃ! ನನ್ನಿಗವಸುಳೆ! ನೀನಱಿಯಯ್, ಇಂತೀರಹಸ್ಯಮಂ ನಿನ್ನ ಬಿಲ್ಲೋಜನಪ್ಪ ಶತಧೃತಿಯಂ ಕೇಳೆಂದು ಮಾರ್ನುಡಿದಂ. ಈನುಡಿಗೆ ಸಭ್ಯರೆಲ್ಲರ್ ತಲೆದೂಗಿ ಸಂತಸಂದಾಳ್ದರ್. ಅಂತಿರ್ಪುದುಮಾಗಳ್ ಲವಣಾಂತಕಂ ರಾಘವನಂ ಮಣಿದುಂ ಭರತಾಗ್ರ್ಯರಂ ಪೊಡೆವಟ್ಟುಂ, ಮಾತೆವಿರನೆಱಗಿಯುಂ, ಗುರುವಂ ನಮಸ್ಕರಿಸಿಯುಂ, ಪಿರಿಯರ್ಗೆ ತಲೆವಾಗಿಯುಂ, ವಿಪ್ರರ್ಗೆ ಕೈಮುಗಿದುಂ, ಋತ್ವಿಜರಂ ತುಱಿಲ್ಗೆಯ್ದುಂ ಸಭ್ಯರ್ಕ್ಕುಂಬಿಟ್ಟುಂ, ಮುತ್ತೈದೆಯರಂ ಕಾಲ್ವಿಡಿದುಂ ಪರಕೆಗೊಂಡು, ಜನಕಂಗೆ ಪರಕೆಯ್ದಿಕ್ಕಿಯುಂ, ಭಾಸ್ಕರನಂ ಧ್ಯಾನಿಸಿಯುಂ, ತ್ರಿಮೂರ್ತಿಗಳಂ ಸ್ತುತಿಸಿಯುಂ, ನವಗ್ರಹಂಗಳಂ ಭಾವಿಸಿಯುಂ, ದಿಸೆವಳರಂ ನೆನೆದುಂ, ಯಜ್ಞೀಯಾಶ್ವಮಂ ಬಲಂಗೊಂಡುಂ ಸಸಾಯಕಂ ಸರ್ವರಾಣತಿಗೊಂಡು ಸುಮತಿವೆರಸು ಪೊಱಮಟ್ಟಂ. ಆ ಪೊೞ್ತಿಂಗೆ ಹನುಮಂತಸುಗ್ರೀವನೀಲನಳಜಾಂಬವಾದಿಯಪ್ಪ ಕಪಿವೀರರುಂ ಕೋತಿಪಡೆಯನೊಡಗೊಂಡು ನಾಯಕನ ಮೆಯ್ಗಾವಲ್ಗೆಂದು ತಳರ್ದರ್. ಈತಂಗಳಂ ಕೂಡೆ ಪ್ರತಾಪಾಗ್ರ್ಯನೀಲರತ್ನರಿಪುತಾಪೋಗ್ರಾಕ್ಷಲಕ್ಷ್ಮೀನಿಧಿಗಳೆಂಬ ಪಂಚಮಹಾರಥಿಕರ್ ಪ್ರತ್ಯಕ್ಷೌಹಿಣೀಸೇನಾಸಮೇತರ್ ನಡೆದರ್.

ಮತ್ತಮಾವೇಳೆಯೊಳ್ ಮೆಟ್ಟಿದ ಬಣ್ಣವಾವುಗೆಯ ಸಿಂಗರವಟ್ಟಬೀರಗಾಸೆಯುಂಬವ, ಕಟ್ಟಿದ ಪಟ್ಟೆಯ ಬಲ್ಪಿನ, ತೊಟ್ಟ ಪೊಸಗುಪ್ಪಸದ ಚೆಲ್ವಿನ, ಇಟ್ಟ ಕೀಱುಗಂಟದ ರಯ್ಯದ, ಅಳವಟ್ಟ ಮಣಿಯ ಕುಂದಣದ ಮಗುಟದ ಸೊಬಗಿನ, ಕಿಱುಜವ್ವನದ ಬಿಂಕದ, ನಡೆವೊಂದು ಗಾಡಿಯ ಪುಷ್ಕಲಂ, ಆಗಳೆ ತಂದೆತಾಯ್ವಿರಡಿಯಾಣತಿವಡೆದು ಕಿಱಿಯಯ್ಯನ ಬೆಂಬಲಕ್ಕೆಂಮು ಸಾಯಕಂಗಳನೆತ್ತಿ ಪೋಪವಸರದೊಳ್ ಪಿಡುಜಡೆಯ ಬಿಮಮೊಗದ ಬಿರಿದೆಸಳ್ಗಣ್ಣ ಬಿಲ್ಪುರ್ಬಿನ ಬಿಂಕ(?)ಕ್ಕೆಯ ಬಿಂಬಾಧರದ ಬಿಲ್ವಸ್ತನದ ಬಿ

ಸೌಡ್ಡಿತೆಯ ಬಡವಾಸೆಯ ಬಳಲ್ನಡುವಿನ ಬಲವುರಿಸಂಕುಗೊರಲ ಜಘನ
ಡೆಯ ಬೆಳ್ದಳಗ್ಗೈರ್ಯ ಬಂದುಗೆವ್ರೊಗರ ಬಾವನ್ನಸೊಪಡ ಬಳಲೊಡಲ
ಬೆಡಂಗಿನ ಬಾಲೆಯೊರ್ವಳ್ ತನ್ನ ಕಿಱುವೆರಲ ಸೆಳ್ಳುಗುಗೊರ್ಸೆಯಿಂ ಮುಂ
ಗುರುಳನೇಱೊತ್ತುತುಂ ಅರೆಜಾಱಿದ ಮೇಲುದುಮಂ ಸಮಂ ನೇವರಿ
ಸುತುಂ ಪತ್ತೆವಿಡಿಮುಡೆನೇಣನೊತ್ತುಸೇರಿಸುತುಂ ಕೈವಳೆ ಘುಲ್ಘುಲ್ಲೆನೆ
ಮಂಜೀರಂ ಘಲ್ಘಲ್ಲೆನೆ ನಸುನಗೆಯುರೆನೋಟನ ತಲೆವಾಗಿನ ವಿಲಾಸದಿಂ
ಮಂದಾರವ ತೋರವಂಡೆಯನಿರಿಸಿ ಪೊಂಬಟ್ಟಲನೆತ್ತಿ ಬರುತುಮಿರ್ದಳ್.

ಇಂತು ಕಾವನಧಿದೇವತೆಯೆನೆ ಕಟ್ಟಿದಿರೊಳಿರ್ದಿರ್ಪ ತನ್ನ ಮನ
ದೆಱಕದಿನಿಯಳಂ ಕಂಡು ನಸುನಕ್ಕು ಮುಟ್ಟಿಸಾದರ್ ತಳ್ಕೆಗೆಯ್ದು ನು
ಣ್ಗಲ್ಲಮನಲುಗಿ ಮೈಸೋಂಕಿನೊಂದು ಸೊಗದಿಂ ನಿಮಿರ್ನವಿರ್ ಗುಡಿಗಟ್ಟೆ
ಕಾಂತೆಗೆ—ಕಾಮಕಲ್ಪವಲ್ಲರೀ! ಅಯ್ಯನ ಪಿರಿಯಯ್ಯನಾಣತಿಯಾಯ್ತು. ಇ
ದೆ! ಜನ್ನಗುದುರೆಯ ಬೆಂಗಾವಲ್ಗೆಂದು ಪೋಪ ಕಿಱಯ್ಯೆಯನ ಬೆಂಬಲನಾ
ಗಿ ತಳರ್ದೆಂ. ಬಾಲೇ! ಅನಿತೊಂದು ಕಾಲಂ ನೀಂ ಮನನಂಱುಗದೆ ನಿ
ನ್ನತ್ತೆವಿರ ಸೇವೆಯ ನೋಂಪಿಯೊಳೆ ಬಾೞ್. ಇದು ನಿನ್ನನ್ನರಪ್ಪ
ಪಡಿಬಡೆಯರ್ಗೆ ಮೇಲ್, ಎಂದಂ. ಆನುಡಿಗೆ ಕಾಂತಿಮತಿ ತಾಂ ಗದ್ಗದವಾ
ಣಿಯಿಂ ನಲ್ಲಂಗೆ-ಇನಿಯ! ಚಿರಕಾಲಂ ನಿನ್ನನಗಲ್ವೆನೆಂಬೊಂದು ಬೇವಸ
ದಿಂ ನೋವೆನಾದೊಡಂ ದಿಗ್ವಿಜಯಾರ್ಥಂ ಪೋಪ ವೀರರಂ ತಡೆವುದು ವೀ
ರಪತ್ನಿಯರ್ಗೆ ತಗದಲ್ತೆ, ಲೇಸೈ! ಎಣೆವೆಂಡಿರ ನಗೆಗೆನ್ನಂ ಪಕ್ಕಾಗದಂ
ತು ಮಾಡಿ ಗೆಲ್ಲವೆಣ್ಣಂ ಸವತಿಯನಾಗಿಸೈ. ನಿನ್ನನುಱಿದುಂ ಕುಳಿಗಾರ್ಳಿ
ಗೆ ಕಾಮಂಗೆ ಅಮರ್ದುಗೈಯಂಗೆ ಸುಗಿದು ಗಳಿಗೆಯುಂ ಯುಗಮೆನೆ ಬೇಟ
ದ ಸೂಡಿಂಗೆ ನೂಂಕಿ ನವೆಯುಲಿರ್ಪೆನ್ನೊಳ್ ನಿನ್ನಡಿಗಳೊಂದು ನಲ್ಮೆ ಸ
ಮಂತಿರ್ಕೆ! ಮೇಣಾರ ಮುಖತುರಗಕ್ಕೆ ಬೆಂಬೞಿವೋಪೆಯಾರಾಮನೊಲ್ಮೆ
ನಿನಗೆ ರಕ್ಷೆಯಿರ್ಕೆ! ಎಂದು ಕಟ್ಟಾಣಿಮುತ್ತಿನ ಸೇಸೆದಳಿದು ನಱುದಂಬುಲ
ಮನಿತ್ತು ಸುಖಾಶ್ರುವೆನೆ ಆಲಿನೀರ್ ತುಳುಂಕೆ, ಕಿಱುಮೊಗದ ಸುಕ್ಕುಗಂಜ
ಗೆಯ ಬಾವದಿಂ ನಿಂದಿರ್ಪುದುಂ; ಭಾರತಿ, ಕಾಂತೆಗೆ ಕಾಂತಿಮತಿ! ಎನ್ಗೆ
ಯೋಂ? ದೆಸೆಗೆ ಬಿಱ್ದ್ರಾಯರ ಬಾಳ್ದಳವಿಡಿದುಂ ಜಯಕಾಂತೆಗೆ ತೆಱೆ
ರಂ ಮಾಡುತುಮಲ್ಲದಂದವರ ಪಂಗಲೆಯ ತ್ರಿಱಿಕಲ್ಲಾಟದಿಂ ಮರುಳ್ವಡೆಗ

ನಲವೆಚಿರ್ಚುತುಂ ಕಪ್ಪುಕಾಣ್ಕೆಗಳನೆಚಿವು ತರ್ಪಿಂ; ನೋಯದಿರ್; ಪೋ ಗೆಂದೊಡಂಬಿಡಿಸಿ ಬೀಳ್ಕೊಟ್ಟಂ. ಅಂತಾಕಾಂತೆ ವಿಜಯಕ್ಕೆಂದು ಪೋಪ ನಲ್ಲನ ತಲೆವುಡಿಯುಡಂಗುವನ್ನವೆಟ್ಟೆಬ್ಬಿ ನೋಡಿಯುಂ ಬಯಲಾಸೆಯಿಂ ಬೀಡಂ ಪೊಕ್ಕಳ್. ಭರತಾತ್ಮಜನುಂ ತನ್ನ ಬಗೆಯನಿರ್ಕುಳಿಗೊಂಡ ಕಾಂತೆಯ ಕಾಪಲ್ಮೆಯುಂ ನೆನೆನೆನೆಯುತೆ ಪೋಗಿ ಶತ್ರುಘ್ನಂಗೆ ಬೆಂಬಲವಾದಂ.

ಈಗಳ್ ಶತ್ರುಘ್ನನಾಜ್ಞೆಯಿಂ ಪುಷ್ಕಲನೊಂದು ನಿಯಮದಿಂ ರಥಿ ಕರ ಮಂತಣದಿಂ ಪಲುಮಾಸಿಸಬೀರರ ಪದ್ಗತಿಯಿಂ ನಡೆವ ಸೇನೆಯ ಕಾ ಪಿಂ ಮಖತುರಗಂ ತರಂಗಲೀಲೆಯಿಂ ಯಥೇಚ್ಛಂ ಪೋದುದು. ಆಸ್ಕಂಧಿ ದಿತಧಾರೆಯಿಂ, ಸುದೃಢಪೀವರಕಾಯದೊಂದು ಕಾಂತಿಯಿಂ, ಪಿಮಿರ್ದ ಕೊ ಡಂಕೆಯುಂದದಿಂ, ರನ್ನದಾರದ ಪೊನ್ನ ಕಿಱುಗಂಟೆಯ ಚೆಲ್ವಿನ ಗೋಣ ಸೊಬಗಿಂ, ಪಣೆಯ ಬಿರುದೋಲೆಯೊಪ್ಪದಿಂ, ಸನ್ತಂ ಪೋಪ ಕುದುರೆಯ ಬೆನ್ನೊಳೆ ಪಱಿಯ ಪೆರ್ಗಾಳೆಯ ಪಳಹದ ಕೋಟಿಲ ತಂಬಟೆಯ ಶ್ರು ತಿಯ ಡಾಡೆಯ ಮವುರಿಯ ಭೇರಿಯ ಭೂರಿನಿನಾದಂ ದೆಸೆಮುಟ್ಟೆ ಪಳಂಚಲೆ ಯೆ, ಸೇನಾಪದಸಂಘಾತಸಂಜಾತರೇಣುಜಾತಮಂಬರಮಂ ಮುಸುಂಕೆ, ಎ ತ್ತಿದ ಸತ್ತಿಗೆಯ, ಡಾಳಿಸುವ ಚಾಮರದ, ಮಿಳಿರ್ವ ಕೇತನದ ಪಂತಿಯೆತ್ತಂ ನಿಮಿರ್ದಿರೆ, ರಾವುತರ ಮಾವತಿಗರ ತೇರಾಳ್ಗಳ ಚಪ್ಪರಣೆಯೊಳ್ ಕಿಳಿರ್ವ ಪಯದ ಗೀಱಿಡುವಾನೆಯ ಕಿಱುಗಿಱಿನ ಪೊಂದೇರೋರಣಮಿಂಬಿಡಿದಿರೆ, ಕಡಿ ತಲೆಯ ಸುರಗಿಯ ಕೊಂತದ ಸೂಳದ ಬಿಲ್ಗಣೆಯ ಮೂಡಿಗೆಯ ಭಟರ ದೆ ಖ್ಖಾಳಂ ನೇರವಾಗೆ, ಗರಗರಿಕೆಯ ದಱಿದುಱಿದ ಬಿಂಕದ ಬೀರರುಗ್ಗಡಣೆ ಪಿರಿದಾಗೆ, ಜೋದರ ಗೋಱಾಯಿಲರ ರಥಿಕರ ಕಾಲಾಳ್ಗಳ ಪಡೆವಳರಾಕೆ ವಾಳರ ಗಡಣಂ ನೆರೆದಿರೆ, ಲವಣಾಂತಕನ ಕಟ್ಟಾಣತಿಯಿಂ ಪಡೆ ನಡೆಯು ತುಮಿರ್ದುದು.

ಇಂತು ಪರ್ವಿದ ಕಡಲೆಂಬಂತಿರೆ ಮೇರೆವರಿದು ಪೋಗೆ ಸೇನೆ ಯೊಂದಿರವಂ ತಮುತ್ತಮಗೆ ಸಂತಸದುರ್ಬಿನಿಂ ಕಾಂತೆಯರ್ ನೆಲೆವಾಡಮು ನೇಱಿಯುಂ ಮೊಗಸಾಲೆಯೊಳಿರ್ದು ಬಾಗಿಲೊಳ್ ನಿಂದುಮಱೆಚಱಿದ ಪಡಿ ಯಲ್ಲಿ ಗವಾಕ್ಷದೊಳ್ ನಿಳ್ಕಿಯುಮೀಕ್ಷಿಸುತಿರ್ದರ್. ಅವರೊಳೊರ್ವಳ್

ಜಕ್ಕಜವ್ವನದ ಚೆಲ್ಲಗಾರ್ತಿ ತನ್ನ ಬೞಿವಂದ ಕಾದಲನನೆಂತಂತು ಕೊರಲಂ ತೞ್ಕೈಸಿ ಪಿಡಿದ ತುಂಬುನೀರ ಪೊಂಗೊಡಮನಿೞಿಪಿ ಪಡಿಮೊಗದ ನೆರೆವೀಡ ನವಜವ್ವನದ ಕೆಳದಿಯೊರ್ವಳಂ ಸನ್ನೆಯಿಂ–ಎಲೆ ಅತ್ತಿಗೆ, ಎಂದುಂ ನಿನ್ನ ತೋಳೆಡೆಯೊಳೊಪ್ಪುವಂಗದಂ ತೋರ್ಕುಮಿಲ್ಲಮಿಂದೇನೆನೆ; ತಂಗೆ! ಊರ್ಗೆ ಪೋದ ನಲ್ಲನಿಂದು ಬರ್ಪನಮಾತನ ಪದಸೇವೆಯೊಳ್ ಸಂದಿರಲೊಡಮೆಂತೊ ಮೆಲ್ಲನೆ ಸಡಿಲ್ದು ಈಗಳ್ ಕಟಕಂಬೊಲಿರ್ಕುಂ, ಇದೆ! ಎಂದು ಕೈಯೆತ್ತಿ ತೋಱಿದಳ್.

ಮತ್ತಮೊಂದೆಡೆಯೊಳೊರ್ವ ಸಿಂಧುರಬಂಧುರಯಾನೆ ತನ್ನೊತ್ತಿನ ವಿದಗ್ಧೆಯೊರ್ವಳಂ ಮಂದಹಾಸದಿಂ– ರಥಾಂಗಂ ಸಡಿಲ್ದಜ್ಜಿಂತು ತೊೞೆದೀಸು ಕಟಿಜ್ಜಿದ ತೇರನೇಕೊ ನಿಮ್ಮ ಕಾಮನ ಬೀರರಡರ್ವರ್ ನಿನ್ನೆರಂ ಏಂ ಸೊಗಮೊ! ವೇಗಂ ಮಂದಮಾಗದೆ ಎಂಬುದುಂ; ಅವಳ್– ಆಃ! ಪೊಸತೇರೆಂತೊ ಕಿಱುಗುಟ್ಟುಗುಮೆಂದುಱಿದು ಪಲವುಂ ಸೂೞ್ ರಂಗಂಬೊಕ್ಕು ಗಂಡುಗಲಿಗಳಂ ಗೆಲ್ದು ಪೞಿಂಗಿದ ತೇರನೆ ಆವುದೊ ಕುಱುಪುಗೊಂಡು ಬಿಡದಾಯ್ದಡರ್ದು ಸಂಗರದೊಳ್ ಬಲ್ಪೊಟ್ಟುಂ ಕಾದುವರ್. ಈಕಾಮರಾಯನ ಸಂದ ಸೆಣಸಾಳ್ಗಳ ಕಟ್ಟಾಳ್ತನಮಂ ನೀನಿನ್ನುಮಱಿತೆಯಿಲ್ಲಮೆಂಗು ಮಾರ್ನುಡಿದಳ್.

ಇಂತೀಪರಿಯ ಕಟಕಿವಾತಿನ ಮೋಡಿಯ ಪೊಱನಾಡ ಕೇರಿವೆಣ್ಗಳನಭೀಕ್ಷಿಸುತ್ತುಂ ಮೂಡದೆಸೆವಿಡಿದು ವಾಜಿಯು ಕಾಪಿಂ ಪಾಯ್ದಳಂ ಸಡಗರದಿಂ ನಿಜ್ಜಪಯಣದಿಂ ದೇಶದೇಶಂಗಳಂ ಕೞಿಕೞಿಗು ಪೋಗುತುಮಿರ್ದುದು.

ಎಂಬಲ್ಲಿಗೆ

ಶ್ರೀ ರಾಮಾಶ್ವಮೇಧದೊಳ್ ವಿಜಯಪ್ರಯಾಣಮೆಂಬ ಸಪ್ತಮಾಶ್ವಾಸಂ

ಸಂಪೂರ್ಣಂ.

ಅಷ್ಟಮಾಶ್ವಾಸಂ

—:0:—

ಮುದ್ದಣಂ:- ಓ! ಎನ್ನ ನಿಱ್ಱಸಿಡುಗುಂಕುಮದ ಬಿಂಕದ ಮೆಱ್ಱುಗಾತಿ! ಓ! ಎನ್ನ ಇಱ್ಱೆಗಾಱಿನ ಜೆಱ್ಱ ಪಱ್ಱೆಯ ಕೈಗನ್ನಡಿ! ಓ! ಎನ್ನ ಎಱ್ಱ ಮೈಗಣ್ಣ ಪೆಣ್ಣ! ಓ! ಎನ್ನ ಮಿಂಮುಱ್ಱ ಲಱ್ಱಣದ ಸಿರಿಗೈಯೆ! ಓ! ಎನ್ನ ಮೊಗೊಂಕುಮೊಗೆರೆಯ ಗುಜ್ಜುಗೊರಲ ತರಳೆ! ಕೇಳ್. ಇಂತೀಮಾಱ್ಕೆಯಿಂ ಯಜ್ಞೀಯಾಶ್ವಂ ನಾನಾವಿಷಯಂಗಳೊಳಂ ಮನೋರಥದ ವಾಜಿಯ ಪಾಂಗಿನಿಂ ತೊೞತೊೞಲ್ದು ಬಱೆವರೆ ಊರಾಳ ಬಲ್ಲಾಳ ಪೆರ್ಗಡೆ ಮಾಸಾವಂತಮನ್ನೆಯರಾಯರ್ ಮುಂತಪ್ಪ ನಾಡೊಡೆಯರ್ ಶ್ರೀರಾಮನ ಕಟ್ಟಾಳ್ತನದ ಬಲ್ಪಿನ ಬೞಿವಿರುಗನೋದಿಯುಂ ಪಡುವ ಬೆಂಬಲದ ಬಲ್ಗೈಬಂಟರಂ ಕಂಡುಂ ಕೈಮುಗಿದು ಶತ್ರುಘ್ನನ ಮೞಿವ್ರೀಕ್ಕಂ ಕಪ್ಪಮನೊಪ್ಪಿಸಿ ತಾಮುಂ ಪಡೆವೆರಸಿ ಕುದುರೆಯ ಕಾವಲ್ಗೆಪಿ ಪೋದರ್. ಆಕಾಲದೊಳ್,

ಆರಂ ತೋಡುಂಗಿಱಿದೆ ತನ್ನೊಂದು ಗರಗರಿಕೆಯ ಸೊಮ್ಮಿನಭ್ಯುದಯದೆ ಪದುಳಮರಸಾಳ್ವ ಬಸಂತರಾಯನುಕ್ಕುರ್ಗಂ ಸೊಕ್ಕುರ್ಗಂ ಸೋದರ್ಗೆ ಬಯಲಪ್ಪಿನೆಗಂ ದಾೞಿಗೆಮ್ಡ್ಡ್ಯತನ ನಾಡಂ ಬೀಡಂ ಪಡಲಿಡಿಸಿ ಪ್ರರುಳ್ಗೊಂಡು ತಾನುಂ ಲವಣಾಂತಕಂಗೆ ನೆರವಾದನೆನೆ ಗ್ರೀಷ್ಮರಾಜಂ ತಲೆದೋಱಿದಂ. ಕೞಿವ್ರೊವೞಿಯೆ, ನೀರುಂ ಬತ್ತೆ, ಕೆಸಱುಂ ಪಾವಸೆಯುಮುೞಿಯೆ, ಕೊಳನಂ ನಿಸ್ಸಾರಮೆಂದು ಪ್ರರುಳ್ಗೊಂದಿದಾಣ್ಮನಂ ತೊಱೆದು ಪೋಪ ತುೞಿಲಾಳ್ಗಳಂತಿರೆ ನೀರ್ವಕ್ಕಿಗಳ್ ದೆಸೆದೆಸೆಗೆ ಪೋದುವು. ಈಱಪ ದೆಸೆಯುಂ ಕಂಡೊಂದು ಬಕಂ ಬೆಳತುರ್ಗೆ ಮುಂಗಾಣದೆ ತನ್ನನಂಟುಮೊರೆಯ ಮೀಂಗಳ್ಗೆ ಮುಂತೆ ಬಟ್ಟೆಯಾವುದೆಂದಾವಗಮುಗಲದೆ ಚಿಂತಾಪರನಾಗಿರ್ಕುರ್ಗಂ. ಪೆರ್ದೊರೆಱಿ ಕಾಲ್ಪೊಱೆಯುಂ ಕಿಱುದೊಱಿ ಪ್ರಱಿಲ್ದೊಱೆಯುಮಾಯ್ತು. ನಾಡುಂ ಕಾಡುಂ ಬೀಡುಂ ಸೂಡಿಂ ಸೀಕರಿವ್ರೋಯ್ತು. ಕಾತಮರಂ ಪೂತ ಬಳ್ಳಿ ಸುರ್ಕಿ ಸುೞಿವಾಡಿದುವು. ಕಲ್ ಸುಣ್ಣಬೇವಾಯ್ತು. ಪಟಿಲ ಪುರಿಗಡಲೆಯ ಮುಮ್ಮುಱಿಯಾಯ್ತು. ವನಜಂತುಗಳ್ ಬಯ

ಲ್ದೊಱೆಗೆ ಮರುಳ್ಗೊಂಡುವು. ಪಕ್ಕಿಗಳ ಗಳದೆ ಭಿನ್ನಸ್ವರಂ ಪುಟ್ಟಿತ್ತು. ಆಗಳಾಗಳುರಗಂಗಳ್ ತಮ್ಮಾರೋಗಣೆಯ ಪೊೞ್ತೆಂದು ಸಂಚರಿಸಲ್ತೊಡಂಗಿದುವು. ಅಲರ್ವಕ್ಕಿಗಳ್ ಬಂಡನುಂಡುಂಡು ಬಾಯಾಱಿ ಬಂದು ಕನ್ನೆವೆಣ್ಗಳ ಕೈಗೊಡನ ತುಱುಕುಂಬನಿಯುಂ ಕುಡಿಯಲಾಟಿಸಿದುವು. ಕಾಂತಾಜನಂ ಪಟ್ಟುಡೆಯಿಂ ಪುದಿಗಪ್ಪುರಂಬೆರೆದ ಸಿರಿಕಂಡದಪ್ಪಂ ಮುತ್ತಿನೊತ್ತೆಸರದ ತೊಡವಿನುಳ್ಳಲರ್ವ ಬೈಗುಮಲ್ಲಿಗೆಯ ಜೊಲ್ಲೆಯದ ತುಱುಬಿಂ ಕಣ್ಗೆಡ್ತ್ರಮಾದುದು. ಬಟ್ಟೆಗರಱವಟ್ಟಿಗೆಯ ಬಾಲೆಯರ ನಸುನಾತಿಥಿಗಳಾದರ್. ಬಿರಯಿಗಳ ಬಿಸುಸುಯ್ಲಿಂ ಪೊರೆದುದೆನೆ ಬನಗಾಳಿ ಬೆಚ್ಚನೆ ತೀಡಿದುದು. ಲೋಗರ್ ತೃಷ್ಣೆಗೊಂಡರ್. ಭಾಸ್ಕರನಾಗಳುಂ ಕಾಯ್ಪಿನೊಳಿರ್ದಂ.

ಇಂತು ಬಂದ ಕಡೆಯ ಕಡುವೇಸಗೆಯೊಳಂ ತುರಂಗಂ ಮುಂತೆ ಮುಂತೆ ಪೋಗೆವೋಗೆ ಅಂದಂದು ಚಾಱಿ ಪೇರೊಡಲಿನುಗಿದುಂ ಬಿಗಿದುಂ ಪೊಱದೆಗೆದ ಬೆಳ್ವಕ್ಕದ ತುಂಬುವೆಱೆಗಳನೊಟ್ಟಿಸಿ ಮೂಸೆಯೊಳಿಟ್ಟು ತಿದಿಯೊತ್ತಿ ಕರಗಿಸಿಯುಮೆಱೆದುಂ ಕಂಡರಸಿಯುಂ ಹಳದುಂ ಕೆತ್ತಿಯುಂ ಬೆಚ್ಚಂ ನಯಸಾಣೆವಿಡಿದುಂ ಸಮೆದುದೆಂಬಂತಿರೆ ತಱಿತಱಿನೆ ಪೊಳೆವ ಬಿತ್ತರಂಬಡೆದ ಬಿದುಗಲ್ಲ ಸುತ್ತಣ ಮೆಟ್ಟಡಿಯಿಂ, ಪಾಸಿದ ತಣ್ಗದಿರಱೆಯ ಪಾದವಟ್ಟಿಗೆಗೊಳಗೇರಿಯ ಸಿಡುಮರಂಗಳಱುಂಬಿನ ಕಟ್ಟಿಲೆಯನೊಳಕೊಂಡು ಬೆಳರ್ಮಣ್ಣ ಪೊಸಕಡಾಯದೊಳ್ ತುಂಬಿದ ನೀಲಿಯ ತನಿರಸಮೆಂಬಂತಿರೆ ಕಳಿಂದಜೆಯ ಕರ್ಮಡುವಿನೊಂದು ಪೊಳೆಪಿಂ, ಗುಣ್ಪಂ ತೋರ್ಪ ತಿಳಿನೀರಿಂ, ತುಂಬಿ ತುಱುಂಕುವ ತಿಳಿನೀರ್ಗೆಡೆಯೆಡೆಯೊಳ್ ಕಾರಿರುಳಾಗಸದೊಳಡಿಕಿಱಿದ ತಾರೆಗಳ ಪಾಂಗಿನುಳ್ಳಲರ್ದು ರಯ್ಯಮೊಪ್ಪುವ ಬೆಳ್ದಾವರೆಗಳಿಂ, ಬಂಡೊಸರ್ವ ಪುಂಡರೀಕಮುಂ ನಱುಗಂಪಿನ ಬೞಿಗೊಂಡೈತಂದು ಕಮಳೆಯ ಮುಖಕಮಲದ ಕತ್ತುರಿವೊಟ್ಟನನುಕರಿಸಿ ಮುಸುಱಿ ಮೊರೆವ ಮಱಿದುಂಬಿಗಳಿಂ, ಬಂದೆಱಗಿ ಬಂಡಿನಲರ್ವುಡಿಯಿಂ ಪೊರೆದ ಪರಮೆಸಱಿಯುಂ ಕೋೞ್ದೆಳಬಿಸುಗೆತ್ತು ಕರ್ದಂ*ಕಲಿಂಮೈವಳಸುವ ಬಾಲಹಂಸಂಗಳಿಂ, ಮೆಲ್ಲಮೆಲ್ಲನೆ ನಡೆದುಂ ಪಾಱಿಯುಂ ಪೋಪ ಬಾಲ

ಹಂಸೆಗಳಿಂ, ಬೆಳ್ವಕ್ಕಿಯ ಬಿಗುರ್ಪಿನಿಂ ನೀರೊಳೊಳಗೊಳಗೆ ಮೈಗರೆವ ಮೀಂಗಳಿಂ, ಮೀಂಗಳ ನೀರ್ವಕ್ಕಿಗಳ ಕಿಱುಗಾಳೆಯುಲಿಪದಿಂ ಕಾಲ್ಪರಿವ ತೆರೆಯೆನೊಂದು ಕೊಳಂ ಪಗಲ್ವೆಣ್ಣ ಕೈಪಿಡಿಯೆಂಬಂತಿರೆ ಸೊಗಯಿಸಿದತ್ತು.

ಇಂತು ಮುಂಗಾರೆನ್ನದೆ ಸುಗ್ಗಿಯೆನ್ನದೆ ಬೇಸಗೆಯೆನ್ನದಾಸತಿಯೆನ್ನದಿಂಬೊಸರಿಂ ತುಂಬಿ ಪೊನಲ್ವರಿವ ಪೊಕ್ಕರಣೆಯುಂ ಬೞಿಗೊಂಡೊಂದು ಬನಂ ಬನರಾಣಿಯ ಕರತಳದ ಚೆಂಬೊಗರ್ಗನುಕಾರಿಯಪ್ಪೆಳವಳಿರಿಂ ತೀವಿ ತೋರ್ಪ ಚೆನ್ನಸುಗೆಯಿಂ, ಬಸಂತಂ ಪೊಲ್ದು ಸಮಕಟ್ಟಿದ ಮಲಂಗೆಂಬಂತಿರಡಿವಿಡಿದು ಮುಡಿವರೆಗಂ ಬಲ್ವಣ್ಣಳಿಂ ತುಱುಗಿ ತೋರ್ಪ ಬಕ್ಕೆವಲಸಿಂ ದಿನಲಕ್ಷ್ಮಿ ನಡೆಯೊಂದು ಸೇದೆಯಿಂ ಬೞಲ್ದು ಪಯಣಂಬರ್ಪ ತನ್ನಿನಿಯನ ನೀರಟ್ಟಗೆಂದೇಱಿತ್ತಿ ಸೀಡಿದ ತಣ್ಣೀರ ಪೊಸಪೊಂಗಳಸಮಿದೆನೆ ಇಂಬಿಡಿದ ತೆಂಗಾಯಿಂ ಬಾನುಪ್ಪಂ ಬೆಳೆದೋರಣಮಾಗಿ ತೋರ್ಪ ತೆಂಗಿಂ, ಮಾರವೀರನ ಕಟ್ಟೋಲಗದ ವಂದಿಗಳ ಮಾಗಧರ ಗಾಯಕರ ಪಸುರ್ವಟ್ಟೆಯ ಗೂಡಾರದ ಬೀಡಾರಮೆನೆ ಚೆಂದಳಿರಿಂ ತನಿವಣ್ಣಿಂ ಪೊಸಪೂವಿಂ ತೀವಿದಿಮ್ಮಾವಿಂ, ಇಚ್ಚೆಗಾರ್ತಿಯ ಪೆರ್ಚಿದ ಬಲ್ಮೊಲೆಯ ಪೊಂಗಿನಿಂ ಜೋಲ್ದು ಪೊಂಬಣ್ಣದಿಂ ಮನೋಜ್ಞಮಾದ ಬೀಜಪೂರದಿಂ, ಬನಸಿರಿಯ ಸಿರಿಮೊಗದೊಳೊಗೆದ ಬೆಳ್ನಗೆಯೊಳೆಂದು ಪೊಱ ತೋರ್ಪ ಬಾಯ ಸುಲಿಪಲ್ಲನನುಕರಿಸಿ ಬಿಱಿನೊತ್ತರಂಬಿಡಿದರವಿರಿದ ದಾಡಿಮದಿಂ, ರತಿಕಾಮರ್ಕಳ ತ್ರಿಱಿಕಲ್ಲಾಟದ ಇಂದ್ರಾಸ್ತ್ರಕಂತುಕಂಬೊಲೆಸೆವ ಬಾಲಜಂಬೀರದಿಂ ಮಧುಲಕ್ಷ್ಮಿಯ ಕೇಶಪಾಶಮೆನೆ ಮಡಲ್ತು ಕಱಂಗಿ ಕಟ್ಟಲಿಸಿದ ತಮಾಲದಿಂ, ಕಾಮನ ಪೇರುಕ್ಕೆವದೊಳೆಂದು ಪೊತ್ತಿಸಿದ ದೀವಿಗೆಗಂಬಮೆಂಬಂತಿರೆ ಸ್ವಾಮಿಂ ಕರಂ ಚೆಲ್ವಾದ ಸಂಪಗೆಯಿಂ, ಕುಸುಮಾಯುಧನ ಪೊಸಮಸೆಯೊಪ್ಪದ ಕೂರ್ವಾಳೆನೆ ಮಿಱುಗಿ ಕುತ್ತಿಸಳಿಂ ತೀವಿದ ಪೊಂಗೇದಗೆಯಿಂ, ಮುಗುಳ್ತ ಪಾರಿಜಾತದಿಂ, ಪೂತ ಮಂದಾರದಿಂ, ಉಳ್ಳಲರ್ದ ಸುರಪೊನ್ನೆಯಿಂ, ನನೆಯೇಱಿದ ಸುರಯಿಯಿಂ, ಬಕುಳದಿಂ, ಸಿರಿಸದಿಂ, ಪುನ್ನಾಗದಿಂ, ಸೊಗಯಿಸಿ ತೋರ್ಕುಂ. ಕೊಸರಿಲ್ಲದ, ಮಿಡಿಯಿಲ್ಲದ, ಕ

ಸುರ್ಗಯಿಲ್ಲದ, ದೋರೆವಣ್ಣಿಲ್ಲದ, ತನಿವಣ್ಣಿಲ್ಲದ ಮರಂಗಳಿಲ್ಲ ಬನದೊಳ್. ಮುಗ್ಗದ ಪುಗಿಯದ ಬಾಡದ ನುಱುಗದ ಸುರುಂಟದ ಪೂವೆ ಪೂಬನದೊಳಿಲ್ಲಂಬಂ. ಮತ್ತಂ ಮೃದ್ವಂಗಿಯೆಂತಂತು ನುಣ್ಪುವಡೆದುಂ, ಗಾಡಿಯಿಂ ನಡೆವ ಕೃಶೋದರಿಯೆಂತಂತು ಬಳ್ಕಿಯುಂ, ನಚ್ಚಣಿಯೆಂತಂತು ಪೊಱ್ತು ಪೊಱ್ತಿಂಗೆ ತಲೆಯನೊಲೆದುಂ, ಸೊಜ್ಗೆವಂದ ಕಾವಲೆಯೆಂತಂತು ನೆರೆಯ ತೆಳ್ಮರನಂ ತಳ್ತಮರ್ದಪ್ಪಿಯುಂ, ಪೂವಳ್ಳಿ ಮಡಲ್ತೆಸುಗುಂ. ಬಿರಿವ ಮುಗುಳ ಕಂಪಿಂ ಬೆರೆದು ತನಿವಣ್ಗಳ ನಱುವಿಂ ಪೊರೆದುಗುವ ಸೊನೆಯ ಸೌಸವದಿಂ ನೆರೆಪದಿರ್ಗಂತಿಯುಂ ತಾಟಿ ಮಾಲತಿಯುಂ ಪುಟ್ಟಿ ಮಾಧವಿಯುಂ ಕಿಟ್ಟಿ ಬನಗಾಳಿ ತಣ್ಣನೆ ತೀಡುಗುಂ. ಅಂತುಮಲ್ಲದೆಯುಂ-ತೀಟದ ಕಂಪೆತ್ತಲತ್ತಲ್ ಮೋಪರಿಸಿ ಗಾವರಿಸಿ ತಂಡತಂಡದಿಂ ತೇಂಕುತ್ತೈತಂದು ಮಂದೈಸಿದಲರ್ಜೊಂಪಮಂ ಕಂಡು ಪಿಂಡೆಱಗಿ ಪೊಸಜೇನನುಂಡು ಱಕ್ಕೆಯುಂ ಬಿದಿರ್ಚಿ ಮೊರೆದೆಳ್ದು ಮೇಣುಂ ಮುಂಬರಿವ ಬವರಿವಿಂಡಿಂ, ಪಿಳ್ಳನೆ ಪಿಱಿದು ತನಿರಸದ ತಂದಲ್ಸುರಿವರನೇಱಿಲ ಗೊಂಚಲಂ ಕಟ್ಟಿದಿರೊಳ್ ಕಂಡು ತಾನುಂ ಸಾರಿಗೆಯುಮಿರದೆ ಪವ್ವನೆ ಪಾಱಿ ಸೆಳೆಗೊಂಬನಡರ್ಪುಮೈವಾಗಿ ಕೆಲಕೊಲೆದ ಕಱಿವಣ್ಣಂ ಕೊಕ್ಕಿಂ ಕುರ್ಕಿ ಸೀಯೆನೆ ಸವಿದ ನುಡಿವಕ್ಕಿಗೊಂದಣದಿಂ, ಬಂದ ಸೀಮಾವಿನಳ್ಳಿಗೊಂಬಿನೊಳಿರ್ದು ಕಣ್ಮುಗಿದು ಕೊನರ ಕನಸೋರ್ನೆಯುಂ ಚಂಚೂಪುಟದಿನಡಿಗಡಿಗೆ ಮೇದೊಲ್ದು ಪುಯಲ್ಬುವ ಪಡಿಯಱವಕ್ಕಿಗಳ ತಂಡದಿಂ, ನಿರಿಗದ ಮರಂಗಳೊಂದು ಪೊದೆಯಿಂ ಪುದಿದ ಬನಗತ್ತಲೆಯೆ ಕಾಱ ಕರ್ಮುಗಿಲೊಡ್ಡಾಗೆ, ಇದಿರ್ಗಳಿಗೊಳಿಪ ಮಾಸಳ್ಳಿಯ ದಾಂಗುಡಿಯ ನುಣ್ಬೊಗರೆ ಬಳ್ಳಿಮಿಂಚಾಗೆ, ಅತಿಗಡಿಗೆ ಜಗ್ಗಿಪ ಮೋಳಂಬದ ಮೊರೆಯೆ ಗುಡುಗುವ ಬಲ್ದನಿಯಾಗೆ, ಪೂದೊಂಗಲತ್ತಣಿಸೆಡೆವಿಡದೆ ಪಸಿವ ತನಿಜೇನೆ ಸೋನೆಯಾಗೆ, ಕಾರ್ಗೆತ್ತು ನಾಟ್ಯಮಾಡುವ ನೊರ್ಕಿನ ಸೋಗೆನವಿಲ್ಗಳೊಂದು ಕೂಟದಿಂ ಬನಂ ಮನಂಗೊಂಡುದು.

ಈ ತೆಱನೊಂದು ಮಾಟ್ಕೆಯಿಂ ಮಾಧವನೋಲಗದ ಸಾಲೆಯೆಂಬಂತಿರೆ ಕರಂ ಸಿಂಗರಂಬೆತ್ತು ತೋಱಪೊತ್ತಿನೊಳ್— ಕಂಕಣವಲಯಂಗ

ೞಂ ಮನೋಜ್ಞಮಪ್ಪ ಸುಮೇರುವೆಂತಂತು ಕಿಸುವೊನ್ನ ಪಿಂಜರಿಯ ಚೆಂಪವಗಲ್ಲ ಕೋಂಟೆಯ ಮೂವಳಸಿನಗೞಿಂದೊಳಗೆ ಕರ್ಮಣಿಯ ನೆಲೆಗಟ್ಟಿಂ ಪಳಿಕಿನಜಱಿಯ ಭಿತ್ತಿಯಿಂ, ಬಜ್ಜರದ ಜಂತೆಯಿಂ, ರನ್ನದೊಳ್ಗಂಬದಿಂ, ಮುತ್ತಿನ ಜಲ್ಲರಿಯಿಂ, ಪುಷ್ಪರಾಗದ ಪೊಸಂತಿಲಿಂ, ಗೋಮೇಧಿಕದ ದಾರವಂದದಿಂ, ಪವಳದ ಪಡಿಯಿಂ, ಮರಕತದೊಂದು ಕಳಸದಿಂ ತಾರಗೆವಟ್ಟೆಮುಟ್ಟೆ ನಿಗುರ್ದ ಸೈಪಿನಾಗರಂಬೋಲ್ ಮಣಿಸತ್ತಿಗೆಯ ಮೊಗಮಂಟಪದ ಬಣ್ಣವಟ್ಟಿಗೆಯ ಅಮಳಗುೞಿಯ ನಂದ್ಯಾವರ್ತದ ತೋರಣದೋರಣದ ಲೋವೆಯ ಮದನಗೈಯ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ.

ಇಂತು ಸೊಂಪಿನ ಪೆಂಪಿನಲಂಪಿನೊಂದು ಚೊಕ್ಕಳದ ನೀರ್ದಾಣಮುಂ ಬನಮುಂ ದೇಗುಲಮುಂ ಕಂಡು ಬಗೆವಗೆಯ ಕಟ್ಟೆಚ್ಚರಿಯಿಂ ತನ್ನ ಮುತ್ತಮಂತ್ರಿಗೆ—ಅಯ್ಯ ಸುಮತಿ! ಕಂಡೆಯ! ಈಕಟ್ಟೆಬಿರ್ನ ಬೇಸಗೆಯ ಬೇಗೆಯೊಳಂ ಬತ್ತದೆ ತುಂಬಿ ಬೆಳ್ಳಂಬರಿವ ಬೆಂಚೆಯುಂ. ಓ! ನೋೞ್ಪೊಡೀಬನಂ ಸಂದ ಸುರನಂದನಮನೇಳಿಕುಂ ಚೋದಿಗಮಲ್ತೆ! ಇದೆಕೊಳಾತೋರ್ಪುದಾತೋರ್ಪುದೊಂದು ದೇಗುಲಂ ಬೆಳ್ಳಿವೆಟ್ಟಿನ ಪಾಂಗಿಂ. ಆವ ದೇವತೆಯಿರ್ಕೆಯೊ? ಆವ ಪೆರ್ಮೆಯ ಗೊತ್ತೊ? ಪೇೞ! ಎಂದು ಬೆಸಗೊಳಲೊಡಂ: ಮಂತ್ರಿಪಂ-ಜೀಯ! ಇಂತಿವೆಲ್ಲಮಾತೋರ್ಪ ಪೇೞಿಲ್ಗೊಡೆಯಂ ಸುಮದಂಗೊಲ್ದು ಬಂದೀದೇಗುಲದೊಳ್ ನೆಲೆಗೊಂಡ ಕಾಮಾಕ್ಷೀದೇವಿಯೊಂದು ಮೈಮೆಯೈಸೆ. ಅಂತದಱಿನೀಪುಣ್ಯರೂಪಿಣಿಯ ದರ್ಶನಂಗೈದು ಬಲಂಗೊಂಡೊಡೆಮಗೆಲ್ಲಂ ಗೆಲ್ಲಮೆಂದಂ. ಆನುಡಿಗೆ ಶತ್ರುಘ್ನಂ— ಅಂತೇಂ ಸುಮದನಾವ ನಾಡೊಡೆಯಂ? ಏಕೆ ದೇವಿಯುಂ ಮೆಚ್ಚಿಸಿದಂ? ಏವಂದಳಾರವಳ್? ಆಂ ತಿಳಿವಂತು ಬಿತ್ತರಿಸಯ್ ಎಂದು ಕೇಳ್ದಂ. ಅವರ್ಗೆ ಸಚಿವಂ:- ಲಾಲಿಸೈ. ಈಭೂಕಾಂತೆಗೆ ಲಲಾಮಮೆಂಬಂತಿರಿದೆ ನಂದನಕೆ ಕೆಲನೊಳೊಪ್ಪುವಹಿಚ್ಛತ್ರಪುರಂ. ಈನಾಡಂ ಸುಮದನೆಂಬೊರ್ವನಱಿಕೆಯರಾಯನಾಳ್ವಂ. ಮುನ್ನಮೊರ್ಮೆ ತನ್ನ ಪೊೞಿಲನರಿರಾಯರ್ ಸೂಱೆಗೊಳಲೊಡಮದುವೆ ವೈರಾಗ್ಯಮುಂ ಪುಟ್ಟಿಸೆ

ಹತಭಾಗ್ಯಂ ವನಂಬೊಕ್ಕು ಕಾಮಾಕ್ಷಿಯನೊಲಿಸಲ್ಕೆಂದು ತಪದೊಳ್ ನಿಂದಂ. ತರಗೆಲೆಯನುಂಡು ಮೂಱುಂಬರಿಸಂ, ನೀರುಂಡು ಮೂಱುಂಬರಿಸಂ, ಗಾಳಿಯನುಂಡು ಮೂಱುಂಬರಿಸಂ, ನಿರಾಹಾರಂ ಮೂಱುಂಬರಿಸಂ, ಕಟ್ಟುಗ್ರಂ ತಪಂಗೈದಂ. ಇಂತು ಪನ್ನೆರಡು ಕಾಲಂಬರಂ ತಪದೊಳಿರ್ಪುದುಮಂ, ಕಡಲ್ ಕುದಿವನ್ನಂ ನೆಲೆವಟ್ಟು ಜರ್ಗುವನ್ನಂ, ವನಂ ಬೇವನ್ನಮಾಶಾಧಿಪರ್ ಗೆಂಟುಗೆಂಟಿನೊಳೋಸರಿಪನ್ನಂ, ತಪಃಪ್ರಭಾವಮೊಂದೇಳ್ಗೆವೆತ್ತು ದೆಸೆದೆಸೆಯೊಳಂ ಪಸಗೆ ಕಂಡು, ಪುರುಡಿಂ ಮೆಯ್ಗಣ್ಣಂ ಕೀಳ್ಬಗೆಯಿಂ ತಪೋವಿಘ್ನಮಂ ನೆಗಳ್ಚಲೆಂದು ತಱಿಸಂದು, ಕಾಮನಂ ಬರವೇಳ್ದು, ತಾನುಮಾತನುಂ ಮಂತಣದೊಳಿರ್ದಿಂಬೞಿಯಂ— ಎಲೆ ಕಾಮ! ಆನುಂ ನೀನುಂ ತಪಸಿಗಳ್ಗೆ ಪಗೆಗಳಲ್ತೆ! ಆರಾಯನ ತಪಕೆಂತುಂ ಬನ್ನಮನೊಡರ್ಚಯ್. ಅಚ್ಚರಸಿಯರಂ ನಿನ್ನ ಬೆಂಬಲಕ್ಕೆ ಬೞಿಯಟ್ಟುವೆಂ, ಎಂದಂ.

ಮನೋರಮೆ— ಅಣ್ಣ! ನಾಕಲೋಕದ ದೇವರ್ಕಳ್ಗಮೀನರಲೋಕದ ತವಸಿಗಳ್ಗಮಾವ ಮೊಱೆಯೊಳ್ ಪಗೆ ಪೇೞ್?

ಮುದ್ದಣಂ— ಓಚ್ಚೇರೆಗಣ್ಣ ಪೆಣ್ಣೆ! ಮೊರೆಯಂ ಪುದುವಂ ಪಾರಿತ್ತಿಲ್ಲಕ್ಕುಂ; ಜತಿಗಳೊಳೊಂದು ಪುಟ್ಟುವಗೆಯ್ಯೆಸೆ! ನೂಱೇಂ? ನಾಡಿಗರ್ ದಿನದಿನಂ ಬೇಳ್ವೊಂದು ಹವ್ಯಮನುಂಡುಂಡು ಸವಿಗೊಂಡ ಬೋಳೆಯರೆತ್ತಾನುಮೊರ್ವನೀನಿಚ್ಚವಲಿಯೆಡೆಯಿಂ ಪುರುಳ್ಗಾಣದೆ ಪೆಜ್ಜೆವಿಟ್ಟು ತಿರುಳಂ ಸಮಂತು ಪುರುಳಂ ತೋಱುವ ಜೋಗವೆಣ್ಗೆ ಸಂಚುಗೈಯಲೊಡಂ ಕಱುಂಬಿ ನಿರ್ನೆರಮೀವ್ರಜ್ಜಗಕ್ಕೆ ತಡೆವರ್ಪರ್. ಕಳ್ಗಡಿದರೇಂ ಮಾತರೊ? ನೂಱುಂಜನ್ನದೊಂದು ಬಲ್ಮೆಯಿಂ ಸಗ್ಗದೊಳ್ ಬಾೞ್ವಿಂದಿರನುಮೀಜೋಗವಟ್ಟೆಯುಂ ಕಂಡಿರಂ.

ಮನೋ— ಉಂ! ಪೇೞ್ಕೆ. ಮುಂತೇಂ ಮುಂತೇಂ? ಕಾಮನೇನೆಂದಂ?

ಮುದ್ದ— ಆಱಿನೆಂಬನೆ! ಸುಮತಿ ಶತ್ರುಹಂಗುಸಿರ್ದುದಂ ಕೇಳ್.

ಸುಮತಿ- ಕೇಳಯ್! ಆಗಳ್ ಮದನಂ ತಳ್ವಿದೆ ಕೋಲ್ಬಿಲ್ಗಳಂ ಕೊಂಡು ಪೊಱಱಡಿಯೊಳ್ ಬರ್ದಲರೊಡೆಯಂಗೆ— ಕಾಣಿರೆ ತನ್ನ ಬಲ್ಲಾಳ್ತನಮಂ! ಜಗಮಱಿಕೆಯ ಸೂಂತೆನರೆವೆಣ್ಣಾಗನೆ! ಬಾನಗಲಂ ತೊಱಲ್ವ ಚೆಂದಮಂ ಕಡೆಗೆ ತಾರೆಯುಂ ಮಱೆಸ್ವಗನೆ! ಏತಱ ಮಾತೊ! ಎನ್ನ ನನೆಯಂಬಿನ ಮೊನೆಗೆ ಸುಗಿಪಪಲ್ವೆಯುಂ ನೀಮೆ ಶರಣ್ಬೊಕ್ಕುದೇನಱಿಯುದುದೇ! ಪೋ ಬಡಗೊಂಡಿದವಸಿಯೇಂ ಮಂ? ಆಜೋಗವಟ್ಟಿಗೆಯುಮಾಬೆಳ್ಜಡೆಯುಮಾಬೆಂಬೂದಿಯು ಪೂಸುಮಾಚೆಂಗಾವಿಗಪ್ಪಡಮುಡೆಯುಂ ಮೋಣಾವಾಸುಂದೊಮಲುಮೆನ್ನೀ ಎಸುಗೆಯ ಕೂರಂಬಿನ ನನೆಯೊಂದು ಕುತ್ತೆಸಳ ಜಾಲೆಗೆ ಸೀಕರಿವೋಗದೇಂ ಮಾಣ್ಗುಂ. ಸುತ್ತೇಂ? ಎನ್ನೊಂದುಗೆಯ್ಮೆಯಿನಾಗಾವಿಲ ಜೋಗಿಯನೆರ್ದೆಯನುಗಿಬಗಿಮಾಡಿ ಬಗೆಯಂ ಕದಡಿ ತೋಱಿಪ ಗಾರಿಗೆಗಂಪಿಗೆ ಜೆನ್ನನೆ ಬಪರ್ ಕುನ್ನಿಯಂತಿರೆ ನಿನ್ನಾರಂಭೆಯರ ಬೆಂಗೊಂಡು ಬಪರ್ಂತು ಪೊಡದಿರೆ ಬಿಂಕವ ಬೀರನೆ! ಸಂತಮಿರೆಂದು ಪೂಣ್ದು ಕಾಮಂ ಪ್ರಕಾಸಂ ತನ್ನ ಪುಸಿವಡೆವೆರಸು ತಪೋವನವತ್ತಗ್ಗೈತರುತುಮಿರ್ದಂ. ಆತಂಗೆ ಬೆನ್ನೊಳೆ ಊರ್ವಶಿ, ರಂಭೆ, ಮೇನಕಿ, ತಿಲೋತ್ತಮೆ, ಮಂಜುಘೋಷಿ, ಘೃತಾಚಿ ಮುಂತಪ್ಪ ಅಚ್ಚರಸಿಯರ ಪೆಣ್ಬಡೆ ನಡೆತಂದುದು.

ಅನ್ನೆಗಮಾತನ್ನ ಚಚ್ಚುಮೆಚ್ಚಿನ ಚೆನ್ನಿಗಗೆಳೆಯಂ ಪಗೆಯೊಳೆತ್ತಿವ ಪೊರ್ಂದೊಸಗೆಯಂ ಮಱಿದುಂಬಿಗಳ್ಂಬೋಲೆಕಾಱರ ಬಗೆಯೊಳಱಿತು ಸಂತಸಮುಗುಂದಲೆಯಾಗೆ ಪಡೆವೆರಸು ನಡೆತರ್ಪ ಬಿತ್ತಿಗನುಕ್ಕೆವಕೆಂಮಬಸಂತಂ ಮಡಲ್ತುದಾಂಗುಡಿಯಿಡುವೆಳವಳ್ಳಿಯೆ ಬಳ್ಳಿದೋರಣಮಾಗೆ ಪಚ್ಚನೆ ಬೆಳೆವ ಬಾಜೆಲೆಯೆ ಪೂಸಕಾವಣಮಾಗೆ ಕಮ್ಮಲರ್ಜೊಂಪಮೆ ಜಲ್ಲರಿಯಾಗೆ ಪಣ್ತುತೊಂಗುವ ಪಣ್ ಫಲಾವಳಿಯಾಗೆ ಸಮೆದೊಂದೋಲಗದ ಶಾಲೆಯೊಳ್ ಸುರಿವ ಜೇಂಬನಿಯ ಸಾರಣೆಗೈದುಮುದಿರ್ದ ಚೆಂಬೊಗರಲರ್ಪುಡಿಯ ಬಣ್ಣವಳ್ಳಿಗಳಂ ಬರೆದುಮುಸುಗೆಯ ಮಾಮರದ ಚೆಂದಳಿರ ಗದ್ದುಗೆಯಂ ನೇರ್ಪಡಿಸಿಯುಂ ಬಿರ್ದವರ್ಪ ಪೊಱ್ತಂ ಪಾರುತುಮಿರಲೊಡಂ–ಆವೇಳೆಗೆ ತನ್ನಾಗಮನಮಂ ನೆಱೆ ತಿಳಿಪಲ್ಕೆಂದು ಪೂಗಣೆಯನ

ಟ್ಟದ ದಕ್ಷಿಣಾನಿಲಂ ಮುಂತೆವಂದು ಸೊಗದ ಸುಗ್ಗಿವೆಸರೋಲಗಸಾಲೆಯ ಬಾಗಿಲ್ವಾಡದೊಳ್ ನಿಂದಿರ್ಪಾಬಸಂತನಂ ಕಂಡೆಱಗಿ ತನಗ್ಮಾಣ್ಮನಟ್ಟದ ಪೊವ್ರಡಮನೊಪ್ಪಿಸಿ-ಜೀಯ! ಈನೆಲೆಯೊಳೊರ್ವಂ ಪಗೆ ಜೋಗಿ ಬೈತಿರ್ಕುಂ ಗಡ! ಆತನಂ ಬಾಲ್ದಲೆವಿಡಿವ್ರೊಡೀಗಳ್ಮ್ಮಾಕಾವರಾಯುಂ ವಂಡೆತ್ತಿ ಬರ್ಕುಮಂತವಱಿನೀಯೊಸಗೆಯಂ ನಿಮ್ಮೊಳಾಡುವುದೆಂದೆನ್ನಂ ಕಳಪಿದನೆಂದಱಿಕೆಗೈದಂ.

ಆನುಡಿಗೆ ಬಸಂತಂ ಸಂತಸದೊಂದು ಕೌವರೆಯೊಳ್— ಬಂದನೆ! ಲೇಸು! ಲೇಸು! ಅಂತೆಂದೆ ಏಪ್ರೊಬ್ಬಿಂ ಪಾರ್ದು ನಿಂದಿರ್ದಂ. ನಿಮ್ಮಾಳ್ದಂಗೆ ಮೇಲಕ್ಕೆ! ಎಂದು ಬಣ್ಣನೆಯೆರಲ್ನುಡಿಯಿಂ ಮನ್ನಿಸಿ ದೂದುವಂದಾಗಾಳಗೆ ಪಡಿಬೀಡಾರಮಂ ಕುಡಿಸಿದನಿತಱೊಳ್ ಮುಂದೆಸೆಯ ಪಡಿಯೊಳ್— ಇದೆ! ಬರ್ಪಂ! ಎಂಬೊಂದುಲಿ ಕೇಳಿಸಲೊಡಂ; ಸಸಂಭ್ರಮಂ ಲತಾವನಿತೆಯರ್ ಪೂವಲಿಗೆದಱೆ, ಬಲ್ಪಕ್ಕಿಗಳ ತೋರದನಿಯೊಸಗೆವಱೆಯೆತ್ತಂ ಮೊೞಗೆ, ಮಯೂರಿಗಳ ಲಾಸ್ಯಮೊಂದೇೞ್ಗೆವೆತ್ತಿರೆ, ಮಾಧವಂ ತನ್ನ ಗಿಳಿಗಳ ಮಱಿಗೋಗಿಲೆಗಳ ಪಸಾಯ್ತರಿಂ ಕೂಡಿ ಭೋಂಕನೆೞ್ದು ಇದಿರ್ವಂದು ಗಾಡಿಯಿಂ ಬರ್ಪ ಚೆನ್ನಪೊಂಗನಂ ಕೈಗೊಟ್ಟು ಕೂಡಿವಂದೋಲಗದ ಸಾಲೆಯಂ ಪುಗಿಸಿ ಎಳೆದಳಿರ ನಲ್ವಾಸಿನೊಳ್ ಕುಳ್ಳಿರಿಸಿ ತಾನುಮೊತ್ತಿನೊಳ್ ಮಂಡಿಸಿ ಸೊಗಂಗೇಳ್ದು ಕಿಱುದಾನುಂ ಪ್ರೀಲ್ತುಪಚರಿಸುತಿರ್ದಂ.

ಇಂತಿರ್ಪುದುಂ ತನ್ನ ನಲ್ಗೆಳೆಯನೊಂದು ಸಪರ್ಯೆಯಿಂ ಸಂತುಷ್ಟನಾಗಿ ದಪ್ಪಗಂ ಪಡೆವೆರಸುೞಿದ ಕಡೆವಗಲನಿರುಳಂ ಪುಸಿಗಾಳಗದುಜ್ಜುಗದೊಂದೆಣಿಕೆಯಿಂ ಕೞಿದು ಪ್ರೊಲ್ತಱೆ ತನ್ನಂಕದ ತುಱಿಲಾಳ್ಗಳ ಬಲ್ಗೈ ಬಂಟನಪ್ಪ ತೆಂಗಾಳಿಯಂ ಕರೆದು— ಅಯ್ಯಾ! ಇದೆ ಕೆಲದ ಬನದೊಳೊರ್ವಂ ತಪಸಿ ಎಮ್ಮೊಳಾದ ಪಗೆಯಿಂ ಮಾಗುವಟ್ಟು ಕೆಮ್ಮನಿರ್ಕುಂ. ಅಂತವಱಿಂ ನೀಂ ಪೋಗುತುಮೆಸ್ಮಾಳ್ತನದಗ್ಗಳಿಕೆಯುನೆಮ್ಮೀಪಡೆಯ ಪವಣನಣಿಯುಱಿಮೊರೆದು ಎಮ್ಮೊಳ್ ಪಗೆಗೊಂಡು ನಿರ್ನಿಮಿತ್ತದಿನಲರಂಬಿಂಗೆ ತಲೆಯಂ ಮಾಱುಗುಡದೆ ಮಱೆವಾಲ್ವುದೊಳ್ಳಿತೆಂದು ನಯಂಬೇಱ್ದು ಬಾರೆಂದು ನಿರವಿಸಿ ದೂದಟ್ಟಿದಂ. ಆನುಡಿಗೊಪ್ಪಿ ದಾಡುಗಾಳನಲ್ಲಿಂ

ತಳರ್ದ ಓರೊಂದು ನೆಲೆಯ ಕಾತ ನೇಱಿಲೆಂಬ ತ್ರಿಟ್ಟನೇಱಿಯುಂ, ತಳಿರ್ತ ಚೆನ್ನಸುಗೆಯೆಂಬ ಜಾದುವೆಟ್ಟನಿಱಿಪಮಂ, ಪೂತ ಬಳ್ಳಿವೊದಱೆಂಬ ಸಱುವೊಳ್ ನುಸುಳ್ದುಂ, ಕೆಱಂಗಿದ ತಮಾಲಮೆಂಬ ಕಾಜ್ಪೊಚ್ಚಮಂ ಪಾಯ್ದುಂ, ತೂಗಿ ತೊನೆವ ಪೂಗೊಂಚಲೆಂಬ ಬಳಿಯುಂ ಕೊಂಡು ಮೆಲ್ಲಮೆಲ್ಲನೆ ತವಸಿಯು ಪೊರ್ಗೈತಂದಂ.

ಅಂತು ಬಂದು ಕಟ್ಟಿದಿರ ಜೋಗಿಯಂ ಕಂಡು ಭುಗಿಲೆಂದುಂ ಭೋಯೆಂದುಂ ರಯ್ಯೆಂದುಂ ಸುಯ್ಯೆಂದುಂ ತಮ್ಮೊಡೆಯನಾಣತಿಯುಂ ಪೇೞಲೊಡಂ; ಯೋಗಿ ತಾಂ ಮಱುನುಡಿಯದೆಯುಂ ತನ್ನಂ ಮನ್ನಿಸದೆಯುಮಿರ್ಪುದಂ ಕಂಡು, ಕಿಸಿಸಿಂ— ಆಃ! ನುಡಿಯಂ ಗಡ! ಬಿಗುರ್ಪು ಗಡ! ಏನೆಂಬ ಪೆಂಪೊ! ನೋಡುಗೆ ಎಮ್ಮೊಂದು ಬಲ್ಮೆಯುಂ! ಈಗಳೆ ಸೆಱೆವಿಡಿದು ಕೊಂಡುಯ್ದು ಕಾವಂಗೊಪ್ಪಿಸುವೆನೆಂದೊಡನೆಯೆ ರಾಜಯೋಗಿಯುಂ ಮೇಲ್ವಾಯ್ದಂ. ಅಂತು ಬಿಜ್ಜನೆ ಮೇಲ್ವಾಯ್ದುದಂ ಕಂಡರುಂಟು; ತಪದೊಂದು ಬೇಗೆಯ ಸೂಡಿಂ ನಾಡೆ ಪೊತ್ತಿ ಸೀಕರಿವೋದುದಂ ಕಂಡರಿಲ್ಲ; ಪಲವೇಂ. ಇಂತು ಬಂದ ತೆಂಗಾಳಿ ನಡೆಗೆಟ್ಟು ಕಾಣದಪ್ಪುದುಮಿತ್ತಲ್ ಕಾವನಿನಿವಿರಿಮಂ ಪೊೞ್ತು ಊಱಗದೊಂದು ನೆವದಿಂ ಪೋಗಿಯುಂ ಬಾರದ ಗಾಳಿಯಿರವಂ ಬಗೆದು, ಎಂತು ಬಡಕಿತ್ತಡಿಯ ಲಂಚದ ಸಂಚಿಂಗೊಡಂಬಟ್ಟು ಮಾಣ್ದನೆಂದು ತಱಿಸಂದು—ಆಃ! ಈಪಡೆಯಿನೇಪ್ಪುದೆಂದು ಕಾಯ್ಪಿಂ ತಾನೆ ಕೈದುವೊತ್ತು ನೆರೆಯ ಬನಕ್ಕೈತಂದು ಸಮಾಧಿಯೊಳಿರ್ಪ ರಾಯನಂ ಕಂಡಂ.

ಇಂತಿರೊಂದು ಮಾಟ್ಕೆಯಿಂ ಗಟ್ಕನೆ ಬಂದು ನಿಂದಿದಿರ ಜರೆದು ನರೆಯ ಮುಡಲ್ತ ಸೆರೆಮುಱುಗಲ ಸುಕುರ್ಂದೊವಲ ಅಸಿಪೊಡಲ ಬಱುವಂ ಜೋಗಿಯಂ ಮಾಲಿಸುತುಂ-- ಆ! ಈಯೆಲ್ಲುಡಿಂಗೇಕೊ ಎಮ್ಮೊಳ್ ಪಗೆಮಾಟ್ಪೊಂದು ಬೆಸನಂ? ಓ! ಆನುಮೇನೆಂದು ಪುರ್ಚುಗೊಂಡು ಕೈದುವೊತ್ತು ಕಾದುವೆನೋ? ತೊಂಡುಗೆನೆವ ಪುರುಳಿ ಸಾಲದೆ? ಬಚ್ಚತಂ ಕುಕಿಲ್ವ ಕೋಕಿಲೆ ಸಾಲದೆ? ತಣ್ಣನೆ ತೀಡುವ ಬನಗಾಳಿಯೊಂದು ಸಾಲದೆ? ಎಂದು, ಮತ್ತಂ ಪರಿಭಾವಿಸಿ,—ಬಲ್ಲೆನೊಲ್ಲೆ ನೀಲಂಚವಣಿಗರಂ. ಆಗಳಿಸಂಧಿಗೆಂದು ಬಂದ ತೆಂಗಾಳಿ ಏಂ ಗೆಯ್ಗುಂ. ಉಗುರಿಂ ಚಿವುಡಲ್ತಗುಮೊಂ

ದು ಕಜ್ಜಕ್ಕೆ ಕೊಡಲಿಯೊಂದು ನೆರವಂ ಪಾರ್ವರೆ? ಸಂದೊಂದಂಬಿನೊಳೆ ನೋಯಿಸದೆ ಬಿಡೆನೆಂದು ಮಱೆಯೊಳೆ ನಿಂದು ಬಾಣಪುನಿಸಲೊಡರ್ಚಿದಂ. ಅಂತು ಬಗೆದಱತು ಕಾವಂ ಕಬ್ಬುವಿಲ್ಲಂ ತುಡುಂಕಿಯುಂ, ತುಂಬಿವೆದೆಯನೇಱಸಿಯುಂ, ಪೂಗೋಲ್ಗೆ ಕೈಸೀಡಲೊಡಮೆನಗೆ ತನಗೆಂದು ಮೂಡಿಗೆಯಿನೊಂದಱ ಬೆಂಬಱಯೊಳೊಂದು ತಲೆದೋಱದುವು. ಪಿಡಿವಾಗಳೊಂದು; ಪಿಡಿಯಿಂ ತುಡುವಾಗಳೆರಡು; ತೊಟ್ಟನೆ ಸಿಡಿವಾಗಳ್ಮೂಱು; ಗುಱಿಯಂ ಕೆಣೆವಾಗಳ್ ನಾಲ್ಕು; ಪಂಚಾಯುಧನ ಪೊಸವು ಸೆಗು ವಿಶಿಖಂಗಳ್. ಮುನ್ನಮೋರೊಂದು ಮತ್ತಮೀರೆರಡು ಮೇಣ್ ಮೂಮೂಱು ಬೞಕ್ಕಂ ನಾಲ್ನಾಲ್ಕು ಕಡೆಯೊಳ್ಳೈದೈದು ತಾವರೆಯ ಕನೆಯ್ದಿಲ ಮಲ್ಲಿಗೆಯ ಮಾವಿನ ಪೊಸಅಸುಗೆಯ ಕೂರಂಬುಗಳಳುಂಬಂ. ಆದೊಡಮೇನೊ! ದೈವದ್ರೋಹಿಗಾವುದು ತಾಂ ಸಲ್ಗುಂ. ಈ ಮಾಟ್ಕೆಯಿನಾರ್ದೆಚ್ಚ ಮಲರಂಬುಗಳ್ ಗೋಱಗಲ್ಗೆ ತೆತ್ತಿಸಿದ ಕಲ್ಲಂಬುಗಳಪ್ಪುದುಂ ಮಯಣದ ರೂವ್ರೊಂದು ಕಿಚ್ಚಸಿದಿರ್ಚಿ ಮೆಯ್ಯ್ಬೞವಂತಿರೆ ಮದನಂ ಪೋಗಿ ಯೋಗಿಯಂ ಕೆಣಕಿ ಕಡೆಯೊಳ್ ತಪದುರಿಯಿನಳವಱದಂ.

ಆವೇಳೆಯೊಳೀತಂಗೆ ನೆರಮಾಗುತುಂ ಬೀಡಿಕೆಯಿಂ ಕಟ್ಟೆರದಿಂ ಪೆಣ್ಬಡೆಯ ನೀಱವೆಣ್ಗಳ್ ಬಂದೊದವಿದರ್.

ಎಸೆವಲಕಗೆಯಿಂ ಪೊರೆದ ಮೆಲ್ಲಡಿಯ ನಡೆಯ ಬೆಡಂಗಿನೊಂದು ಬಾವದಿಂ ನೆಲೆವೞಯ ಕಲ್ಗಳ್ಗೆ ರಾಗಮನೊಡರ್ಚಿಯುಂ, ಸೂಡಿದ ಮುಡಿಯಿನಡಿಗಡಿಗೆ ಸೂಸುವ ಬಿಡುಮಲ್ಲಿಗೆಯ ಕಂಪಿನೊಡವರ್ಪಾಱಡಿಗಳ್ಗೆ ನಡೆವಳ್ಳಿಯ ಜಿಮೆಯುಂ ಪುಟ್ಟಿಸಿಯುಂ, ಪೆಱನೊಸಲೊಳ್ ಕಱೆಯ ಪಾಂಗಿಸಿಂದಲೆವ ಮುಂಗುರುಳಂ ನೂಂಕೊತ್ತುವೊಂದು ನೆವದಿಂ ತೋಳ ಮೊದಲಂ ತೋರ್ಪಡಿಸಿಯುಂ, ಕೆಕ್ಕೆಯ ಕತ್ತುರಿಯ ಮಕರಿಕೆಗಂಡಲೆದು ಮುಸುಱಲಪ್ಪಳಿಸುವ ಮಱಿದುಂಬಿಯ ಕೂಟಮಂ ಮುಱಿಮುಱಿದು ನೋಟ್ಪ ಭಂಗಿಯಿಂ ತಮ್ಮ ಕೊನೆಗಣ್ಗಳ ಕಾಂತಿಯಿಂ ಬೆಸೆಯನೆತ್ತಂ ಬೆಳಗಿಯುಂ, ಬಿಣ್ಪುವೆತ್ತ ಬಟ್ಟಮೊಲೆಗಳೆರ್ದೆಯನೇಱಯೊತ್ತಿ ನಿಗುರೆ ಘನನಿತಂಬಂ ಕದಕ್ಕದಿಸೆ ಸ್ಪಸಿನಡು ಬಳ್ಕೆ ಬಂದು ತಪದೊಳಿರ್ಪ ರಾಯಂಗೆ ಕಟ್ಟಿ

ದಿರೊಳಾದರ್. ಆಪೊೞ್ತು ಕಾವಂ ತನಗೆ ಬೆಂಬಲವಾಗೆ ನಡೆತಂದ ದಂಡಂ ಕಂಡಳವಿಯೊಳಾರ್ಗು ಸಾರ್ದು ಬಿಲ್ಮುಱಿಸನ್ನಂ ತುಂಬಿವೆಬೆ ಕಡಿವನ್ನಂ ನಿಷಂಗಂ ಮುಗಿವನ್ನಂ ಐವಡಿಗಣೆಯಿಂ ಮಱುವಕ್ಕದೊಳರ್ದಾರ್ ರಾಯನನಿಸುತಿರ್ದಂ.

ಇತ್ತ ಮುಂದೆಸೆಯೊಳ್ ಬಂದು ಸಂದ ಸಿಂಗಾರಿಯರುಂ ಸಂದಣಿಸಿ ಕಾದಿದರದೆಂತೆನೆ:—

ಅವರೊಳೊರ್ವಳ್ ಸೋರ್ಮುಡಿಯ ಸೊರ್ಕಿನ ಮಂಜುಘೋಷಿಯೆನಸುಂ ದೂರದೊಳರ್ದು ರಾಯಂಗೆ— ಎಲೆ ಮಾರಾಯ! ಇದೇತಱ ಮಾಟವೊ? ಮಡದಿಮಕ್ಕಳಂ ಪ್ರೌಢವಿದ್ಯೆ ಸಿರಿಯನುೞಿದೀಕಾರಡವಿಯೊಳ್ ಮೂಗುವಟ್ಟಿರ್ಪೊಂದು ಹದನೇಂ? ಕಲಿ ಸೋಂಕಿದಂತಿರೀಕರ್ಮುಲೆಯಂ ನೆಱೆ ಪೊಕ್ಕು ಬಾೞ್ವ ಬವಣೆಯದೇನಯ್? ಪುಲಿಯಿರ್ಕುಮಾನೆಯಿರ್ಕುಂ ಚಲನಂಕರ ಲೆಂಕ! ನೀನೆ ಮಂಕಡನಾಗ! ಎಂಬುದುಂ;

ಆನಿತಱೊಳ್ ಮತ್ತವೊರ್ವಳ್ ಕೊಂಕುಗುರುಳ ಬಿಂಕದ ರಂಭೆ ತನ್ನ ಮೇಲುದಂ ಬರೆಸೆಳೆಯುತುಂ ತಮ್ಮವರ್ಗೆ ಸುಟ್ಟಿಸಿ— ನೋಡಿರೆ! ಕಾಯ್ವ ಬೇಸಗೆಯ ನೇಸಱ ಸೂಡೆನ್ನದೆ ತೀಡುವ ಕುಳಿರ್ಗಾಳಿಯ ಕೋಡೆನ್ನದೆ ಕಱೆವ ಕಾರ ಸೂಬ್ಸಿರಿಯ ಜಿನುಂಗೆನ್ನದೆ ಮರವಟ್ಟು ಮೋನದಿಂ ಪ್ರಚುರ್ಗೊಂಡನಂತುಮಿರ್ಪ ಕಾಡಾಡಿರಾಯನೊಂದು ಗೆಯ್ಮೆಯುಂ! ಎಂದು; ಮುಂದೆ ನಿಂದು ಸುಮದರಾಜಂಗೆ—ಪೋ! ಮಾಣೆಲೆ ಜೋಗಿ! ಏನ್ರಬೊ ನಿನ್ನೀತಪಮೇವುದೊ ಜಪಮೇವುದೊ ಜಾನಂ? ಮುದಿರ್ವ ಕಣ್ಣವೆಯುಂ ಬಿದಿರ್ಚಿ ನೋಡೆಮ್ಮಂ. ಇದೆ! ಬರ್ದಿಲ ನಾಡಿಗರ್ಗಂ ನೋಡಲ್ಬಾರದಚ್ಚರಸಿಯರ ನಲ್ಬೆಂಡಿರ್ ನಿನ್ನಸಾರಯ್ಯೋಡೆಂದು ಬಂದು ನಿಂದಿರ್ಪರ್. ನೀನಿಂತು ಗುಮ್ಮನಂತಿರೆ ಕಣ್ಗೊಳಿಸಿಂ ದಿಟ್ಟಿಸದಿರ್ಪುದೇಂ? ಆವ ಸೊಗದ ಭೋಗದ ಬಿಚ್ಚೆಯುಂ ಕಿಚ್ಚೆತ್ತಲಾಟಪೆಯೊ? ತಿರೆಯೊಳ್ ಬಲ್ಲರ್ಗೆ ಕಾಟದ ಬೇಟದ ಕೂಟದೆಳವೆಂಡಿರೊಡನಾಟದಿಂ ಪೆಱತು ಭೋಗಮುಂಟೇ? ಬಳ್ಳಿಯೊಳ್ ಪಣ್ತು ತೊಂಗಲ್ದೊಂಗುವ ತೊಂಡೆಯ ಕಱಿವಣ್ಗೆ ದೊರೆವರ್ಪಾತುಂಬುಂಜವ್ವನದ

ನಲ್ಲೆಂಡಿರ ಚೆಂದುಟಿಯುಂ ಮಾಣ್ಮಾಣೆಂಬೊಂದು ನೆವದಿಂದೊಚ್ಚತಮುಣ್ಮುವ ಕಾಮಿನಿಯ ಕಂಠರುತಿಯು ಹೂಂಕೃತಿಯುಪಚಾರಮಾಗೆ ತುಂಬುಂಗೊಡನೊಳಟ್ಟೊಂದು ನುಣ್ಮಾಟಿಲ್ವರಲಿಂ ಪೃಟ್ಟುವ ಕುಳ್ಕುಳೆಂಬ ಮೆಲ್ಲುಲಿಯ ಪಾಂಗಿನಿಂ ಕಂಠಮೂಲದೊಳಡಿಗಡಿಗೆ ಕಳಕಳನಾದನೊದವೆ ಮುಂಬಲ್ಗಳಿಂ ಮೆಲ್ಲನೆ ಕರ್ಚಿಯುಂ, ತನಿರಸಂ ಸೋರ್ವವನ್ನಂ ನಾಲಗೆಯೂಱಿ ಸೀಯೆಂದು ಚುಂಬಿಸಿಯುಮಂತಂತಾಗಳಾಗಳೊಸರ್ವ ಅಧರಾಮೃತಮಂ ನಿಚ್ಚಂ ತಣ್ಣನೆ ಸವಿವ ಬದುರ್ಳ್ಕರ್ಗೆ ಬರ್ದಿಲರೇಂ ಪಾಸಟಿಯೆ? ಅಂತುಮಲ್ಲದೆಯುಂ ತನ್ನ ಏಱುಂಜವ್ವನದ ಕುಱುಪಿದೆನೆ ಏಱೆಟ್ಟು ಮೇಲುದುಮಂ ಪಾಱೆ ನೂಂಕುವ ಕಾಮನಾಟದ ಸೆಂಡೆಂಬಂತು ತೋರ್ಪ ಜೋಡೆಯ ಬಟ್ಟ ನೆಲೆಮೊಲೆಗಳಂ ತಳ್ತು ಪಿಡಿದಾಂಕಿಯುಂ ಮತ್ತಂ ತನ್ನಂ ಸೋಂಕಿ ಪಾಯ್ವ ಕಾದಲೆಯಂ ಬರಸೆಳೆದೊಳಅಟ್ಟೆನುಗುರ್ನಱಿಯಪ್ಪಿನಂ ಮಿಡಿದೊಡೆತೊಡೆವಮಳ್ಮೊಲೆಯೊಡೆದು ಪಾಲ್ ಸುರಿವಿನಂ ತನ್ನೆರಡುಂ ನಿಡುದೋಳ್ಗಳನಮರ್ದು ಬಿಗಿದು ತಳ್ಕೈಸಿಯುಂ, ಮೇಣ್ ಕಾಡುವ ಕಾಮಂ ಕೋಡುವ ಕಮ್ಮೆಲರ್ ಮೂಡುವ ಚೆಂದಮಂ ನೇಹಿಗರಾಗೆ ನೆಲೆವಾಡದ. ತೂಗುಂಮಂಚಮೆತ್ತಂ ಅಂಚೆಮುಪ್ಪಳಿ ನಲ್ಪಾಸೆತ್ತಂ ಬನದ ಬಳ್ಳಿವಾಡಮೆತ್ತ ಮೆಳದಳಿರ ಮೆಲ್ವಾಸೆತ್ತಂ. ಮತ್ತಂ ಜತೆಗೊಂಡು ಸಾರ್ದು ಇನಿವ್ರೊಟ್ಟಂ ಲಲ್ಲೆವಾತಿನ ಸೊಲ್ಲ ಸೊಗದೊಳಿರ್ದು ಮೆಲ್ಲಮೆಲ್ಲನೆ ಮೈಸಾರ್ಚಿ ನಡುನಂ ಸಡಿಲ್ಚಿ ನಿಱಿಯುಂ ಬಿದಿರ್ಚಿ ಬಗೆಬಗೆಯಿಂ ತನುತನುವನೊಂದುಗೂಡಿ ನೆರೆವ ಜಾಣ್ಮೆಯ ಹೆರಳಗರ ಭೋಗಮೆ ಭೋಗಮಲ್ತೆ! ಅಂತಿರೆ, ಗಾವಿಲ! ನಿನ್ನೀ ಮೂಱುಂದೆವಸದ ಬಾಳ್ಕೆಯುಂ ಸೊಗದೊಳಾಗಿಸದೆ ಜೋಗದೊಂದು ಜೆಮೆಯಿಂ ಬಾರ್ತೆಗೆಟ್ಟೇಕಾಡಂ ಪ್ರೋಕ್ಕು ನಿರ್ನೆರಂ ಛೀ! ನರಿಕರಡಿಗಳ ಬಾಯ್ಗೆ ತುತ್ತಪ್ಪೆಯ? ಬಾ! ಬಾರೆಂದು ಕರೆದಳ್.

ಮತ್ತಮಾಪ್ರೋಟ್ಟಿಂಗೆ ಬಡನಡುವಿನ ಮೇನಕೆ ಸಂಚುಗೆಯ್ದು ರಂಭೆಯುಂ ಮಾಣಿಸಿ ತಾಂ ಮುಂಬರಿದುಮಾಱಾಯಂಗೆ— ಎಲೆಲೆ ಕಾಮರಾಜ! ಇಂತೊಂದುಂ ಬೆಸಮೇಂ ನಿನ್ನನ್ನರಪ್ಪ ನಡುಮರಯದ ಜವ್ವನದ ಗಂಡುಗಲಿಗಳ್ಗಿಂತೆಱನೊಂದು ಬನ್ನದೊಳ್ ಬಾಳ್ವರೆ? ನಿನ್ನನುಱಿದೆ

ನಿಮ್ಮೀಪೆಣ್ಗಳ ಮನಮಾರಂ ಸೇರ್ಗುಂ! ಎಲೆ ಚೆನ್ನಿಗರಾಯ! ಎನ್ನೊಳ್ ಮುನಿಸೇನಯ್? ತನ್ನಾಣೆ! ಅರೆಗಳಿಗೆಯೊಳ್ ಕಾಮನಾಟದೊಂದು ಮಾಟದಿಂ ನಿನ್ನಂ ಸಂತಸಂಬಡಿಪೆಂ. ಇಂತು ನಿನ್ನನೆ ನಂಬಿ ಸೋಲ್ತು ಬಂದಳೊಂದು ಜವ್ವನದ ಗಾಡಿಯ ಮೋಡಿಯಂ ಬಗೆಯದೆ ಸವಿನುಡಿಯಿಂ ನುಡಿಯಿಸದೆನಸುಂ ಕಟಾಕ್ಷಿಸದೆ ದೆವ್ವಮಾಳ್ದಂತಿರೆ ಗುಱುಗುಮ್ಮನೆ ಬೆಕ್ಕಸಮಾಗಿರ್ಪರೆ! ತಪಮಂ ಸುಡು! ಮೋನಮಂ ಬಿಡು! ಬಳ್ಳಿವನೆಗೆ ನಡೆ! ಕಾಮಸಾಮ್ರಾಜ್ಯದೊಡೆತನಮಂ ಪಡೆ! ಇದೆಕೊಳ್ ನಱುದಂಬುಲಂ! ಹಾ! ಹಾ! ಇನಿವಿರಿದುಂ ಕಾಲಂ ಬಿಸಿಲೊಳಿರ್ಪಿನಂ ಪಿತ್ತಂ ನೆತ್ತಿಗೇಱಿತಕ್ಕುಂ; ಬಾರಯ್ ನೀರೆಱೆವೆಂ ಮೀಯಿಸುವೆಂ, ಪೂಸುವೆಂ, ಬಾವನ್ನದಿಂ ತಿಮಿರ್ವೆಂ, ತಿಲಕಮನಿಡುವೆಂ, ತನಿವಣ್ಗಳಂ ತಿನಲೀವೆಂ, ನಿನ್ನನಗಲದಾವಗಂ ಸೇವಿಸುವೆಂ. ಎನ್ನ ಪ್ರಾಣೇಶ್ವರಾ! ನಿನಗಿಂ ಶಶ್ವತ್ಸುಖದ ಬಟ್ಟೆಯಂ ತೋಱುಪೆಂ ಎಂದಳ್.

ಆಗಳ್ ಕಿಕ್ಕಿಱಿದ ಕಕ್ಕಸಮೊಲೆಯ ತಿಲೋತ್ತಮೆ ಮೇನಕೆಯ ನುಡಿಯನನುಕರಿಸಿ ಜತಿರಾಯನೊಳ್— ಏನೆಲೆ ಸಂಡ! ಪೆಂಡಿರ್ವಂದು ಕರೆಯೆ ಆಱೆನೆಂಬ ನಿನ್ನ ಗಂಡುಗಲಿತನಮಂ ಸುಡು! ಪಂದೆಯರ್ಗಂ ತಂತು ನೀಂ ಕುಱಿ, ಪೆಣ್ಗಂಜುವೆಯಾ! ಆಃ ನಿನ್ನೀಪ್ರಟ್ಟಂಗೇನೆಂಬೆನೊ? ಚಿಃ! ನಿನಗೀಜವ್ವನಮೇಕೆಯೊ? ಅಣ್ಬರಿಜೇಕೆಯೊ? ಏನೆಮ್ಮಂ ಕಂಡು ಬೆದಱಿ ಮಱವಟ್ಟೆಯ್! ಎಂದು ಕೆಱಚಾಡಿದಳ್.

ಇಂತೆಂದಾಡುವ ತಿಲೋತ್ತಮೆಯನಾಕ್ಷೇಪಿಸಿ ಕುಡುನೋಟದ ಕುಡಿವುರ್ಬಿನೂರ್ವಶಿ—ಪೋ ಪೋಗಿರೆ! ಬೂದಿಯ ಬಱುಜೋಗಿಯನುಱಿವತ್ತಂ. ಪೆಣ್ಗಳಿರ್ದುಂ ನಾಣಱಿದು ಗಱಿಸಾಳಿವೆಣ್ಗಳೊಂದು ಮಾತ್ಕೆಯಿನಿಂತು ನುಡಿವರೆ! ಎಂತೆಂತೊ ಬೊಮ್ಮನಂದಂದುಡಿದ ಕಡಿಯೆಲ್ಗಳನಟ್ಟೆಯೊಂದಂ ಬಿಗಿದು ತೊವಲಂ ಪೊದೆಯಿಸಿ ಪುಸಿಪಸಿವಸುವೊಂದಂ ತುಂಬಿ ಬಿನವಕ್ಕೀವನವತ್ತಣ್ಗಟ್ಟಿಗರ್ಮಲ್ಲದೀಜೀವಿಯೊಳ್ ಮಾನಸರ ಲಕ್ಕಣಮುಂ ಪುರುಳುಮುಂಟೆ! ಪೋ! ಮಾಣ್! ವಿಹಾರಂ ನೇರಮಾಯ್ತು, ನಡೆ ಪೋಪಂ, ಎಂದಿಱಿನುನುಡಿದಳ್.

ಕೇಳ್ ದೇವಾಂಗನೆಯರಿಂತು ಪೊಗೞ್ದುಂ ತೆಗೞ್ದುಂ ಬಯ್ದುಂ ಭಂಗಿಸಿಯುಂ ನುಡಿಸಿದೊಡಂ ಮೋನಮನೊಡೆಯದ ಕಣ್ದೆಱೆಯದ ಕದಲದ ರಾಯನ ಕಟ್ಟಾಯಸದ ತಪದ ಬಲ್ಮೆಯಂ ಕಂಡು ದೂರದೆ ಕೈಮುಗಿದು ಬೆಂಗೊಟ್ಟರ್; ಕಾವನಾವ ನಾಡನೊ ಪೊಕ್ಕಂ.

ಇತ್ತಲಿಂತಾಗೆ ರಾಯನ ನಿಚ್ಚಟದ ಭಕ್ತಿಗೊಲ್ದು ಕೆಲವಾನುಂ ದಿನಕೆ ದೇವಿ ಮೈದೋಱಿದಳ್. ಇಂತು ತನ್ನ ಕಣ್ಣಿದಿರೊಳ್ ಮೂರ್ತಿಗೊಂಡ ಆದಿಮಾಯೆಯಂ ಕಣ್ಣಾಱೆ ಕಂಡಾನಂದಾಬ್ಧಿಯೊಳೋಲಾಡಿಯುಂ ಪಾಡಿಯುಂ ಪೊಗೞ್ದುಂ ಮಣಿದುಂ ದೈನ್ಯದಿಂ— ಎಲೆಮಾತೆ! ನೀಂ ಭಕ್ತವತ್ಸಲೆ ಸಾಜಂ! ಧ್ಯಾನಗಮ್ಯೆ ಸಾಜಂ! ಸಕಲೇಷ್ಟಪ್ರದಾಯಿನಿ ಸಾಜಂ! ಆದಿಶಕ್ತಿಯೆನಿಸಿರ್ದುಂ ಮೂಗವಲಿಂ ಹರಿಹರಬ್ರಹ್ಮರ್ಕಳಂ ಮೋಹಿಸಿದ ನಿನ್ನೀಮಾಯಾವಿನೋದಮನಾರಱಿಗುಂ! ಎನ್ನನುದ್ಧರಿಸಾ! ಎಂದು ಬಗೆವಗೆಯೊಳ್ ತುತಿಸುತುಮಡಿಗೆಱಗಿದಂ.



ಆಗಳಾತನಂ ನಾಲ್ಕುಂ ಕೈಗಳನೆತ್ತಿ,—ಮಗನೆ! ಪಿರಿದಾಯಸಂಗೊಂಡಯ್! ನಿನ್ನಿಷ್ಟಾರ್ಥಂ ಸಿದ್ಧಿಪುದು ದಿಟಂ, ಎಂಬ ಶುಭರೂಪಿಣಿಯಂ ಕಾಮಾಕ್ಷಿಯಂ—ನಿನ್ನಂ ಕಂಡೆನಗೆ ಪೆಱತಾವುದೊ ಇಷ್ಟಂ, ಎಂದು ಬಿನ್ನಯಿಸಿದಂ. ಈನುಡಿಗೆ—ಹಾ! ಸೊಗಂಬಾಳ್ಕೆ! ಶತ್ರುಹೃತಮಾದ ನಾಡುಂ ಸಕಲಸಂಪದಮುಂ ನಿನ್ನೊಡಮೆಯೊಳಕ್ಕೆ! ಪೋಗೆಂಬುದುಂ; ಸುಮದರಾಜಂ—ಅಬ್ಬೆ! ನಿನ್ನಡಿಗಳನುೞಿದುಮಾಂ ಪೋಗಲ್ಕುಂಟೆ! ರಾಜ್ಯದಿನೇಂ, ಭಾಗ್ಯದಿನೇಂ? ಆನೊಲ್ಲೆನೀಕ್ಷಣಭಂಗುರದ ಭೋಗಂಗಳಂ. ನೀನೊಲ್ದುದು ನಿಕ್ಕುವಮಪ್ಪೊಡೆನಗಾಸ್ಥಿರಪದವಿಯಂ ತೋಱಿಸ, ಎಂದು ಬೇಡಿದಂ. ಮತ್ತಮಾರಾಯನ ಬಿನ್ನಪಕ್ಕೆ ಕಾಮಾಕ್ಷಿ— ಅಂತಾಗದಯ್, ನಿನಗಿಹದ ಭೋಗಂಗಳನ್ನುಂ ತೀಱಿತಿಲ್ಲದಱಿಸದು ಸಮೆವನ್ನಂ ನಿನ್ನ ರಾಜ್ಯಪದದೊಳೆ ಇರ್ದು ಬಾೞ್. ಮೇಣೊಂದಿಂಗೆ ಶ್ರೀರಾಮನ ಜನ್ನದ ತುರಗಂ ನಾಡಂ ಪುಗುತರ್ಪುದಂದೆ ಧರಣಿಯನಾತನ ಚರಣಕ್ಕರ್ಪಿಸಿ ನೀನಾತನ ಸೇವೆಯೊಳಿರ್ದೊಡೆ ಮುಂತೆ ಲೇಸಕ್ಕುಮನ್ನೆಬರಂ ನಿನಗಂ ಪೊೞಲ್ಗಂ ರಕ್ಷೆಯಿರ್ಪಂತಾಂ ನಿನ್ನನಾವೆಡೆಯೊಂ ನಿಲ್ವೆನೆಂದನುಗ್ರಹಿಸಿ ಮೈಗರೆದಳ್.

ಲಾಲಿಸು! ಅಂತು ತನಗಾಣತಿಯಿತ್ತುಂ ಮಾಯಮಾದ ಆದಿಮಾಯೆಯಡಿಗಳಂ ನೆನೆಯುತ್ತೆ ತಪೋವನದತ್ತಣಿಂ ತಳರ್ದು ಪುರಕ್ಕೈತಂದು ಪಗರಾಯರನೆಬ್ಬಟ್ಟಿಯುಂ ತಾನರಸುಗೈಯುತುಮೀಗಳುಂ ನಿನ್ನಾಗಮನಮಂ ಪಾರುತುಮಿರ್ಪಂ.

ಅಂತು ರಾಯಂ ತನಗೊಲ್ದ ಕಾಮಾಕ್ಷಿದೇವಿಗೆಂದೇರ್ಪಡಿಸಿದ ದೇಗುಲಮೈಸೆ ಆಗಳುಂ ತನ್ನಂ ಮಱೆವುಗುವರಂ ಕಾವೊಂದು ಮೈಮೆವೆತ್ತೀದೇವಾಗಾರದೊಳ್ ನೆಲಸಿರ್ಪಳೆಂದು ಸುಮದರಾಜಚರಿತಮುಂ ಸಮಂತು ಕಾಮಾಕ್ಷಿಮಾಹಾತ್ಮ್ಯಮುಂ ಶತ್ರುಘ್ನಂಗೆ ಮಂತ್ರಿಪಂ ಕೇಳಿಸಿದಂ.

ಮುಗ್ದ— ಎನ್ನರಸ! ಶತ್ರುಘ್ನನಿಂತೇರ್ಪಟ್ಟೊಂದು ಮೈಮೆಯುಂ ಕೇಳ್ದು ಸಂತುಷ್ಟನಾಗೆ ಮಂತ್ರಿವೆರಸು ತಾಂ ದೇವೀದರ್ಶನಾರ್ಥಂ ದೇಗುಲಮನೊಳಪೊಕ್ಕು ಮೂರ್ತಿವೆತ್ತ ಕಾಮಾಕ್ಷಿಯಂ ಪ್ರಾರ್ಥಿಸುತುಮಿರ್ದಂ.

ಅನ್ನೆಗಮತ್ತಲ್ ಯಥೇಚ್ಛಂ ಪೋಪ ಜನ್ನಗುದುರೆ ಮುಂತೆಸೆವಹಿಚ್ಛತ್ರಪುರಮಂ ಪುಗುತಪ್ಪುದುಂ ನಗರಪಾಲಕರ್ ಪಿಡಿದು ರಾಯಂಗೊಪ್ಪಿಸಿದರ್. ಸೊಲ್ಲುಗಮೀ ಬಿತ್ತರಂ. ರಾಯಂ ಹಯದ ಪಣೆಯ ಲಿಖಿತಮಂ ನೋಡಿದಿಸಿ ಇಂದಿಂಗೆ ಪಾವನನಪ್ಪೆನೆಂದು ತಱಿಸಂದು ಶತ್ರುಘ್ನನಂ ಬರಿಸಿ ತನ್ನ ಪೊೞಲಂ ರಾಘವನ ಪೆಸರೊಳರ್ಪಿಸಿ ಆತನ ಸೇವೆಯೊಂದು ಬಗೆಯಿಂ ಸೇನಾಸಮೇತಂ ಲವಣಾಂತಕನೊಡನೆ ಪೊಱಮಟ್ಟಂ. ರಾಘವಾನುಜನುಮಾತನ ಕುಮಾರಂಗೆ ಪಟ್ಟಂಗಟ್ಟಿ ರಾಜ್ಯಪದದೊಳಿಟ್ಟು ಕಾಣ್ಕೆಗೊಂಡು ಕುದುರೆಯಂ ಬೆಂಬತ್ತಿ ಮುಂ ತೆರಳ್ದಂ.

ಎಂಬಲ್ಲಿಗೆ

ಶ್ರೀ ರಾಮಾಶ್ವಮೇಧಕಥನದೊಳ್ ಕಾಮಾಕ್ಷೀದರ್ಶನಂ ಅಷ್ಟಮಾಶ್ವಾಸಂ

ಸಂಪೂರ್ಣಂ.

## ನವಮಾಶ್ವಾಸಂ.



ಸುಂದರೀ! ಇಂತು ಶತ್ರುಹಂ ತುಂಬಿದೆಳೆಗೆ ನಿನ್ನೀಪೊೞಲೆಂಬೊಂದು ಜನದಿಂ ಪೆಸರ್ವೆತ್ತು ಪುದಿದ ಬಾಳ್ವ ಪೌರ್ವರ ಬಂಚದಱಿನ ಬಾಳ್ವಿನೆಯೆಂಬೊಂದು ನೆಗೞ್ತೆಗಡರ್ಪಾಗಿ ಸಂದ ಅಹಿಚ್ಛತ್ರಪುರವರದ ರಾಯನ ಮನ್ನಣೆಯ ಬಿರ್ದಂ ಕೈಕೊಂಡು ಮೂವಗಲಿರ್ದು ಬೞಿಕ್ಕಮಾತನನೊಡಂಗೊಂಡು ತನ್ನಂಕೆಯಂಕದ ಪಱಿಂಬೆರಸು ವಾಜಿಯ ಬೆನ್ನೊಳೆ ನಡೆದು ಪಲವುಂ ನಾಳ್ಕಳಂ ಕಳಿಕಳಿದು ಪೋಗೆವೋಗೆ, ಮುಂತೆ ಮುಂತೆ—

ಭೋರವೊಱು ನೇವಾಳವೆಂಬಿನಂ ಪೊನಲ್ವರಿವ ಪಯೋಷ್ಣೀನದಿಯ ಕೂಲದೊಳಗ್ಗವೊಗರ್ಗೆ ಬಾಣಸುಗೈದು ನಿಚ್ಚಮುಯ್ವ ಜನ್ನದುರಿಯ ನಡುಬೀದಿಯೆನೆ ಮುಗಿಲುದ್ದಮೊಂದಿದ ಕರ್ಪೊಗೆಯಿಂ, ಅಗ್ಗಗೊಂಡದೊಳ್ ಪೊತ್ತುವ ನಱುನೆಯ್ಯ ನೆಲ್ಲರಳ ಬಲಿಗೂೞಿ, ಸಿರಿಕಂಡಸೆಕ್ಕೆಯ ಸವುದೆಯ ಕಮರಿಂ ಪೊರೆದೆಲ್ಲೆಡೆಯೊಳೆತ್ತಂ ಪಳಂಚಲೆವೆಲರಿಂ, ತೋರಮರಂಗಳ ಪೊಱುಗೊಂಬನೇಱಿ ರಯ್ಯಮಾಗೆ ಮೊರೆವ ಕುಕಿಲ್ವ ಪಾಡುವ ಬಾಸೆವಕ್ಕಿಗಳ ಗಜಬಜದಿಂ, ನಿರ್ವೈರಂ ಕೂಡಿ ಬಾಳ್ವ ಮೃಗಂಗಳದೊಂದು ನೆರವಿಯಿಂ, ತಾಂ ತನುಗಣಂ ಭಯಮಿಲ್ಲನೆ ಸ್ವೇಚ್ಛೆಯಿಂ ಮೇಗು ಮುನಿಗಳ್ಗೆ ಪಿರ್ವೊಟ್ಟುಂ ಪಾಲನೀವ ಸಗ್ಗದಾಸನಿಱಿಕೆಯ್ವಾಶ್ರಮದಾಕಳಿಂ, ತೋರ್ಪ ತಪೋವನಮೊಂದು ಕಣ್ಗೊಳಿಸಲೊಡಂ; ರಾಜಂ ಸುಮತಿಯೊಳಿದೇಂ ತಪೋವನನಾವ ಮುನಿಪುಂಗವನಾಶ್ರಮಂ ಪೇೞೆಂದು ಬೆಸಗೊಳ್ವುದುಂ; ಶತ್ರುಹಂಗೆ, ಇಂತೀತಪೋವನಮಶ್ವಿನೀದೇವತೆಗಳ್ಗೆ ಸುರಪಂಕ್ತಿಯೊಳೆಡೆಗೆಯ್ದು ಹವಿರ್ಭಾಗಮಂ ಸಲಿಸಿದ ಚ್ಯವನಋಷಿಗಳಾಶ್ರಮಮೆಂದಂ. ಏಗಳೆಂತೋಂ? ಆರಾಮುನೀಶಂ? ಜಂಟಿದೇವರ್ಗೆ ಎಂದು ಸುರರೊಳ್ ಪಂಕ್ತಿಗೊಟ್ಟನೇಕೆ? ಅನಱಿನಂತು ಬಣ್ಣಿಸಿ ಪೇೞೆಂಬುದುಮುತ್ತಯಿಂ ಕಥಿಸಿದನದೆಂತೆನೆ:—

ಈ ಪೊಡವಿಯೊಳ್ ನಿಂದ ಪೆಱನುಡಿವೆಂಡಿರ್ಗೆ ಗಂಡನೆನಿಸಿ ಬಂದ ಪುಣ್ಯಕ್ಕೆ ಮೊದಲಿಗನಾಗಿ ಸಂದ ಜೋಗಿಗಳ ಹಿರಿಯನೊರ್ವಂ ಭೃಗುವೆಸರ ರಿಸಿಯುಂಟು. ಆತನೊರ್ಮೆ ಮೊಗಸಿದ ಗಱವಟ್ಟಿಕ್ಕೆ ಸಮಿತ್ಕಾರಂಗಳಂ ತರಿತರ್ಪೆನೆಂದುಜ್ಜುಗದಿಂ ಬೈಗುವೊೞ್ತಿಂಗೆ ತನ್ನಾಶ್ರಮದತ್ತಣಿಂ ಪೊಱಮಟ್ಟೋದಂ. ಆಗಳಾ ಪೊೞ್ತೞೆ ಪೊೞ್ತಿಂ ಪೊೞ್ತಿಂ ಪೊರುತಿರ್ದ ದಮನನೆಂಬೊರ್ವನಸುರರಕ್ಕಸಂ ಉಟಜಮಂ ನೋೞ್ದು ಸೊರ್ಕಿನುಕಿರ್ಂ ಪೊಗೆವ ಸಿಡಿಲ ಬೞಿವಿಡಿಯೊಳ್– ಮುನಿಕಾಂತೆಯಾವಳೆತ್ತ ಪೋದಳಾರೆನೆಂದು ಗಱಚಿ, ಅತ್ತಮಿತ್ತಂ ಕಂಡು ಕಾಣದೆ ಮತ್ತಂ ಕುಂಡದಗ್ನಿಯುಂ ಜವಿರ್ದಂ. ಅಂತಪ್ಪುದುಂ ವೈಶ್ವಾನರಂ ಈ ಮಱಿರ್ನೊಂದು ಜಂಕಣೆಗೆ ಪದಱಿ ನಡುಗಿ ಮುನಿಪತ್ನಿಯನಂತರ್ಗತ್ತ್ರಿಯುಂ ಪತಿಪರಾಯಣೆಯುಂ ತೋಱಿಸಲೊಡಂ; ಕಾಡಿಂ ಪತ್ತಸಾರ್ದು ಕೊಡನ ಮುಡಿಯ ಪಡೆಯುಂ ತುಡುಕುವೆಗ್ಗನಂತಿರೆ ನದಿಯ ಸಿಡುಪಡೆಯುಂ ಪಿಡಿದೀರ್ಟಿದ್ದುಯ್ಯುತುಮಿರ್ದಂ. ಆ! ಮಱುಗದಾರೆಲೆ! ಕಟುಕನ ಬಂದಿಯೊಳಾದ ಅವಿನಂತಿರೆ ಮುನಿಕಾಂತೆ ಬೆಟ್ಟಿಱುಂ ನಿಱಿಮಿಱಿಗೊಂಡು ದೆಸೆಗೆಟ್ಟು ಬಾಯ್ವಿಟ್ಟು ಪಿಂದೆಸೆಯನೆ ನೋಡಿನೋಡಿ—ಹಾ ಮುನಿ! ಹಾ ಗುರು! ಹಾ ನಾಥ! ಹಾ! ನಾಯಕ! ದಾನವನೊಂದು ನೆಱೆಯಿಂ ರಕ್ಷಿಸಯ್, ಎಂದು ಕೀಱುವಳ್. ಆವೇಳೆಯೊಳಂತು ಭಯತ್ರಸ್ತೆಯಪ್ಪ ಪಱಿಬಱಿಯ ಬಸಿಱಿಂ ಗಕ್ಕನೆ ಗರ್ಭಂ ಸೋರ್ದು ನೆಲಸೆಱಿದು ಪಿಂಡದನೊಂದು ಮೂರ್ತಿಯೊಗೆತಂದು ವ್ಯೈವೆತ್ತು ಕೋಲಗನಂ ತರೆದು, ಪೊಲ್ಲದ ಕಣ್ಣಮನೊಡರ್ಚಿದ ನಿಂಪೊತ್ತಿ ಬೂದಿಪ್ಪೆಲಾಗೆಂದು ಶಪಿಸಲೊಡಂ; ದನುಜಂ ಸುಟ್ಟುರಿದು ಕರಿಮುರಿಪೋದಂ. ಅನಂತರಮಾ ಕಾಮಿನಿ ತಾಂ ಪೆತ್ತ ಕಿಱುಗೂಸಂ ತೊಳಸೆತ್ತಿ ಮೆಲ್ಲಮೆಲ್ಲನಾಶ್ರಮಕ್ಕೆ ನಡೆತಂದಾಗಳ್ ಬಂದ ಕಾಂತಂಗೆ ತನಗಾದವಿದೊಂದು ಸಂಕಟಮಂ ಕೇಳಿಸಿದಳ್. ಆಗಳ್ ಮುನಿಪನಗ್ನಿಯೊಂದು ಗೆಯ್ಮೆಗೆ ಕಱುತ್ತುರಿದು-ನೀಂ ಪಿಱಿತನಿಱು ಪಾಂಗಿನಿಂ ಎಲ್ಲಮಂ ತಿಂದು ಸಾವುದೆಂದು ಪೈದಂ. ಅಂತಿರೆ ಪೈಗುಳಂ ನೊಂದು ಬೆದರ್ಕೆಯಿಂ ನಡುನಡುಗಿಯುಂ ಹುತವಹಂ ರಿಸಿಗೆಱಗಿ-ರಕ್ಷೆಯಕ್ಕೆ! ಪುಸಿಯೋತದ ಮಾತಿನೊಂದು ಭೀತಿಯಿಂ ಮಾತೆಯುಂ ತೋಱಿದೆನಾಣ್ಮನೊಳ್ ದ್ರೋಹಮೆಣಿಕೆಯಿನಲ್ತು,

ಎನ್ನನೋವ ಕಾವ ಪ್ರೌಢಿ ತಮ್ಮತ್ತಿಯೊಳೆಂದು ಕಣ್ಣೀರಿಡುವನ್ನರುಂ; ಕೂಮೆಱೆಯೊಡೆಯನಗ್ಗಿಯುಂ ಅಂತು ಪಿಡಿವುದಂ ಗಿಡಿಮುಂ ಮುಡಿಯೆನಿಸೆಂದು ಸೈತಿಟ್ಟು ಬೀೞ್ಕೊಟ್ಟಂ. ಇತ್ತಲ್ ಬಸಿಱುಂ ಜಾಱುನಂಗೆ ಚ್ಯವನನೆಂಬೊಂದು ಸಕ್ಕದನೊಳ್ಸರಸಿಟ್ಟು ಕೊಂಡಾಟದಿಂ ಪೊರೆಯುತ್ತಿರೆ ಮುದ್ದಿನ ಪುಟ್ಟಕುವರಂ ಬೆಳ್ದಕ್ಕರೇಪುಂಬೆಜೆಯಂತೆ ದಿನದಿನಕ್ಕೆ ಕಳೆಯೇಱಿ ಬಳೆಯುತ್ತಿರ್ದಂ. ಇಂತು ಬಳೆದಿಯು ಕಂದಂ ಸಾಂಗವೇದಂಗಳಂ ಕಲ್ತು ಗುರುವಂತಿರೆ ತಾನುಂ ಪರಿಯೊಲ್ಮೆಯುಂ ಪಡೆಯಲ್ಕೆಂದು ತಪಂಬೊಕ್ಕಂ. ನೆಲೆಗೊಂಡ ನಿಷ್ಟೆಟದ ಜೋಗದೊಂದು ಜಾನದಿಂ ವೃಮುಱಿದೊಳನೋಟದೆ ಪಲವುಂ ಬರಿಸಂ ಸಮಾಧಿಯೊಳಿರ್ಪನ್ನರುಂ; ಮೆಯ್ಯೊಳ್ ಪುತ್ತು ಮೂಡೆ ಮುಯ್ಸೆರೇಳಿನೊಳ್ ಪಟ್ಟೆಗೊಂಡಿನ ಬಲ್ಮರಂಗಳ್ ಪುಟ್ಟೆ ಕೆಂಜಡೆಮುಡಿಯ ಮುಡಿಯೊಳ್ ಮಡಲಿಱುವ ಬಟಿಲ್ವೆಂದಜ್ ಪೊದೆಯೆ ಕಾಂಚನಲತೆಯುಂ ತುಱುಗಿ ಜಂಬೂವೃಕ್ಷದಿನೆಸೆವ ಪೊಂಬೆಟ್ಟದಟ್ಟದ ದಟ್ಟವಟ್ಟಿಲಂಗೆಲೆವಂದಂ.

ಅನ್ನೆಗಮಿತ್ತಲ್ ಶರ್ಯಾತಿವೆಸರ ಮನುಕುಲದ ರಾಯನೊರ್ವಂ ಸಕುಟುಂಬಂ ಪೆಂಬಳಿಯು ಮೆಯ್ಗಾವಲ ಚತುರಂಗಸೇನೆವೆರಸು ತೀರ್ಥಯಾತ್ರೆಗೆಂದು ಬಂದು ರೇವಾತೀರದೊಳ್ಬಿಡು ಪುಣ್ಯತೀರ್ಥದೊಳ್ ಮಿಂದು ಕ್ಷೇತ್ರವಿಧಿಯೊಳಿರ್ದಂ. ಆ ಪ್ರೌಢಿಂಗಾತನೆಣುಗುಗುವರಿ ತನ್ನೆಸೆವಲೆಯುದ ಗೆಡೆಯ ಜೋಡುಕಾತಿರ್ಯರೊಡನಾಡುತಾಡುತೆ ಬಲನ ಬನಂಬೊಕ್ಕೊರ್ಕೊಂಡೆಡೆಯ ತಳಿಜೊರ್ಂಪಾಸುಂ ಪಿಡಿವುಂ, ಪೂಗೊಂಚಲಂ ಮುಡಿದುಂ, ಪಣ್ಗೊಂಚಲಂ ಸವಿದುಂ, ಬಿನದದಿಂ ವಿಹರಿಸುತುಮಿರ್ದಳ್. ಇಂತಾಡುವ ಬಾಲೆ ತನ್ನಿದಿರೊಂದು ಪುತ್ತಂ ನಿರುಕಿಸಿ ಕೆಳದಿಯರ್ಗೆ—ಅಂಕಂಡೆಂ; ಏಂ ಕಂಡೆಂ ಪೇೞೆಮೊಂದು, ಪುತ್ತಂ ಬಾಲೆಯರ್ ಪಡಿನುಡಿಗುಡದಿರೆ ನಕ್ಕು—ಸನ್ನೆಯಿಂ ತೋರ್ಪೆಂಗೆನೆಂಬಿಂ. ಇದೆ ಪುತ್ತಿನೊಳ್ ತೆತ್ತಿಸಿದ ಕರ್ಮಣಿಗಲ್ಲಿರದಾಂ ಕಂಡೆನಿಂಗಳೆ ಕಿತ್ತು ಕೊಳ್ವೆನೆಂದು ಕೆಯ್ಗೋಲ್ಗೊಂಟದ ಕವಲ್ಗೋಲಿಂ ಮಣಿವೆಂದೆ ಬಗೆದು ಸಿಕ್ಕಿಲಂ ಮಿಸುಗುವ ಮುನಿಯ ಕಣ್ಗಳಂ ಕುಕ್ಕಿರ್ದಳ್. ಅಕ್ಕಟಾ! ಪೊನಲಿಡುವ ಕೆನ್ನೀರ ಕಾಲಂ ಕಂಡು ಬಾಲೆ ಭಯದಿಂ ಮನದೆ ತಳಮಳಂಗೊಂಡು ಆರೊಳಮೆನ್ನದೆ ತನ್ನೆಡೆಗೆ ಸಿರಿದಳ್.

ಅಕಾಲದೊಳೇನೆಂಬೆನೊ! ಪಗಲೊಳೆ ಉಲ್ಕಾಪಾತಂಗಳಾಗೆ, ಧೂಮಕೇತುಗಳ್ ದೆಸೆದೆಸೆಗೆ ಮುಸುಂಕೆ, ನೆತ್ತರ ಸರಿ ಸುರಿಯೆ, ಆಗಳಾಗಳ್ ಪೊಡವಿ ನಡುಗೆ, ರಾಯನ ಸೇನೆಯೊಳ್ ಕಾತ್ತಂ ಕಾಱುಪಿಡೆ, ಕುದುರೆ ಕಣ್ಣೀರಿಡೆ, ಗಜಂ ಮಣ್ಣಂ ಗೋರೆ, ತೇರ್ ಮುಱಿಯೆ, ಉತ್ಪಾತಮಾಯ್ತು. ಇಂತೆಱೆವಿಡದೆ ತಲೆದೋಱುವ ದುರ್ನಿಮಿತ್ತಂಗಳ್ಗೆ ರಾಜಂ ಪಿರಿದುಂ ಕೊರಗಿ ಏನಾನುಮೊಂದಡಿಯಿರ್ಕುಮೆಂದು ತಱಿಸಂದು ಸುತ್ತಂ ಬನದೊಳ್ ಚರಿಸುತ್ತಿರೆ; ತನ್ನಿದಿರೊಳ್ ಬಿಂಜವೆಟ್ಟನಿೞಿತರ್ಪ ಶೋಣಾನದದೆರಡುಂ ಪೊನಲೆಂಬಂತಿರೊಂದು ಪುತ್ತಿನತ್ತಣಿಂ ಕವಲ್ವರಿವ ನೆತ್ತರ ಮುರಿಯುಂ ದಿಟ್ಟಿಸಿ ಕಟ್ಟಚ್ಚರಿಯೊಳೆ ಮುಟ್ಟಯಿಸಿ ನೋಳ್ಪುದುಂ; ತಪದೊಳಿರ್ಪ ಮುನಿಪಂ ಗೋಚರನಾದಂ. ಆಗಳಾತನಡಿಗಳ್ಗೆಱಗಿ ರಾಜಂ—ಶಾಪಾನುಗ್ರಹಸಮರ್ಥರ್ ನೀಮೆವಲಂ. ಪರಿವ ನೆತ್ತರೇನೊ! ಎಂತಱಿವೆನೀಮ್ಮೈಮೆಯುಂ ಕುಱಿಮಾನಿಸನೆಂ. ತೀರ್ಥಯಾತ್ರಾರ್ಥಂ ಬಂದೀತೊರೆಯೊತ್ತಿನೊಳೆ ಬನದೆ ಬೀಡಂ ಬಿಟ್ಟೆಂ. ತಪೋವನಮೆಂದಱಿತೆನಿಲ್ಲಂ. ಎಮ್ಮೀಸೇನೆಯೆಂತುಮಾಧಿವ್ಯಾಧಿಕ್ಷಾಮಡಾಮರಂಗಳ್ಗೆ ಕೋಳುವೋಯ್ತು. ಎನ್ನೊರ್ವನಯೆ ಕತದಿಂ ವನಮುಂ ಪಾೞಾಯ್ತಕ್ಕಟಾ! ಮುನಿರಾಯ! ಈಗಳ್ ನಿನ್ನನೆಮಱೆಗೊಂಬೆಂ. ನೀಂ ಕರುಣಿಸಿ ಕಾವುದೆಂದು ಪ್ರಾರ್ಥಿಸೆ; ಚ್ಯವನಂ ರಾಯಂಗೆ—ಎಮುತ್ತಿನ್ನಾವ ಮೈಮೆಯೊ! ಆವ ತಪಮೊ! ಕಣ್ಗುರುಡರಾದೆವೈಸೆ! ಕೇಳ್ ನಿನ್ನಯ ಕುವರಿ ತನ್ನಾಟದೊಂದು ಗಮಕದಿಂ ಸಲ್ಗೆಯಿನೆನ್ನ ಕಣ್ಗಳಂ ಕುರ್ಕಿ ನೋಯಿಸಿದಳ್. ಇಂತಿದು ನೆತ್ತರ್. ಏವೇಳ್ವೆನೊ! ಎನ್ನೊಂದು ನೋವಿಗಿಂತು ಉತ್ಪಾತಂಗಳೆಂದಂ. ಆ ನುಡಿಗೆ ರಾಜಂ ನೊಂದು, ಮೇಣ್ ಶಾಂತಿಯೇನೆಂಬುದುಂ; ಮುನಿಪಂ—ನಿನ್ನ ಕನ್ನೆಗುವರಿಯನೆ ಎನ್ನ ಸೇವೆಗೀವುದಱಿಂ ನಿನಗಂ ಸೇನೆಗಂ ಸುಭಿಕ್ಷಮಕ್ಕುಮೆಂದು ಮಾರ್ನುಡಿಯಲೊಡಂ; ಶರ್ಯಾತಿ ತಾಂ ತಲೆವಾಗಿ ರಾಣಿಯೊಳ್ ನಿಧಾನಿಸಲ್ಕೆಂದು ತನ್ನಾವಾಸಕ್ಕೆ ನಡೆತಂದು ಅರಸಿಗೀಕತೆಯಂ ಪೇಳ್ದಂ. ಆಗಳಾತನ ರಾಣಿ ಪೆತ್ತ ಬಸಿಱಿನೊಂದುರಿಯಿಂ ನೊಂದು ಪಳಯಿಸಿ—ಹಾ! ಎನ್ನೀಮುದ್ದುಗುವರಿಯನೆಂತಗಲ್ವೆನೊ! ಎಂತೀಪೆತ್ತೊಡಲಂ ಪಿಡಿವೆನೊ! ದೈವಮೊಂದೀ ಬಾಲೆಯೊಳೆ ಕಣ್ಣಿಟ್ಟುದೇ! ಅಕ್ಕಟಾ!

ಎತ್ತಣ ಬನಮೆತ್ತಣ ಮುನಿ ।
ಯೆತ್ತಣ ತಪಮೆತ್ತಣಾಟಮೆತ್ತಣ ನೋಟಂ ॥
ಎತ್ತಣ ಶಲಾಕೆ ಪ್ರೇ ಮಾ ।
ನೆತ್ತಣ ಪಗೆಯೆತ್ತಣಾಧಿಯೆತ್ತಣ ದಾನಂ ॥ ॥೧॥

ನಡೆಬಾರದ ನುಡಿಬಾರದ ।
ಗೆಡೆಬಾರದ ಕೂಡುಬಾರದಂದದ ಸೈತೊಂ ॥
ದಡೆಬಾರದ ಮುಡಿಬಾರದ ।
ಬಿಡಬಾರದ ಪಸುಳೆ ಮಗಳನೆಂತಾಂ ಕುಡುವೆಂ ॥ ॥೨॥

ಎಲೆ ರಾಯ! ನೀನುಮೊಡಂಬಡುವಯ್! ಜಾವಳದವಸಿಯ ಕವಡುಮಾಯೆಗೊಳಗಪ್ಪರೇಂ! ಆಃ! ಎನ್ನೀಕೊಡುಗೂಸಿಂಗೇವ್ರಾರ ಕೊಳ್ಕೂಡೆ! ಮನುಕುಲದೆ ಪ್ರಟ್ಟಾಗಿರೆ ಚೆಲ್ವಿನ ಬಲ್ಪಿನ ರಾಯುಗುವರನ ಕೊರಲ್ಗೆ ಮಾಲೆಯಿಕ್ಕಿ ತುಂಬುವಳಗದೊಳ್ ಬಾಳ್ವೆನ್ನೀಬಾಲೆ ತಿರೆ ಪಱಿವಿನಂ ತಪದ ಮುದುಗೂಗೆ ಕುರುಡಂಗಿತ್ತು ಕೊರಲಂ ಕೊಱೆವಾ! ಎಂದು, ಬಱಿಕ್ಕಾಟದ ಮಗಳಂ ಕೊರಲೊಳ್ ತಬ್ಬೈಸಿ ಕಣ್ಣೀರ್ಸುರಿದು—ಹಾ ಗುಣಮಣಿ! ಹಾ ಮುದ್ದಿನ ಕಣಿ! ಹಾ ಕುಲರತ್ನಮೆ! ಹಾ ಸಿಂಗರದ ಮುದ್ದೆ! ಎಂತು ನಿನ್ನನಗಲ್ದುಂ ಬಾಳ್ವೆನೌ! ಅನುದಿನಂ ನೋಂತು ನೋಂತು ತನು ತವಿಯೆ ಕರಮುಪವಾಸಮುಱಿದುಂ ಕಱಿದುಮೊಡಲ ತಿಣ್ಣದೊಂದು ಬೇನೆಯಿಂ ನೋವೆ ಪೊತ್ತುಂ ಪೆತ್ತಿನ್ನೆಬರಂ ಪಾಲಿಸಿ ಲಾಲಿಸಿ ಮುದ್ದುಗೆಯ್ದಿಸೀಗಳೆ ತಾಂ ಪಬಿಮಾನಿಸಂಗೆ ಕುಡುವೆಂ ಮಗಳೇ! ಅಸಿದೊಡಲ ಬಾಳೆ! ನೀಂ ಪಸಿಗು ಸಸಿನಂಬಡವಂತಾರಯ್ವರಾರ್! ಸೋಮುರ್ಡಿಯುನಾಗಳ್ ಪಿಕ್ಕಿ ಪೂದೊಡಂಬೆಯುಂ ಮುಡಿಯಿಸುವರಾರ್! ದಿನದಿನಕಿಂ ಮೀಯಿಸುವರಾರ್! ನಿನ್ನನೊಡಂಬಡುವರಾರ್! ನಲ್ಲುಡೆಯನುಡಿಸುವರಾರ್! ನಲ್ಕೂಡಸಂ ಕುಡುವರಾರ್! ಕೊಂಡಾಡುವರಾರೋವರಾರ್ ಬೇನೆಗೆ ನೋವರಾರೆಲೆ ಕುವರೀ! ಆಃ!

ಆರೊಡನುಣ್ಬೆಂ ಬೇಸ |
ತ್ತಾರಂ ನಡೆನೋಡಿ ಕೂಡಿ ನುಡಿವೆಂ ಪಡುವೆಂ ||
ಆರೊಡನಿರ್ಪೆಂ ಮೇಣಿ |
ನ್ನಾರಂ ಪೆತ್ತಬ್ಬೆಯೆಂದು ಕರೆವೆಂ ಮಗಳೇ || ||೩||

ಅಕ್ಕಟಾ! ಕಂಗಳನಾದೊರ್ವನಂ ಮುದುಪಾರ್ವನಂ ಕೈವಿಡಿವೆಂದು ಯೋಗಮಂ ಬಿದಿ ಮಾಡಿದನೇ! ಲೋಕದೆ ಲೋಗರ್ ಕಾಡ ಬೀಟಂ ತಂದು ಊರ ಮರನೊತ್ತಿಗಿಡುವರುಂಟು. ನೋಡೆ ನಾಡೆಳೆವಳ್ಳಿಯುಂ ಸನುಂತು ಕಾಡ ಕರ್ಮುರನೊಳ್ ಪತ್ತುಗುಡುವರೊಳರೇ! ನೂಱೇಂ ಪಲವೇಂ. ನೂಳಪದೊಂದು ದಂಮುಗಕ್ಕೆ ಕೆಯ್ಗುಮರ್ ಚಿಂತಾಮಣಿಯನೊತ್ತೆಯಿಟ್ಟು ಬಾಳ್ವ ಕೈಸೆಯ ಕೈಮೆಗೊಳಗಾದೆನಕ್ಕಟ! ಎಂದು ಮಱುಮಱುಗಿ ಪಮ್ಮುದಂಬೋದಳ್. ಆಗಳಾಕಿಱುವರೆಯುವ ರಾಯಗುವರಿ ಮಾತೆಯುಂ ಸೈತಿರಿಸ್ರೊಂದು ನುಱಿಯ ಬಿನ್ನಣದಱಿವಿನ ಜಾಣ್ಮೆಯಿಂ—ಅಬ್ಬೆ! ಏನೆಂದಱಿಲ್ವೆ! ಪೆತ್ತರೊಳ್ ಪೆಸಾಣ್ಣಡಮೊಯಿದು ನ್ಯಾಸಮಲ್ತೆ. ಎಂತುಂ ಕುಲಕ್ಕೆ ಪೆಱಳಪ್ಪ ಮಗಳೊಳೇಂ ಮಱುಕಂ! ಮನುವಾದೊಡಂ ಮುನಿಯಾದೊಡಂ ಏಂ! ಕೊಡಗೂಸಿನೊಂದು ಭಾಗ್ಯಮೆ ಭಾಗ್ಯಂ, ಸೈಪೆ ಸೈಪು. ಪೆಱತಾವ ಭೋಗಂ ಸಲ್ಗುಂ? ಮುನ್ನೊಡಲೊಂದುಗೆಯ್ಮೆಯ ನೋಂಪಿಯೆಸಕಮೊದಚೆ ತಿರಿಕುಳಿಯೊಳಮರವೆಂದಿರಭೋಗಮನುಣ್ಗುಂ. ಮೇಣ್ ಕೈಸೆಯಾಗೆ ರಾಯನ ಕೈವಿಡಿವುಂ ತಿರಿದುಣ್ಗುಂ ಮೇಣ್ ಅದುಕಾರಣಂ ನೀಂ ಸಂತಮಿರೆಂದು ತಾಯ್ಗೆ ನಯಂಬೇಟ್ದು ಅಯ್ಯಂಗೆ—ಅಯ್ಯ! ಮುನಿಯೆಡೆಗೆ ಪೋಪಂ ಎಂದು ಕರೆಯುಯ್ದಳ್. ಅಂತು ಬಂದಾಕನ್ನೆ ಪೊಸ ತವಸಿಯುಂ— ಬಡೆಯ! ಅಪ್ಪನಪ್ಪದಾನಾಟದೋಟದೊಳ್ ತಮ್ಮಡಿಗಳ್ಗೆ ತಪ್ಪನೆಸಗಿದಂ. ಇದೆ! ಅಯ್ಯನೆನ್ನಂ ನಿಮಗರ್ಪಿಸಲ್ಕೆಂದು ಬಂದಿರ್ಪನವಱಿನಾದಾನಮನೊಲ್ದು ಕೈಕೊಂಡು ಕೂರ್ಮೆಯಿನೆನ್ನ ಜಾತ್ರೆನಯಣಿಗರ್ಗೆ ನೇರಿಟ್ಟಾಧಿವ್ಯಾಧಿಗಳಂ ಪರಿಪರಿಸಿ ಪೊರೆಯ್ಯೆ ಎಂದು ಕಾಲ್ಗೆಱಗಿದಳ್. ಇಂತಪ್ಪುದುಂ ಚ್ಯವನಂ ಕನ್ನೆ ಸುಕನ್ಯೆಯ ಜಾಣ್ಮೆಯ ಮೆಲ್ನುಡಿಗೊಡಲ್ಪು, ಸಮಾಧಿಯನುಱಿದು, ರಾಯುಂ ಶಾಂತಿಂಗೆಂ

ದಿತ್ತು ದಾನವ ಬಾಲೆಯನೊಪ್ಪಿ, ಪಯಣಿಗಗಂ ನಾವಿಗಗಂ ಸೊಗಸು ಪ್ಪಂತು ಕರುಣಿಸಿ, ಶರ್ಯಾತಿಯುಂ ಪರಸಿ ಬೀಳ್ಕೊಟ್ಟಂ.

ಇತ್ತಲ್ ಶರ್ಯಾತಿರಾಜತನೂಜೆ ನಿಜಪತಿಯುಂ ತನಗೊಲ್ದ ದೈವಮೆಂದೆ ಬಗೆದು ಮುನಿ ಮನಂ ಮೆಚ್ಚುವನ್ನಂ ಸಂದ ಸೇವೆಯೊಳ್ ಬಳ್ದಳ್. ಚ್ಯವನರ್ಷಿಯುಂ ಮಾನವಿಯೊಂದಾರ್ತ್ಯಕೆಯಿಂ ತನ್ನ ಕುರುಡಿನ ಬೇನೆಯಂ ಮಱೆದು ಎಡೆಯೊಳ್ ಆಶ್ರಮಮನೊಂದಂ ನೇರ್ಪಡಿಸಿ ದೈವಭಕ್ತಿಯೊಳ್ ಸಂದು ತಾನುಂ ಸಂತಮಿರ್ದಂ. ಇಂತು ಕೆಲವಾನುಂ ದಿನಮತಿಕ್ರಮಿಸಲೊಡಮೊಮ್ಮೆ ಬರ್ಹಿ*ವೆಜ್ಜರಾಬಟ್ಟೆಮುಟ್ಟೆವಂದು ಮುನಿಯೆಲೆವನೆಗೆ ಪುಗುತರ್ಪುದುಂ; ಸುಕನ್ಯೆ ಅತಿಥಿಗಳಂ ಯಥಾವಿಧಿ ಉಪಚರಿಸಿ ಮನ್ನಿಸೆ; ಬಿರ್ದರ್ವಂದ ದೇವರ್ ಪದಿಬದಿಯ ನಡೆವಳಿಗಂ ಭಕ್ತಿಗಂ ಮೆಚ್ಚಿ ಸಂತಸದಿಂ ಮುನಿಪತ್ನಿಯುಂ ವರಮಂ ಬೇಡೆಂದರ್. ಅವರ್ಕಾಕಾಂತೆ—ಆಂ ಜೀವಿತಾವ ವರಮಂ ಬೇಳ್ಪೆನೊ! ಎನ್ನೀ ಪತಿಯ ಕುರುಡಂ ಪೋಗೊಳಿಸಿ ಕಾಪ್ಪುದೊಂದೆ ಎಂದು ಮಾನುರ್ಡಿದಳ್. ಮೇಣಾದೇವತೆಗಳ್—ನಿನ್ನ ಮುನಿ ಎಮಗೆ ಸುರಪನ ಪಂತಿಗುಡುವೆನೆಂದು ಪ್ರಾಣ್ದೊಡೆ ಕಣ್ಗಳನೀವೆವೆಸೆ; ಮುನಿಪಂ—ಇದೆ ಬಾಸೆಯೀವೆಂ, ತಡೆಯೇಂ. ಆಂ ಪುರೋಹಿತನಿರ್ದ ಬೇಳಲಿರ್ದ ಜನ್ನದೊಳ್ ನಿಮಗೆಯು ಮುನ್ನಮೆಡೆ, ಬೞಿಯಮಿಂದ್ರಂಗೆಂದು ಕೈವ್ರೋಯ್ದಂ. ಆನುಡಿಗೆ ಸುರವೈದ್ಯರೊಪ್ಪಿಗೊಟ್ಟು ಮುನಿಯೊಡನೆ ತಡೆಯದೊಂದು ಬೆಂಚೆಯೆಡೆಗೈತಂದು ತಾಂ ಮೂವರುಂ ಮೈಯಬ್ದಿದೊಡಂ ಬಗೆಯಲ್ಕಾರದ ಪಡಿವರಿಜಗಳೆನೆ ಬಂದಚ್ಚಿನೊಳೆ ಕಂಡೊಯ್ದು ಮುಕುಂ ಪ್ರಾಂಬಾದಿಯುನೆ ಮೂವರುಮೊಂದೆ ರೂಪಿನೊಳಾಗದು ಪುರಲ್ದು ಟಜಿಡೆಗೆಯ್ತಂದರ್. ಇಂತು ಬಂದ ಸುಕುಮಾರಗಾತ್ರರಪ್ಪ ಮೂದೇವರೊಳ್ ಮುನಿಯಾಱಿಂದಾರಯ್ಯೊಬಾಜದ ಬಾಲೆ ಸ್ವಮೈಗ್ರರಂ ಮೇಣಾ ಮಾಱಿಪ್ರಗೆ ತಾಮೊಲ್ದು ತೋಱುಪತಿಯಂ ಮೆಚ್ಚುಗೊಟ್ಟು ತಮ್ಮೆಡೆಗೆ ಬಿಜಯಂಗೆಯ್ದರ್.

ಕೇಳಯ್! ಶತ್ರುಘ್ನ! ಮೂಲೋಕಮುಮಂ ತನ್ನೊಂದು ಜೋಗದ ಜಾಣ್ಮೆಯ ಮೈಮೆಯ ಬಣ್ಣಿಸೆಮೋರ್ದನೊಳ್ ತಮುಳ್ದ ಬಿಚ್ಚ

ಬೂಸಿ ನೋಡಲಾರ್ಪ ತನ್ನೊಳಗೇೞ್ಮಡಿಯೆತ್ತರದಿಂ ಪೊಱನೋಟವೊಗವೆ ಕರುವಿಟ್ಟ ಕಡವರದ ರೂವಿನ ಮೆಯ್ಸಿರಿ ಪೊಗರೇಱೆ, ಮಱಿಸಿಂಗನೊಳ್ಗೆಣ್ಣ ವಿರನಿಱಿಕೆಯ್ಯೊಂದು ತೇಜಮನೊಳಕೊಂಡು ರಾಜಿಪ ಜಡೆಮುಡಿ ಸೊಗಯಿಸೆ, ಪೊಂಬೆಟ್ಟಿನ ಕೋಡುಗಲ್ಲಂ ತಳ್ತು ಪುದಿದು ಪೊಱೆದ ಬೈಗಿನ ಕೆಂಬಿಸಿಲ ಬೆಳಗಿಂಗೆ ದೊರೆವರ್ಪ ಪೀತಾಂಬರದುಡೆ ನಡುವಿನೊಳ್ ವಿರಾಜಿಸೆ, ಅರಸಿಂಗನ ಬಲ್ಗದಿರ್ಗೆ* ಪಾಸಟಿಯೆನಿಸ್ಪ ಪೇರಗಲದೆರ್ದೆ* ಮನಂಗೊಳೆ, ಯೂಥನಾಥನ ದಟ್ಟಸೊಂಡಲಂ ಗೆಲೆವರ್ಪ ತೋರತೋಳ್ಗಳೆಸೆಯೆ, ಸಿರಿ ಸೋರ್ವ ಮುಖಪದ್ಮಂ ಚಳಚಳಿಸೆ, ಚ್ಯವನಂ ಜವ್ವನದೇೞ್ಗೆಯಿಂ ಸಂತಂ ಪತ್ನಿವೆರಸಿರ್ಪನ್ನೆಗಮೊರ್ಮೆ ಶರ್ಯಾತಿರಾಜಂ ತಾಂ ಮೊಗಸಿ ನೆಗೞ್ಚಿರ್ಪ ಜನ್ನಕ್ಕೆ ತನ್ನಳಿಯನನೆ ಪುರೋಧಸನಾಗೆ ಬರವೇೞ್ದಟ್ಟಲೊಡಮೋಲೆಕಾಱರ್ ಬಂದು ಮುನಿಗೆಱಗಿ ಪಾವುಡೆಯುಮಂ ಕಟ್ಟೋಲೆಯುಮನೊಪ್ಪಿಸಿದರ್. ಚ್ಯವನನೋಲೆಯೊಕ್ಕಣೆಯನೋದಿ ರಾಜನಿಂಗಿತಮನಱಿತು ಸಂತಸಂಗೊಂಡೂೞಿಗದಾಳ್ಗಳಂ ಮನ್ನಿಸಿ ಬರ್ಪೆವೆಂದು ಮಱುನುಡಿಯಂ ಬರೆದು ಕಳುಪಿದಂ. ಬೞಿಕ್ಕಂ ಮುನಿದಂಪತಿಗಳ್ ತಮ್ಮಾಶ್ರಮದಿಂ ಪೊಱಮಟ್ಟು ಪಯಣಂಬಂದು ಮಾವನ ನಾಡಂ ಪುಗುತಂದು ರಾಯನರಮನೆಗೈದಿವಂದು ಕುಳ್ಳಿರ್ದುಂ; ರಾಯುಂ ಮಗಳಂ ಬೞಿಯುಂ ಜವ್ವನದ ಚೆನ್ನಿಗನಂ ಕಂಡು ಕಱುತ್ತು ಮುರಿಮುರಿಮುರಿದು—ಆಃ! ಮನುಕುಲದೆ ಪುಟ್ಟಿ ನಿಟ್ಟುರದ ಬೊಡ್ತಿತನಮಿಂತೇಂ ಸೂಳಿನನಾಯ್ದು ಬಾೞ್ದೆ ನೀಂ ಮಗಳೇ! ಕೆಲಸಾರೆಂದು ಗವಱೆ; ಅಯ್ಯನಡಿಗೆಱಗಿ ಕಿಱುನಗೆಯಿಂ—ಜೀಯ! ಅನವಂಗೆಟ್ಟು ಬೞಿಗೆ ಪೞಿವ್ರೊಮರ್ವಂತು ನಡೆದೆನಿಲ್ಲ, ಈತನೆ ತನ್ನಾಣ್ಮನೆಂದು ಸಕಲಾಂಶಮಂ ತಿಳಿಪಂತಾಡಿ ತೋಱಿದಳ್. ಇಂತಾಗೆ ನಲ್ಗವಱಿಯ ನೆಗೞ್ಕೆಯುಂ ಕರಮೊಲ್ದು ಬಂದಾ ಮುನಿಯುಂ ಪೆರ್ಗಪ್ಪು ಪಾಡಿದಂ.

ಇಂತಿರ್ಪುದುಂ ಬೞಿಕ್ಕಮೊಂದು ಶುಭದಿನದೊಳ್ ಚ್ಯವನಂ ಪುರೋಹಿತನಾಗೆ ರಾಜಂ ಯಾಗಮಂ ತೊಡಂಗಿ, ನೆರೆರಾಯರ್ ಪೊಗೞ್ವನ್ನಂ, ಭೂಸುರರ್ ತಣಿವನ್ನಂ, ದೇವತೆಗಳ್ ಸಂತುಷ್ಟರಪ್ಪನ್ನಂ ಬೇಳ್ದಂ. ಆಗಳ್ ತನ್ನೊಂದು ಪ್ರಾಕ್ಕ್ಯಮಂ ನೆನೆದು ಪುರೋಧಸಂ ಹವಿಪ್ರದಾನದೊಳ್ ಮುನ್ನಂ ಮುನ್ನಿಸಿದು ಜೋಡಿಯರ ಬೆಜ್ಜಗರ್, ಇಂತಿವಮರ್ತ್ಯವರ್ಗೆ,

ಮೋಣಿಪಶ್ವಿನೀಸುತರ್ಗೆಂದು ಕರೆಕರೆದೆಡೆಗೊಟ್ಟ ಬಱಿಯುಮಿದು ದೇವೇಂ ದ್ರಂಗಿದು ಸುರಪಂಗಿಂತಿದು ಮೆಯ್ಗುಣ್ಣಂಗಿದು ಎಂದು ಹೋಮಿಸಿದಂ. ಇಂತು ತನ್ನನೇಳಿಸಿಯುಂ ಪಂತಿಗೆ ತಗವ ಅಶ್ವಿನೀದೇವರ್ಕಳಂ ಮನ್ನಿಸಿ ಮುನ್ನೆಡೆಗೆಯ್ದನೆಂಬೊಂದು ಕತದಿಂ ಕಱುಂಬಿ ಸುರಪಂ–ಈ ಅಱಿವಾರ್ವನಂ ತಲೆಗಡಿವೆನೆಂದು, ತನ್ನ ಬಜ್ಜರಗೈದಂ ಜಳಪಿಸುತೆ ಮಾರ್ಮಲೆತಿಸಲೊಡರ್ಚಿದಂ. ಅನಿತಱೊಳ್ ಚ್ಯವನಂ ತನ್ನೊಂದು ಬಲ್ಮೆಯಿಂ ಸುರಪನುಮಂ ಕೈದುಮಂ ತಡೆಗೆಯ್ದಂ. ಇಂತು ಮರವಟ್ಟಿರ್ಪುದುಂ ಸಕಲಮನುಗಳುಂ ಮುನಿಗಳುಂ ಸುರರುಂ ಮೈಮೆಯುಂ ಪೊಗೞ್ದು ಸುರಪನನುದ್ಧರಿಸಲ್ಕೆಂದು ಚ್ಯವನನಂ ತುತಿಸಿದರ್. ಅಂತು ಸುರಪನಂ ಸೆಱೆವಿಟ್ಟುಂ ದೇವವೈದ್ಯರ್ಗೆ ಪಂತಿಗೊಟ್ಟುಂ ನೆಗೞ್ದನೀಮುನಿಯಿಳೆಯೊಳ್.

ಮೆಚ್ಚುಗಾರ್ತಿ! ನಾಡಿಂ ನಾಡಿಂಗೆ ಪಯಣಂಬಂದ ಬೞಲ್ಕೆ ಮುಡಿವನ್ನಂ, ಕೊಡಂಕೆ ನಲ್ಗತೆಯ ಪುರುಳಂ ತುಂಬುವನ್ನಂ, ಮನದ ಬಯಕೆಯಱಿವನ್ನಂ, ಶತ್ರುಹಂ ಸುಮತಿಯೊರೆದ ಕತೆಯುಂ ಕೇಳ್ದು ಸಂತಸಂದಾಳ್ದು ಅಂತಿರ್ಪನಂ ಮುನಿಯುಂ ಕಾಣಲ್ವೇೞ್ಕುಮೆಂಬು ನಿಚ್ಚದ ತುಱಿಲಾಳ್ಗಳಂ ಬೆರೆದು ಪುಣ್ಯಾಶ್ರಮಕ್ಕೈತಂದು ಚ್ಯವನನಂ ಕಂಡೆಡೆಗೆಡೆದು– ತಾಂ ಶ್ರೀರಾಮನನುಜನೆಂ, ಶತ್ರುಘ್ನನೆಸರ ಬಾಲಕಂ, ಜನ್ನಗುದುರೆಯುಂ ಬೆಂಬೞಿವೋಪ ಬಟ್ಟೆಯೊಳ್ ತಮ್ಮಡಿಯುಂ ಕಂಡು ಪರಕೆಗೊಳ್ವೊಡೆಂದು ಬಂದೆನೆಂದು ಕೇಳಿಸಿದಂ. ಮುನಿಯೆಂಗುಂ—ನಿಡುಗಾಲಂ ಜಗದಱಿಕೆಯೊಳ್ ಬಾೞ್ಪೊಂದು ಸ್ವಪಂ ನಿನ್ನೊಳೀಕ್ಷನೊಡರ್ಚುಗೆ! ಶ್ರೀರಾಘವಂ ಬೇಳಲಿರ್ಪನೆಂದು ಜಾನದೊಳ್ ಬಗೆಯುಱಿತು ನೀಂಗಳತ್ತಂ ಬರ್ಪೊರೆಂದು ಪೊೞ್ತನೆ ಪಾರುತುಮಿರ್ದೆಂ; ಚೆನ್ನಾಯ್ತು, ಕುಳ್ಳಿರೆಂಗು ಯಥೋಚಿತಂ ಸತ್ಕರಿಸಿದಂ. ಮತ್ತಮೆಸಸುಂಬೊೞ್ತು ಧರ್ಮಕಥಾಕಥನದೊಳಿರ್ದಂಬೞಿಯುಂ ರಾಘವನಂ ಕಣ್ಣಾಱೆ ನೋಡಲೆಳಸಿಪ ಮನದಿರವನಱಿಪಿದಂ. ಶತ್ರುಹನೆಂಗುಂ–ಮುನಿಯಿಷ್ಟಮಿಂತಿದು; ಬಯಸುವೆಯಪ್ಪೊಡೆ ಈಗಳೆ ಕೊಂಡುಯ್ವೆಂ ಶ್ರೀರಾಮದೂತನಂ ನೇರ್ಪಡಿಸುವೆಂ. ಮುನಿಯೆಂಗುಂ–ಲೇಸು! ಲೇಸು! ಈ ಪೊೞ್ತೆ ರಾಮನಡಿದಾವರೆಯುಂ ಕಂಡು ಸಕುಟುಂಬಂ ಧನ್ಯನಪ್ಪೆಂ. ಆರವಂ ರಾಮನ ನಚ್ಚಿನ ಬಂಟಂ? ಶತ್ರುಹಂ ಹನೂಮಂತನಂ

ಸುಟ್ಟಸಲೊಡಮಣುವಂ ಮುನಿಗೆ ತಲೆವಾಗಿ— ಆಣತಿಯೊಳಿರ್ಪೆನೀಗಳೆ ಅಯೋಧ್ಯೆಗೆ ನಿಮ್ಮನುಯ್ದು ಮಖಶಾಲೆಯೊಳ್ ಬಿಟ್ಟು ಮರಳ್ದಪೆನೆಂದೊಡನೆಯೆ ಚ್ಯವನಂ ತನ್ನಾಶ್ರಮಮಂ ಮಿಕ್ಕುಳಿದ ಋಷಿಗಳ್ಗೊಪ್ಪಿಸಿ ಬೆಸನಂಗೊಂಡು, ತಾನುಂ ಸುಕನ್ಯೆಯುಂ ವಾಯುಸುತನ ಪೆಗಲನೇಱೆ ವಾಯುವೇಗದಿನಯೋಧ್ಯೆಗುಯ್ಗೆಱಿಪಿ, ಇನ್ನೆಬರಂ ತಮ್ಮ ವಿಜಯಯಾತ್ರೆಯಂ ರಾಘವಂಗಱಿಪಿ, ಮತ್ತಮಾತನಾಣತಿಯಿಂ ಬೆನ್ನನೆ ಶತ್ರುಘ್ನಂಗೆ ಬೆಂಬಲವಾಗಿ ಬರುತುಮಿರ್ದಂ.

ಎಂಬಲ್ಲಿಗೆ

ಶ್ರೀರಾಮಾಶ್ವಮೇಧದೊಳ್ ಚ್ಯವನಾಶ್ರಮವರ್ಣನಮೆಂಬ ನವಮಾಶ್ವಾಸಂ

ಸಂಪೂರ್ಣಂ.

ದಶಮಾಶ್ವಾಸಂ.

ಎನ್ನ ನಿಚ್ಚದ ಪೂಜೆಯ ಕಟ್ಟಚ್ಚಿನ ಪ್ರಾಣಲಿಂಗಮೆ! ಎನ್ನ ಕೈಮಂಚಿನ ಗೆಡೆಯಾಟದ ಮುತ್ತಿನ ಸೆಂಡೆ! ಎನ್ನ ಚೆನ್ನಪ್ರೆನ್ನರಸಿ!

ಇಂತು ಹಯಂ ಪಯೋಷ್ಣೀನದಿಯಂ ದಾಂಟಿ ಬಲ್ದೂರಂ ನಡೆನಡೆದು ಪೋಗೆ ಪೆರ್ವೆಟ್ಟಂ ಮುಂ.....

ಮನೋರಮೆ— ಎನ್ನರಸ! ನೀನೋರ್ವನಪ್ರೂರ್ವಂ ಬಣ್ಣಗಬ್ಬಿಗರ ಬಲ್ಲಹಂ ಗಡ! ಪೋಪೋಪ ಬಟ್ಟೆಯೊಳ್ ಅಡವಿವೆಟ್ಟುಗಳನೆ ಬಣ್ಣಿಪಯ್. ಅಶ್ವಮೆತ್ತಾನುಂ ನಾಡಂ ಪುಗದೆ?

ಮುದ್ದ— ಓ! ಆಗಡೆ ವಾಜಿ ವಾಜಿಪುರಮಂ ದಾಂಟಿ ಪೋದುದು.

ಮನೋ— ಏಂ ಬಲ್ಪುಳ್ಳ ರಾಯಂ ಕಟ್ಟಿ ಕಾದನೆ!

ಮುದ್ದ— ದಿನಪತಿಯ ಪೆಂಕುಳಿರಾಯನೇಂ ಕಟ್ಟುಗುಂ! ಏತೆಱ ಬೀರಂ! ತಾನೆ ಕೈಗಟ್ಟಿದಂ.

ಮನೋ— ಶತ್ರುಹಂಗೆ ಕಾಣ್ಕಯಿತ್ತು ಮಱೆವೊಕ್ಕನೇಂ?

ಮುದ್ದ— ಅಪ್ಪುದಪ್ಪುದು; ತಾಂ ತನ್ನ ನಾಡಂ ತನ್ನಂ ತನ್ನ ಬೀಡಂ ರಾಘವನ ಪೆಸರೊಳ್ ಶತ್ರುಹಂಗೊಪ್ಪಿಸಿದಂ.

ಮನೋ— ಆಃ! ಶತ್ರುಘ್ನಂ ಬಲ್ಗಡುಸುಗಾಱಂ.

ಮುದ್ದ— ತಡೆಯೇಂ! ಅಂತು ಮಱೆವೊಕ್ಕು ಬಂದ ರಾಯನಂ ನಾಡಂ ಬಸ್ಪಗೊಂಡು ಮುಂತೆ ಬರ್ಪಪಥದೊಳ್—

ಅಡಿಗಡಿಗೆ ಬದ್ದಬದಸಿಂ ಪಗೆದು ಪತ್ತುವಿಡಿಸಿ ದೆಸೆಗಿಡಿಸಿದೊಂದು ಬಗೆಗೇಡಿಂ ದೆಸೆದೆಸೆಯ ಕಟ್ಟಲೆಯ ಬಿಂದವೊಂದುಗೂಡಿ ಗುಂಡುಗೊಂಡು ತಮ್ಮ ಪಗೆಯ ಬೆಂಗದಿರನ ಬೊಂದಿಯಂ ಬಂದಿವಿಡಿವೊಂದುರವಣೆಯಿಂ ಬಾಂದಳಮನೇಱೆ ಪೋಪವೆನೆ—ನೆರೆದ ನೀರ್ವೊರ್ಟ್ಟಣದೊಳ್ ಬೆಚ್ಚಂತಿರೆ ಮೈವೆರ್ಚೆ ನಿಗುರ್ದದೊಂದು ನೀಲಪರ್ವತಂ ಮಾಕಾಳಿಯ ಎಡಮೊಲೆಯಂತೆ ವಿರಾಜಿಸಿದತ್ತು. ಅಂತದು ದಟ್ಟಯಿಸಿ ಮುಗಿಲ್ಮುಟ್ಟೆ ಬೆಳೆದ ಕರ್ಮರಂಗಳಿಱುಂಬಿನ ಬನಗಟ್ಟಲೆಯನೊಳಕೊಂಡೇಪೋಲ್ತುಂ ಚರಿಪ ಖಗಮೃಗಂಗಳ್ಗೆ ತಣ್ಗೊಳನೊಂದು ಭ್ರಾಂತಿಯಂ ಪ್ರಕ್ಟಿಸಿ ಬರ್ತರದಿನಿಂಬುಗೊಂಡ ಕರ್ಮಣಿಯ ಪಾಸಱೆಯಿಂ, ಅಂದು ಚಂಡಿಕೆಯಂ ಕೂರ್ವಾಳಿಂ ಪೋಲ್ದುಡಿವೋದ ಮಹಿಷಾಸುರನ ಬಿರಿವೊಡೆಯಿಂ ಸುರಿದ ದಂಡೆಗರುಳ್ಗೆ ಪಾಸಟಿಯಪ್ಪ ಅರೆಜರಿದ ಜಾದಿನ ಕೋಡುವೆಟ್ಟನೊತ್ತುಗೊಂಡು ಸಿಂಗೂರವಿಲಿಪ್ತ ಮದಸಿಂಧುರಗಂಡಮಂಡಲದೊಂದು ಪಾಂಗಿನಿಂ ತೋರ್ಪ ತಪ್ಪಲಿಂ, ಪಗಲ್ಗೆ ಪಡಿನೇಸಱೆನೆ ಇರುಳ್ಗೆ ಪಡಿದಿಂಗಳೆನೆ ತೊಳಗಿ ಬೆಳಗಿ ಬೆಟ್ಟುವಗೆಯಂ ಪಗೆಯೆನಿಟ್ಟು ಕಾಳಿಸುವ ಕಡಿಕಂಡದಂತೊಪ್ಪುವಚ್ಚವಳಕಿನ ಗಂಡಶೈಲದಿಂ, ನಿಚ್ಚವಯಣಂ ಬರ್ಪ ಜಾತ್ರೆಯ ಜನರ ಬಿರ್ದಿನ ಪಗಲೂಟದ ಬಾಣಸಿನಾವಿಗೆಯ ತನಿಗೆಂಡದೋವರಿಯೆಂಬಂತು ತಟತಟನೆ ಪೊಳೆವ ರಂಗುಮಾಣಿಕದಗೆತ್ತೆಯಿಂ, ಪುರುಷೋತ್ತಮನ ನಿಡುವಣೆಯ ತ್ರಿಪುಂಡ್ರದೊಂದು ಸಾಟ್ಯೆಯಿಂ ಮೂಱುಂ ಕೆಲನೊಳಜಾತರ್ಪ ಬೆಳ್ಳಂಬರಿವಬರ್ಯಿಂ, ಉಣ್ಣಡರುಣ್ಬಮರ್ದುಮರ್ದಮರ್ದ ಪೊಂಬಾಳೆದೋಂಟದೊತ್ತಿನ ಪೇರುಚ್ಚದಿಂ, ಸಿದ್ಧರಸದ ಮಡುವಿಂ, ಪರುಸಗಲ್ಗಳಿಂ, ಮನೋಜ್ಞಂ.

ಮತ್ತಮಲ್ಲಿ ರನ್ನಗಲ್ಲೆಡೆಯ ಫುಲ್ಲ ನಲ್ಮಾಸಿನೊಳ್ ಚೆಲ್ಲದಿಂ ನಲ್ಲಳ್ವಿರಸು ನಿಲ್ಲದೆ ಕುಳ್ಳಿರ್ದು ಮೆಲ್ಲಮೆಲ್ಲನೆ ಉಲ್ಲಿಗಟಿವ, ಬಲ್ಲತನದ ಸೊಲ್ಲ ಸೊಗದ ಘುಲ್ಲಣೆಯ ಕೊಲ್ಲಣದೊಳ್ ಸೆದುಮಲ್ಲಿಗಲ್ಲಿಗೆ ಮಲ್ಲಡಿದಿರಿವ ಪಲ್ಲಬಲ್ಲುಲಿಗೆ ಕಲ್ಲದಾಡುವ ತೆಲ್ಲಯಿಸಿದ ಮಲ್ಲಗಿಳಿಯ ಸವಿನುಡಿಗೆ ಪಲ್ಲಟದ ಘಲ್ಲಣೆಯುಲ್ಲಣೆಯ ಗಂಜುಗೋಗಿಲೆಯಿಂಚರಕ್ಕೆ ಪಲ್ಲಣಿಯ ಬೆಲ್ಲಂಗೋಲ್ವಿಲ್ಲನ ಮಲ್ಲಿಗೆ ಸರಲ ಜಲ್ಲಣೆಗೆ ತಲ್ಲಣಂಗೊಂಡು ಸಾವಗಿಸುವ ನೋವನೋವದೆ ಬಾವೆಯೊಡನೆ ಪೂವಸೇವತಿಗೆಯ ಕಾವಣದೋವರಿಯಂ ಸಾರ್ದು ಕಾವನಾಟದೊಳೀವ್ರೀತ್ರಂ ಸೇವಿಸುವ ಬಿಜ್ಜೋದರರುಂ, ಮತ್ತಮೊಂದೆಡೆಯೊಳ್ ಕಡೆಗಣ್ಣೋಟಂ ಕುಡಿವರಿಯೆ ಕುಡುವುರ್ವು ಸೆಡೆಯೆ ಬಿಡುಜಡೆ ಬೀಡುವಿಡೆ ನಡು ಪೊಡೆಯೆ ನಿಡುವೊಲೆ ಜಡಿಯೆ ತೊಡೆಯೊಳಟ್ಟೆಡೆಯೊಳಾಸಿಸಿ ಜತಗೂಡಿದೇಟಿಂ ಸರದ ಮೆಲ್ದನಿಯೋಜೆಯಿಂ ನುಡಿವಂತು ಮಿಡಿವು ಮಿಡಿವಂತು ಪಾಡಿ ಬಿನದಿಪ ಕಡುಬೆಡಗಿನಚ್ಚರಸಿಯರುಂ, ಮೇಣುಂ ಪೆಱತೊಂದು ತಾಣದೊಳ್ ತಮ್ಮ ನಿಚ್ಚವಸವನವ ಸಿಂಗರಕ್ಕೆಂದು ಸಿಂಗನೆಱಗಿ ಮಿಮುಡುಂಡು ಕೆಲಕೊಕ್ಕ ಮುತ್ತಾನೆಯ ಅಣಿಮುತ್ತುಗಳಂ ಮತ್ತಂ ಬಱಿಯೆತೆಯೆಡೆಯ ಕೆಂಬರಲಿನೋರನ್ನವಾಗೆ ಕಂಪ್ರಗುವ ಪಾರಿಜಾತದ ಮಂದಾರದ ಮುಂಡುಮಲ್ಲಿಗೆಯ ಸೆಂಡುಮಲ್ಲಿಗೆಯ ಬಿರಿಮುಗುಳಂ ತಿಱಿದೊಟ್ಟಿ ಮಾಣಿಕದಡಕಿಲ್ವಟ್ಟೆಯೊಳ್ ತುಂಬಿ ಮೊಱೆದು ಬಱಿಪಲ್ಯ ಮೇಳದ ಮೇಳಂಬಂಗಳ್ ಮುಸುಱಿವಂತು ಮೇಲುಮ ಕಿಟ್ಸೆಱಂಗಂ ಬಾಸಣಿಸಿ ಜೆನ್ನನೆ ಬಪ್ ಜ್ಜೋಲೆಗರ ಬರಮಂ ನಿರುಕಿಸುತುಂ ನಿಲ್ವಪೋಪ ದೇವಾಂಗನೆಯರುಂ, ಕಣ್ಗೆ ಪಪ್ರ್.

ಇಂತು ಕರಮೊಪ್ಪುವ ಕಾರಾನೆಯ ಕಾಳಸಿಂಗನ ಕಗೋಡಗನ ಕರ್ಕ್ಕಿಯಿಕ್ಕೆಯಾಮ ಕರ್ಮುರನ ಕಕ್ಕೆಯ ಕದಾರ್ಟೆಯ ಕರ್ಮುಣಿಯ ಕಗರ್ಲ್ಲ ಕವೆಟ್ಟಮನಿಟ್ಟೆಡೆಯೊಳ್ ದಿಟ್ಟಿಸಿ ಸುಮಿತ್ರಾತ್ಮಜಂ ಸುಮತಿಯಂ–ಎಲೆ ಅಜ್ಜಮ್ಮಂತು! ಮುಂತಿದೆ ಕಾಳರಕ್ಕಸಿಯು ಪೊಳೆಯುದ ಕರ್ವಟ್ಟೆಯ ಗೂಡಾರಮೆನೆ ಕಟ್ಟಿಲೆಯ ಬೀಡಾರದೊಂದಿರವಿಂ ತೋರ್ಪ ಕಾರೊಡಲ ಬಲ್ವಟ್ಟಂ ಏನೆಂದು ಪೇಱಿಯೆ, ಎಂಬುದುಂ; ಸಮಸಂದ ಮುಮಪಿನ ಱಿಖಿನೊಂದೆಟ್ಟಿರಮುಂಗೈನೆಲ್ಲಿಯಾಗಿ ತಾನಿಂತು ಪೇಲ್ದನೆಂತೆಂದೆ.ೞತೆ:–

ಬಲ್ಲಾಳ್ಗಳ ಬಿರುದರ ಮನ್ನೆಯರರಸ! ಸರಸಿಜಾಕ್ಷನ ಚಿತ್ರಂಬೆತ ಪತ್ತೆನೆ ಆತೋರ್ಪುದೆ ನೀಲಾಚಲಂ. ಪರರೊಡವೆಯಂ ನಲ್ಬಿಸ್ರವಬವಸಿನ ಕಸ್ಸಿಱಿಗರ್ಗೆ, ಪೆಱವೆಂಡಿರ್ಗೆಳಸುವ್ರೊಂದು ಬೆಸನವ ಸೂಳರ್ಗೆ, ತನ್ನಜವಂ ಮಾಱುಗೊಟ್ಟು ಪಸುವಾೞ್ವಿ ಗೊಂದೆಬೊಂದಿಗೆ, ಸಂದುಗೊಂದಿನ್ನೊಳಡಂಗಿರ್ಪರ್ ಬಱ್ವೋಕರಂ ಕೊಲ್ವ ಕಳ್ವ ದುಱ್ಱುದುಂಬಿಕೊಲೆಗಂಗೆ, ಪೆತ್ತ ಕೂಡಗೂಸಂ ಪಣಕೆ ಮಾಱುಡಿ ಬಡಲಂ ಪೊರೆವಱಿಬಡಲಿಂಗೆ, ಪಡಿನುಡಿಯುಂ ಪೞಿದು ಮೀಱಿದ ಜಾನಂಗಳನುಱುವ ಬೊಮ್ಮಕ್ರೊಲೆಯುಂಗೆ, ಬೆಸಲಾದ ಮಡದಿಯುಂ ಬಡಿನ ಮಾನಸರಕ್ಕಸಂಗೆ ಕಣ್ಗೆ ಕಾಣಲ್ಬಾರದೊಂದು ಮೈಮೆವೆತ್ತು ನಿಂದಿರ್ಕುಂ. ಮತ್ತಮೀಪೆರ್ಮೆಯ ಪೆರ್ವೆಟ್ಟನ ತುತ್ತತುದಿಯ ತಟ್ಟಿಲೊಳ್ ತನ್ನಂ ಮಱೆವೊಕ್ಕು ತುಱುಲ್ಗೆಯ್ದು ಸೇವಿಸುವಱಕೆಯ ದಾಸರ್ಗೆ ಮಱುಪುಟ್ಟಂ ಪೋಗೊಳಿಸಿ ಸಾರೂಪ್ಯಮನಿತ್ತು ತನ್ನಂತು ಮಾೞ್ಪ ನಾಲ್ದೋಳನೆಸೆವ ಪುರುಷೋತ್ತಮನೊಂದು ವಾಸದ ಗುಡಿಯಿರ್ಕುಂ. ಆವನಾನುಂ ಭಕ್ತಿಯಿನಾಕ್ಷೇತ್ರದೊಳ್ ಸೇವಿಸುತ್ತಮಿರೆ ತನ್ನಿಂ ತಾನೆ ಚತುರ್ಭುಜನಕ್ಕುಂ. ಸಂಕಿನ ಬಟ್ಟಗೈದಿನ ಗದೆಯ ತಾವರೆಯ ಸೊಬಗಿನ ಪೊರ್ದುಗೆಯಿನೆಸೆಗುಂ. ಇದಕೊಂದಿತಿಹಾಸಮಂ ನೇರ್ಪಡೆ ಪೇೞ್ವೆನೆಂತೆನೆ:—

ಈ ಜಂಬುದೀವಿಯೊಳ್ ತೆಂಕಲ್ಗೆ ಅಲ್ಲಿಗಲ್ಲಿಗೆ ಸಂಚರಿಪ ಕೇರಳೆಯರ ತಳಿರಡಿಯ ಲೆಪ್ಪದಲತಿಗೆವೊನ್ನಿಂ ಕೊರ್ವಿ ಬೆಳೆದ ಕೆಯ್ವೊಲಸಿನತ್ತಲಿತ್ತಲೆಡೆಯಾಡುವ ಚೋಳಕಾಮಿನಿಯರ ಕೆಂಪಡರ್ದ ಕಡೆಗಣ್ಣ ಸವಿನೋಟದಮರ್ದಿನ ಪೆಯ್ನೀರಿಂ ತಳ್ತು ಪರ್ಬಿ ನಳನಳಿಸುವ ಪೂದೋಂಟದಿಂ ಬಡನೊಡನೆ ಜತೆಗೂಡಿ ನಡೆದಾಡುವ ಪಾಂಡ್ಯನಾರಿಯರ ಮೆಯ್ಯಪಚ್ಚದ ಪೊಸಪ್ಪೊಗರಿಂ ಬಣ್ಣವೆರ್ಚೆ ಮಿಱುಗುವ ಸೌಧಂಗಳಿಂ ರಂಜಿಸಿ ಸೌಭಾಗ್ಯಲಕ್ಷ್ಮಿಯ ಕಾಂಚೀದಾಮದ ಪೊನ್ನಕೀಲೆನೆ ತೋರ್ಪ ಕಾಂಚೀಪುರಮುಂಟು.

ಮುನ್ನಮಾಪೊೞಲಂ ರತ್ನಗ್ರೀವನೆಂಬೊರ್ವಂ ಕೇಡುಗಾಱರ ದೇವಂ ಮಾರ್ಮಲೆದು ಕೆಯ್ಗೆಯ್ದ ಪಗೆರಾಯರ ಅಟ್ಟೆಯ ಕೆನ್ನೀರ ಬೆನ್ನೀರಿಂ ಜಯಸಿರಿಯಂ ಮೀಯಿಸುತುಮಾವಗಂ ಮಱೆವಾೞ್ವ ಸಾಮಂತ

ಪೆರ್ಗಡೆಯರ ನಾಡಿನ್ನೈಸಿರಿಗಣಿಯರಂ ನೆಲೆವೀಡನಾಗಿಸುತುಂ ತನ್ನೊಂದೇ
ಉಂಜಸದೆಸಕದಿಂ ದೆಸೆನಳರ್ಗೆ ಪೊಸಮಾಡಮಂ ನೇರ್ಪಡಿಸುತುಂ ಪಲ
ಮುಂಪಗಲರಸಾಳುತಿರ್ದಂ.

ಇಂತು ಕೆಲವಾನುಂ ಕಾಲಂ ಪೋಗೆ ಮಾರಾಯುಂ ಸಿರಿವೊೞ್ತಿನೊ
ಳೊರ್ಮೆ ಜಾನಂಬೊಕ್ಕು ಬೞಿಯುಂ ಬೞಿಯರಸಿಯ ಮೊಗಮಂ ನೋಡಿ
ಬೇಸಱೊಂದು ಮಾತಿನೊಳೆಂಗುಂ:— ಎನ್ನರಸಿ! ಸಂಸೃತಿಯೇನಪಾರ
ಮೊ! ಎನಿಪಿರಿದೊ! ಇನಿಗಾಲಂ ಸವೆದೊಡಂ ಸವೆಯದೆ! ಪಂಜರ
ನೊಂದು ಪಕ್ಕಿ ತಾಂ ಸಂತಂ ಸೊಗಂಬಾೞಲಿರ್ಪ ವನರಾಜ್ಯದಱಿವಂ
ಮಱೆದು ತನ್ನ ಬಂದಿವಾೞ್ಕೆಯೊಳೆ ದಿನದಿನದ ಪೊಲ್ವಣ್ಗಳನಿಸಿದಿಸಿದಾಗಿ
ಸವಿಯುತುಂ ನಿಶ್ಚಿಂತಮಿರ್ಪಂತಿರಿದೆ ಮಾನಸಂ ಪ್ರಪಂಚದೊಳ್ ಮಾಯೆ
ದಾವಿಂ ಕಟ್ಟುವಡೆದು ಬಗೆವಗೆಯ ನಶ್ವರಭೋಗಂಗಳ್ಗಾಸೆಪಡುತುಮೆಯ್ಮ
ತುಂ ಪರಮಂ ಮಱೆದಿರ್ಕುಂ. ಆಃ! ಲೋಗರ ಲೋಕದ ತೃಷ್ಣೆಗೆ ತಡಿ
ಯುಂಟೆ! ಸಾಜಂ. ತಾಂ ತನಗೆಂಬೊಂದು ಬೆಮೆಯಿಂ ನರನೞಿಗುಂ.
ಹಾ! ಜೋಲ್ದುಂ ಸಡಿಲ್ದುಂ ನರೆತುಂ ಬಱೆತುಂ ಸುಕ್ಕಿಯುಮಿೞಿದು ಮು
ಱಿದುಂ ಪೋಪೀಮೆಯ್ಯಂ ನಿಚ್ಚಮೆಂದೆ ನಂಬಿ ಸೊಮ್ಮಿಂ ಪೆರ್ಕಳಿಸುವಂ
ಗಾಂಪನಲೇ! ಏಂ ಬಯಲಾಸೆಯೊ! ಆವಗಂ ಸೊಗಮುಂಟೆ! ಪೋಕೆ!
ಬಲ್ಲೆನೊಲ್ಲೆನೀರಾಜ್ಯಭಾರದೊಂದು ದಂದುಗದೆಡರಂ. ಅದಱಿನೀಪೊ
ೞ್ತಿಯುಂ ಎನ್ನ ತೋರದ ಬೀರದ ಮಗನೊಳೇಱಿರಿಸಿ ಮನಂ ನೆಮ್ಮುಗೆ
ಗೊಂಡು ನೆಲೆನಿಲ್ವಿನಂ ತೀರ್ಥಾಟನಂಬೋಗಲೆಣಿಪೆಂ. ನೀನುಮಾನುಂ
ಪೋಪಂ. ಪುರುಳೇಂ ಬಱುವಾೞ್ಕೆಯ ಬರ್ಮಂಕಿನೊಳ್*!

ಸೌಮಿತ್ರಿ! ಇಂತರಸನರಸಿವೆರಸು ಸಂಸೃತಿಯೊಂದು ಬಾೞ್ಕೆ
ಡಂ ಕುಱಿತು ಮಾತುಗುಟ್ಟುತಿರ್ಪಂ ಬಿರ್ಪಣಿಸಂ ಮರ್ಪಣಿಸೆಂಬಂತಿ
ರುಂಡು ಸೆಜ್ಜೆವನೆಗೆ ಪವಡಿಸಲ್ಕೆಂದು ಪೋದಂ. ಅಂತು ಬಗೆಯ ಬಗೆವ
ಗೆಯ ನೆನೆಪಿನ ಕಳವಳದಿಂ ನಿದ್ದೆವೋಗದ ರಾಯುಂ ಕಡೆಯಿರುಳೊಳೊ
ರ್ವಂ ಪಾರ್ವಂ ಬಂದು ತೀರ್ಥಯಾತ್ರಾಫಲಮುಂ ತದುಕ್ತವಿಧಿಯುಂ ನೆಱೆ
ತಿಳಿಪಿ ಮಾಯಮಾದೊಂದು ಕನಸಂ ಕಂಡು ಪೊೞ್ತಱೆಯೊಳೆೞ್ದು ನಿತ್ಯ
ಕರ್ಮಂಗಳಂಗೆಯ್ದೋಲಗಮುಂ ಪುಗುತಂದಂ.

ಆಪೊೞ್ತಿಂಗೆ ಮೂಡಿವರ್ಪ ಸೆಗಳಗದಿರನ ತೇಜಮಂ ಪಡಿತಳಿಸಿ ಕಡೆಗಣ್ಮುವ ಸಿರಿಮೊಗದ ಕಾಂತಿಯಿಂ, ಗಂಗರಗಿವಿಯನ ನಡುನೆತ್ತಿಯಿಂತಿರೆಗೆ ಭೋರೆಂದು ಧಿಂಕಿಡುವ ಸುರಗಂಗೆಯೊಂದು ಬೆಳ್ಪಿನಲ್ಗೆ ದೊರೆವರ್ಪ ಬಿಡುಜಡೆಯ ಬೆಳಗಿಂ, ತಳ್ತ್ಯಕಿಲ ಪುಡಿಗಪ್ಪುರದ ಮಲ್ಲಿಗೆಯ ಪೊಲ್ಗಡಲ್ನೊರೆಯ ಸಮಸಂಬೊಂದು ಬೆಳರ್ಪಿಂ ರಾಜಿಪ ಮೆಯ್ಯಿಂ, ಅತ್ರಿಪುತ್ರನ ಕೈಗುಂಡಿಗೆಯುಂ ಕೀೞ್ಮಾಡುವೊಂದು ಪಳಿಕಿನ ಕರವತಿಗೆಯುಂ ನಾರಾಯಣನ ನಾಲ್ಕುಂ ತೋಳ್ಗೆ ಪಡಿವರ್ಪ ನಾಲ್ದೋಳಂ, ಚೆಲ್ವಾದ ಭೂಸುರಂ ಚಾವಡಿಗೆ ಪಡಿಮೊಗನಾಗಿ ಬರುತುಮಿರ್ಪುದಂ ಕಂಡು ರಾಯನಿದಿರೆೞ್ದು ವಂದು ತಲೆವಾಗಿ ಕೈಗೊಟ್ಟು ನಡೆಯಿಸಿ ತಂದು ಪೊನ್ನ ಗದ್ದುಗೆಯೊಳ್ ಕುಳ್ಳಿರಿಸಿ ಯಥೋಚಿತಂ ಪೂಜಿಸಿದಂ. ಮೇಣುಂ ಸುಖೋಪವಿಷ್ಟನಾದಾಭೂಸುರನಂ ಓರೊಂದು ನುಡಿಗುಟ್ಟಿ ಕುಶಲಪ್ರಶ್ನೆಯಂ ಬೆಸಗೊಂಡು ಮತ್ತಂ— ದೇಸಿಗರಾಣ್ಮ! ಬೆಳರ್ಮೆಯ್ಯನಾಂತ ಪಕ್ಕಿದೇರನಂತುಂ ನಾಲ್ಗೈವೊತ್ತ ಬಾಂಬೊಚ್ಚದಲೆಯನಂತುಂ ಬರ್ತಲೆಯ ಪೊಂಬಸಿಱನಂತುಂ ನಿನ್ನಂ ಕಾಣ್ಬೆಂ. ಇಂದಿಂಗೆನ್ನೀಪುಟ್ಟು ಕಟ್ಟುಗೆಟ್ಟುದು. ಆಃ! ನಿನ್ನನೆ ಕುಱುಪಿಟ್ಟು ಪೇೞ್ದುದಕ್ಕಂ ನಿನ್ನಿನೊಂದು ಕನಸು. ದಿಟ್ಟಂ! ಪುಟ್ಟುಸಾವೆಂಬ ಕಟ್ಟುಬ್ಬಸದುರ್ಬಿನ ಕಡಲೊಳೋಡಲೋಡಮಂ ಪೋವಿಟ್ಟನಗೆ ನೀನೆ ಪುಟ್ಟು. ಇನ್ನೇಂ. ಮಱುಮೆಯ್ಯೊಳೀಬನ್ನಮಂ ಕಾಣಲ್ಬಾರದಂತು ಕರುಣಿಸಯ್! ಮರ್ತ್ಯರ್ ತೀರ್ಥಯಾತ್ರಾದಿಸತ್ಕರ್ಮಂಗಳಿಂ ಪಾವನರಪ್ಪರೆಂಬರಲ್ತೆ. ಅಂತಿರ್ಪೆನಂ ತೀರ್ಥಯಾತ್ರೆಗಾವ ಕ್ಷೇತ್ರಂ ಮೊದಲ್, ಆವುದು ಪೆರ್ಮೆಗೆಡೆ? ನೀಂ ಜಾತ್ರೆಗನಲೆ! ಕೂರ್ಮೆಯಿಂ ನಿರವಿಸೆಂದು ಕೈಮುಗಿವುದುಂ; ಭೂಸುರಂ—ರಾಜಕಂಠೀರವ! ನೀಂ ಶುದ್ಧಾತ್ಮಂ. ಪೂರ್ವಜನ್ಮವಾಸನಾವಿಶೇಷದಿನಿಂತೊಂದು ಬಯಕೆ ಪುಟ್ಟುಗುಂ ಜನರ್ಗೆ. ಕೇಳ್ಕೈ! ಸಮಸ್ತಕ್ಷೇತ್ರಂಗಳೊಳಂ ಶ್ರೀರಾಮನೆ ಪಾವನನಾತನಯೆ ಕೀರ್ತಿ, ಆತನಯೆ ಮೂರ್ತಿ, ಆತನಯೆ ಮೈಮೆ, ಆತನಯೆ ಪೆರ್ಮೆ. ಇವಱೊಳೊಂದು ಪುಣ್ಯಕ್ಷೇತ್ರಮೆನೆ ಪ್ರಸಿದ್ಧಕ್ಷೇತ್ರದಿರವನೊರೆವೆಂ:— 12364

ಮುನ್ನಂ ಗಾವಿಲನಾಂ ಸ್ವೈಬಿನೊಂದೆಡೆಯಸಾಯ್ವೆನೆಂದು ಪೆಸರ್ವೆ

ತ್ತ ತೀರ್ಥಕ್ಷೇತ್ರಂಗಳೊಳ್ ಸಂಚರಿಸುತಿರ್ಪನ್ನಂ ನಡುವಟ್ಟೆಯೊಳ್
ಪಲಂಬರಂ ಕರ್ವೇಡರಂ ಕಂಡೆಂ. ಕೊರಲ ತೊಳಚಿಯು ಮೊಲ್ಲುಡಿಯು
ತೋರದಂಡೆ ವಿರಾಜಿಸೆ ಪಣೆಯ ಮೂಱುಂಗಪಲ ಸಿಡುಸಾಮುಮೊಸೆಯೆ,
ಮೆಯ್ಯ ಕರ್ಬೊಗರ್ ಮುಗಿಲ್ಗೆ ಪಾಸಟಿಯಾಗೆ ಅಳವಟ್ಟ ಸಾಲ್ಗ್ರಗಳೊಳ್
ಪೊತ್ತು ಕೈದು ತೆಱಂಬೊಳೆಯೆ ವಿಘ್ನದೂತರೆನೆ ಬಲ್ಲಿದರಪ್ಪ ಶಬರ
ರಂ ದಿಟ್ಟಿಸಿ ಕಟ್ಟಚ್ಚರಿವಟ್ಟವರೊಂದು ವೃತ್ತಾಂತಮಂ ಬೆಸಗೊಂಡೆನದ
ಕಾರ್ಪುಳಿಂದರೊಳೊರ್ವನಿಂತು ಬಿತ್ತರಿಸಿದಂ:— ಚಿತ್ತವಿಸಯ್ ಗಹ
ನನೊಡೆಯ! ಇದೆ ಪೊಂಬೆಟ್ಟದೊಡನೆ ತೂಗೆವರ್ಪ ಕರ್ವೆಟ್ಟು. ಮು
ತ್ತ ಕಾಲದೊಳೊರ್ಮೆ ಬೇಂಟೆಯೊಂದು ಬೆಸನದಿಂ ಅತೋರ್ಪ ನೆರೆ
ವೆಟ್ಟನೆಮ್ಮ ಪಕ್ಕಣದಿಂ ತಳರ್ದು ಬಳಗಂಬೆರಸೀಅಂಜನಗಿರಿಯೊಡೆಯ
ಕಿಬ್ಬರಿಯ ಪಱುನ್ರೇಳ್ ಸರವಿವ್ರೋತ್ಪ್ರದುಂ ಎಮ್ಮ ಬಾಲಕರ್ಕಳೊ
ಳೊರ್ವಂ ತನ್ನೆಣೆವರೆಯದ ಗೆಳೆಯರ ಕೂಡಾಡುತೆ ಕಣ್ಮುಚ್ಚೆಯಾ
ಟಕ್ಕೆ ಮೆಯ್ಗರೆವಡಂಗಿರಲ್ಕೆಂದು ಮೆಲ್ಲಮೆಲ್ಲನೆ ತುತ್ತುತುದಿಗೆ ಪೋಪೋ
ದಂ ಗಡ! ಅಂತು ಪೋದ ಬಾಲಕನ ಕಣ್ಗೊಂದು ಬೆಲೆವಣಿಗಟ್ಟನ
ದೇವಾರಂ ತೋಱುವಪೂರ್ವಮುಂ, ತನಗದು ಮಱೆಯೊಂದು ತಾಣಮೆಂದೊ
ಳಪೊಕ್ಕಂ. ಅಗಳೊಳಗೊಳಗೊಂಬೆಡೆಯೊಳ್ ಪರುಟವಣೆಯ ಗಾನವ
ನಚ್ಚಣೆಯ ಬಾಜಣೆಯ ಬಿಜ್ಜೋವರರ ಗಂಧರರಚ್ಚರರ ಗಜಬಜೆಂ ತೇ
ರೈಸಿದ ಕುಂಚದ ಕಂಚುಗನ್ನಡಿಯ ಬಿಜ್ಜಣಿಗೆಯ ದೇವಾಂಗನೆಯರ
ಗೊಂದಣಂ, ಸೇವಿಪ ಭಾವಿಪ ಸಂದ ಚೇವರ್ಕಳೊಂದೊಗ್ಗರಂ, ಒಲೈ
ಪ ಸೂಟಿಱಿತೆಱಗುವ ಬೇಡುವ ನೋಡುವ ದೆಸೆಗೊಡೆಯರೋಳಿ, ಎತ್ತು
ವಾರತಿಯ ಪೊಗೆವ ದೂಪದ ಬೆಳಗುವ ದೀಪದ ಪೊಸನೋಟಂ ತನ್ನಂ
ಬೆಮೆಗೊಳಿಸಲೊಡಂ; ಪಸುಳೆಗುಪರಂ ತನ್ನ ಕಟ್ಟಿದಿರ ಪುರುಷೋತ್ತಮ
ಮೂರ್ತಿಯನೆವೆಯಿಕ್ಕದ ನಡುನೋಟದಿಂ ದಿಟ್ಟಿಸುತೆ ಕುಳ್ಳಿರಲೊಡಂ;
ಭು ಭೂ ಭೂ ಎಂದು ಪೂರಯಿಪ ಶಂಖದ ಧಟಿಂ ಘಟಿಂ ಧಟಿಮೆಂದು ಮೊ
ೞಗುವ ಭೇರಿಯ ತುತ್ತುತ್ತುರೆಂದು ಸೂಳಯಿಪ ಪೆಗ್ಗಾಳೆಯ ಬಲ್ಲುಲಿಯೊ
ಳೆ ಮಾಪೂಜೆ ಸಮಸಂದುದು. ತಱುವಾಯಿಂ ಪರಿವಿಡಿಯೊಳೆಡೆಗೊಂಡ
ಪಂತಿಗೆ ತೀರ್ಥಪ್ರಸಾದಂಗಳನೋರಣದಿಂ ಪಚ್ಚುಗೊಟ್ಟುಂ ಸವಿದುಂ

ತಂತಮ್ಮೆಡೆಗೆ ಪೋದಿಂಬಳಿಯಂ ತನ್ನ ಪಾಲ ಸಿಕ್ಕಕಮನುಂಡೆಮ್ಮೆಳೆಯ
ನುಂ ಪೋಜನಪ್ಪಂ. ಇನಿಪ್ರೊಪ್ತಿಂ ತಡೆದೆಂ, ತೆತ್ತರೆಂ ಬೈವರೊ ಕಾಣೆ
ನೆಂಬೊಂದು ತಳಮಳದಿಂ ಬಿಮ್ಮನೆ ಬರ್ಪ ಹೊನ್ನಪೊಂದು ರೂವಿನೆಮ್ಮ
ಮುದ್ದುಗುವರನಂ ಕಟ್ಟಿದಿರೊಳ್ ಕಂಡು ನೊಂದಿರೊಂದು ಚೆಲ್ವಿನ ಪಲ್ಲ
ವಂಬಿ ಬಗೆಯೊಳೊಡವರ್ಂತು ಪ್ರೀತ್ತ ನಾಲ್ದೆಳ ಶೋಭೆಯು ಕಂದ
ನೊಂದಿರಂ ಮನಂಬುಗಲೊಡಂ ಸಂತಸವಟ್ಟರಿಯೊವೊರ್ದಲೆೞೊಗೆತ
ಪ್ರರ್ಮಮೀಕತೆಯನಾತನಂ ಕೇಳ್ದಿಪ್ರ. ಆಗಳ್ ತಾಂ ಪೋದುದಂ ಕಂಡುದಂ
ಕೊಂಡುದನುಂಡುದಂ ಮತ್ತಂ ಬಹುರ್ಣಬಟ್ಟೆಯೊಳೆ ಪೊಸತೋಳ್ ಕಮ
ಲೊಡೆಮದನೆಮಗೆ ತಿಳಿಯೆ ಪೇಳ್ದಂ ನಡೆದುಂ ಬಳಲದೆ ನುಡಿದುಂ ಬೇಸಱ
ದ ತನ್ನವತೆಯುಂ ತೋಱಿಸಿದಂ. ಏಱಿವರರಸ! ಪಾರದಂ ಸಿಪ್ಪರಸಮಾ
ದೊಂದು ಸಂತಸಂ ಬಾಲನಿರವಂ ಕಂಡೊಡಪ್ಪುದುಂ ಆಮೆಲ್ಲರುಮೀನೀಲಗಿರಿ
ಯ ಮುಗಿಲ ನಿಗರದ ಶಿಖರಮನೇಱಿ ಮೈಮೆವೆತ್ತ ಶ್ರೀಪುರುಷೋತ್ತಮ
ನಂ ಕಂಡು ಇಂತು ಪಾವನರಾದೆವಯ್! ಎಮಗಾನಗಂ ಪಸಿವ್ರನಿದ್ದೆಗಳ
ನೋವಾಗದು. ನೀನುಮಾಕಾರುಣಿಕಮೂರ್ತಿಯುಂ ಕಣ್ಣಾಣಿಯೆ ಕಂಡು
ಪೋಗೆಂದೆನಗೆ ಬಟ್ಟೆದೋಱಿ ಜೇಡರ್ ತಮ್ಮಾವಾಸದತ್ತಲ್ ಸಂದರ್.

ಇಂತು ತನ್ನ ಮುನ್ನೊಡಗೊಗೆತನದ ಸುಕೃತವಿಶೇಷದಿನಾಬೇಡ
ರೊಂದುಪದೇಶಮನೊಪ್ಪುಗೊಂಡು ಪೆಸರ್ವೆತ್ತ ನೀಲಶೈಲಮನಡರ್ದು ಆದಿ
ಮೂರ್ತಿಯ ದರ್ಶನದಿನಾನುಮಾತನ ಸಾರೂಪ್ಯಪದವಿಯೊಳ್ ಸಂದು ಬಂ
ದೆನರಸಾ! ಈಗಳಾನುಂ ನಿಶ್ಚಿಂತಂ. ನಿನಗಮೀಬಗೆಯ ಪ್ರೇಱಿ
ತ್ರಿಣ್ಣಮಾಗೆ ನಿಶ್ಚಮವಪಾದ್ಯೈಕದೊಂದು ನೆರಂ ಪಾರಲಪ್ಪುದೆಂದು ಕಥಿಸಿದಂ.

ಲವಣಾಂತಕ! ಇಂತು ತನ್ನೊಂದಿರವಂ ಕೇಳಿಸಿದ ಬ್ರಹ್ಮಬಂಧು
ವಂ ರನ್ನಗೊರಲಂ ಮತ್ತಮಿದೊರ್ಮ್ದ— ಲೇಸುಲೇಸಯ್! ನೀಂ ಧನ್ಯಂ
ಸಾಜಂ, ನಿನ್ನೊಂದು ದರ್ಶನಮಂ ಪ್ಪಿನಮಾನುಂ ಧನ್ಯನೆಂ. ಆದೊಡಮಂ
ತೀರ್ಪಟ್ಟ ಕ್ಷೇತ್ರಮಂ ಕಣ್ಣಾಱೆ ಕಂಡು ಬಂದ ಭವದ ಬವಣೆಯೊಂದ
ದಂತುಂ ಮುಂದಣ ಭವದ ಭಯಂ ಬಾರದಂತು ತಡೆಗೆಯ್ವುದೇ? ಮೇಲ್.
ಅಂತಮಕಾರಣಂ ನೀನೆ ನಾಯಕನಾಗಿ ಕೊಂಡುಯ್ದುಕ್ಷೇತ್ರಮನೆಮಗಂ

ತೋಱಿ, ಎಂಬುದುಂ; ವಿಪ್ರಂ—ತಪ್ಪೆಂ! ಬರಲಪ್ಪೆನೆಂದು ಸಂತವಿಡೆ ಜಾತ್ರೆಯ ಪಯಣಕ್ಕೆ ಪಸಱಾದ ಸನ್ನಣಮಣಿಯಾದುದು. ಆ ಪೊೞ್ತಿಂಗೆ ಪೊಱಲ ಕೇರಿಕೇರಿಯ ಬೀದಿಬೀದಿಯೊಳತ್ತಂ—ಓವೊ! ಬಗೆತನದ ದಂದು ಗೆ[illegible]ಬೇನೆಯು ಸೂಡಿಂ ಬೇಸರ್, ಸಂಸ್ಕೃತಿಯ ಕಣ್ಣಿವಲೆಯೊಳ್ ಕಟ್ಟು ಪಡೆದು ನೋವರ್, ಮುಂಚೆ ಬಂದ ಸಂಚಿನ ಪ್ರಪಂಚದ ಕೊಳೆಗುತ್ತದ ಬೇನೆಗೆ ನರಳ್ವರ್, ಅಱುವಗೆಗಳ್ಗೆ ತಮ್ಮಂ ಮಾಱುಗೊಟ್ಟು ತೊೞ್ತರ್! ಇದೆ ಮಾರಾಯುಂ ತೀರ್ಥಯಾತ್ರೆಗೆ ಪೊಱಮಡುಗುಂ; ಮನಮುಳ್ಳರ್ ಬರಲಕ್ಕುಮೆಂದು ಡಂಗುರಮಂ ಸಾಱುವಂತಿರೆಂಕವಱೆ ಮೊೞಗೞಡಂ ತಮಗೀಬಾಳ್ಕೆಯೇಂ ಬಾೞ್ತೆಯೆಂದು ಪೌರರೆಲ್ಲರ್ ಪೊಱಪಯಣಕನುವಾದರ್.

ಇಂತು ಕೊಂಗರ ಕೊರವರ ಮಡಿವಳರ ಕಮ್ಮಾರರ ಕುಂಬಾರರ ಕಂಚುಗಾರರ ದೂಸಿಗರ ಪಾಪಡಿಗರ ಸಮ್ಮಗಾರರ ಬಳೆಗಾರರ ಪರವರ ಕ್ಷತ್ರಿಯರ ಪಾರ್ವರ ನಾಡಿಗರೊಂದು ಜಂಗುಳಿ ಶ್ರೀರಾಮನ ನಾಮದ ಜಾನದೆ ನಾಡಂ ಬೀಡಂ ಕಡೆಗೊತ್ತಿ ಪೊಱಮಟ್ಟರಪ್ಪುದುಂ ರಾಜನೇೞ್ತರದೞಿಯಿಂ ತನ್ನ ಪರಿವಾರಸು ಸಬಳದ ಕೊಂತದ ಗೂರ್ವಾಳ ಬಿಲ್ಲ ಬಾಣದ ಮೈಗಾವಲರೊಡನೆ ಮಂಗಳಯೋಗದೊಳ್ ಶ್ರೀರಘುಪ್ರವರನಡಿಯ ತುತ್ತುರ್ತಾಡಿನ ಬೀಣೆಯ ಜವಳಿಮದ್ದಳೆಯ ಕಂಸಾಳೆಯ ಸಂಕಿನ ಕಾಳೆಯ ಮೇಳದವರ್ ಕೂಡೆ ಬೀಡಿಂ ತಳರ್ದು ದಿನಪಯಣದೊಳ್ ಜಾತ್ರೆ ಪೋಗುತುಮಿರ್ದಂ.

ಲಾಲಿಸು! ಶತ್ರುಘ್ನ! ಈ ಬಗೆಯಿಂ ರತ್ನಗ್ರೀವಂ ತನ್ನೊಂದಿಗರೊಡನೆ ನಿಚ್ಚಪಯಣದೊಳ್ ಪಲವುಂ ದಿನಂಬರಂ ಬಟ್ಟೆವಿಡಿಯೋರ್ದೊಂದು ತಾಣದ ಪುಣ್ಯಕ್ಷೇತ್ರಂಗಳ ದರ್ಶನಂಗೊಂಡು ಮುಂತೆ ಮುಂತೆ ಪೋ ಪೋಪುದುಂ; ಪೊಂಬಸಿಱನ ಕೆಕ್ಕೆಯೊಳೊಸರ್ದ ಪುಣ್ಯಭೂಮಿಗಿೞಿತಂದು ಮೀದಂಬೆತ್ತು ಮೋ[illegible]ನಿದ್ದು ಪಂಕಮಂ ಸಂಕಮಲುಂಚಿದ? ಸಂತರ್ಗೆ ನಿಚ್ಚಸಂತಸಪಡೆಯಂ ತೋಱು [illegible]ವರ್ಕರ್ಗಳಿಂ ಸಂಭಾವ್ಯೆಯೆನಿಪ್ಪ ಗಂಡಕಿ ಕಾಣಿಸಿಕೊಂಡಳ್.

ಈಪ್ರೆಂದು ಮಾಣ್ಕೆಯಿಂ ಪೊನಲ್ವರಿವ ಕಣ್ಣದಿರ ಪುಣ್ಯವಾಹಿನಿಯುಂ ದಿಟ್ಟಿಸುತರಸಂ ದಿನಪಯಣಂ ಮಾಣ್ದೊತ್ತಿನೊಳ್ ಬೀಡುವಿಟ್ಟು ತಾನುಂ ವಿಪ್ರನುಮಿನಿಸ್ರೆಱತ್ತಂ ಸಲ್ಲಾಪಂಗೊಂಡು ಪತ್ತಂ ಮುಂದಸೆಯ ತೆಱೆಯುಮಂ ತೋಱಿ, ಇದೇತಱ ಪೆಂಪಂ ನಿರವಿಸೆಂದು ಕೇಳಲೊಡಂ; ಭೂಸುರನಿಂತು ಬಣ್ಣಿಸಿದಂ.

ಕೇಳಯ್! ಜಗದೆ ದೊರೆವೆತ್ತ ಪಾಪದ ಕೋಟ್ಟೆಸಲ ಬೆಂಚೆಯೊಳ್ ಪಂದಿಯಂತಿರೆ ಪೊರಳ್ದು ನರಲ್ವಗ್ಗಿನ ಲೋಗರ್ಗೆ ಮೆಯ್ಗರ್ಚಲ್ಕೆಂದು ಬೊಮ್ಮಂ ಪೊಸತೆನೆ ಸಮೆದ ಗಂಡಕಿವೆಸರ ತೀರ್ಥಮೈಸೆ. ಆರಾನುಮೊರ್ವನೊಮ್ಮೆ ದಿಟ್ಟಿಸಲೊಡಂ ಪಾವನಂ, ಮುಟ್ಟಲೊಡಂ ಶುದ್ಧಂ, ಸವಿಯಲೊಡಮಮರಂ, ಮುೞುಂಗಲೊಡಂ ಮುಕ್ತನಪ್ಪನೆನೆ ಈ ತೀರ್ಥದ ಮೈಮೆಯನಾರಂ ಬಣ್ಣಿಸಲಾರ್ಪನೊ! ನದಿಯೊಳಿರ್ಪ ಕಲ್ಲೆಲ್ಲಂ ಸಾಳಗ್ರಾಮಂ ವಲಂ. ಈ ಕಲ್ಗಳೊಂದು ಕಡುಪನೇಂ ಪೊಗಳ್ವೆಂ! ಭವರೋಗದೊಳಸವಳಿದು ನವೆವ ರೋಗಿಗಿಂತೊಂದು ಕಲ್ಲಂ ಕರ್ಚಿದ ನೀರಂ ಕುಡಿಯಿಸಲೊಡನೊಡನೆಯೆ ಕುತ್ತಂ ಭೇದಂ ಬರ್ಕುರ್ಂ, ಮೇಣೆಂದುಂ ಮಱುಗೊಳಿಸದು. ಇಂತೆಸರ್ಪಟ್ಟ ಸಾಳಗ್ರಾಮದ ಮಾಹಾತ್ಮ್ಯಮಂ ಕುಱಿತೊಂದು ಕಥೆಯುಂಟು:—

ಮುನ್ನಮೊರ್ವನಱುಗುಲಿವೆಸರ ಕಬ್ಬೇಡಂ ನರಮೃಗಂಗಳಂ ತಲೆಯನೊಡೆದುಂ ಬಡಿದುಂ ಕಡಿದುಂ ಪಿಡಿದುಂ ಬೇಂಟೆಯಾಡುತೆ ತನ್ನೊಗೆತನಕ್ಕೆ ಪೆರ್ಚಿದನಂ ಬೞಿಸಂದು ರೂಪುಗೊಂಡ ಪಾಪದೊಂದು ಮೊತ್ತಮೆನೆ ಪಲಗಾಲಂಬರೆಗಂ ಜೀವಿಸಿರ್ದಂ. ಕಡೆಯೊಳೊಂದು ದಿನಂ ಕಾಲಧರ್ಮಮಂ ಕಾಣಲಿರ್ಪವಸರದೊಳ್ ತಾಂ ಗೆಯ್ದ ಕೊಲೆಯೆ ಪಲವುಂ ಮೆಯ್ವೆತ್ತು ಸಂದಣಿಸಿ ಬಂದಿದಿರ್ಚಿತೆಂಬಂತಿರೆ ಕೋಱೆವಡೆಯ ಕೊಂಕುಂಬಸೆಯ ಕಾೞ್ಗಣ್ಣ ಕೆಮ್ಮೀಸೆಯ ಜೋಲ್ವಾಯ ಪೊದರ್ದಲೆಯ ಕರ್ಮೊಗದ ತೋಱ್ದೇರನೊಂದು ಸ್ಪೃಡಪಿರ್ನ ಪರ್ವರಿಕೆಯ ರೋಸದ ಬಿರದ ಜವನ ದೂತುಗಳಿರ ಜಂಗುಳಿ ನೇಣ ಶೂಲದ ಕರಗಸದ ಇಟ್ಟಿಯ ಕವೆಗೋಲ ಇರ್ಕುಳಿಯ ದಂಡದ ಗಂಡುಗತ್ತರಿಯ ಕೊಡಲಿಯ ಕೂರ್ವಾಳ ಪರುಟ

ವಸೆಯು ನಡಗರವ ಪಟಿಪ್ರಪಿಪಿಂ ಬಂದು ಮುತ್ತಿ ಮುತ್ತಿ ಅಱುಗುಲಿ ಪಾಪಾತ್ಮನಂ ಸೆಱೆವಿಡಿದತ್ತು.

ಇಂತು ಬಂದು ಬಂದವಿಡಿದಿಱಂ ಸೋಂಕಿ ಬಿಗಿದುಂ ಪುಳ್ಳುಂಗೊಳ್ಕೆಯಿಂ ನೀಳ್ದುಮುಂಕೆನುವನಾವರ್ತಂ ಸಾಮರ್ಪಂ ಪಡೆದುದುನ್ಮಾಗರ್ ಕೂರಂಕುಸದಿಱಿತರ್ಕ್ಕಂ ನಟ್ಟೊತ್ತಿ ನಾಂಟುವ ಕಲ್ಮುಳ್ಳನೊಂದು ಜೇನೆಗಂ ನೊಂದು ಸುರುಳ್ದುರುಳ್ದು ತಾಂ ಕೆಟ್ಟೆನೆಂಗು ಗೋಳಿಟ್ಟೆಟ್ಟಿ ಬಡವ್ಯಂದು ಜೀವಿಯಂ ದಿಟ್ಟಿಸಿ ಬವರಂ ಸಚ್ಚರಿತ್ರನಪ್ಪ ಭಾಗವತಂ ಮುಟ್ಟಯಿಸಿ ಬಂದು ತನಗಾತನೊಳ್ ಮಱುಕಂ ಪುಟ್ಟಿತೊಡಂ ಕೈಗರಡಿಗೆಯು ಕಗರ್ಲ್ಲಂ ಕಟಿರ್ತೀರ್ಥಮನಾತನ ಬಱುತ ಬಾಯೊಳೆಱೆದಂ. ಇಂತೆಱೆದ ಸಾಳಗ್ರಾಮತೀರ್ಥದೊಂದು ಪೆಯ್ಯಮೆಯಿನಾ ಪ್ರಾಣಿಯುನ ಬಾಯು ತಡಿನಾಲಗೆಯೊಳ್ ಕಟ್ಟಿನೆ ಉಱೆನೆ ಶ್ರೀರಾಮಧ್ಯಾನಂ ನೆಪದಿಲ್ಲದೊಂದು ಸಂದಿಸಿಂ ನೆಗಟ್ದಿದಾಪದನೊಳ್.

ನಿಱಿವಿಡಿದುಟ್ಟ ಪೀತಾಂಬರದ, ಮಿಱುಪ ದ್ಯಾನಶಸಾನವ. ಪೊಳೆವ ಕರ್ಣಕುಂಡಲದ, ನಳನಳಿಪ ತುಳಸಿದಾಮದ ತೋಳ್ ಪ ನಾಲ್ಕುಂದೊಳ್ಳ, ಮಱುಂಬಳೆಯ ಗಜೆಯ ಪದುಮದ ಸಂಕಿನ ಕಾಱುಪಿನ ಸಿಂಗರದ ದಿವ್ಯಸುಂದರವಿಗ್ರಹರ್ ವಿಷ್ಣುದೂತರೆಯ್ತಂದು ಶ್ರೀರಾಮನಡಿಗಂ ಜಾನದೊಳಿರ್ಪ ಬೇಡನಂ ಬಱಸಂದು ಬೊಗಳಯಿಸುತಿರ್ಪ ದಮ: ಜೆಕ್ಕಸಂಬಟ್ಟು ಕಕ್ಕಸದ ಜವನಾಳ್ಗಳ್ ಪ್ರೈಷ್ಣವರಂ ಸಿವಾರಿಪ್ರಿಂದು ಬಗೆಯೊಳ್ – ಓ! ಪಿರಿದುರಿದೇತಱ ಗೆಯ್ಮೆಯೊ! ನೇರಿವಗರ್ನಿತೊಂದಱಿಯವೊ! ನೋಡೆಪ್ಪೊಡರಿದುಗಡ! ಇಸ್ಸಿ! ಪೊಲೆಯನಂ ಕಿಟ್ಟುವ ದೇವರುಂಟೆ! ನಿಮಗೀತನೊಳೇತಱ ಕಜ್ಜಂ! ನೀಂ ಬಱಿದೆ ಕೊಂಡುಯ್ದು ವೈಕುಂಠಮಂ ಪೊಲೆಗಿಡಿಸದಿರಿಂ, ತೊಲತೊಲಗಿಂ. ಇದೆ! ಈ ದೋಷವು ತನೆಮ್ಮ ಪಾಲ್ಗೆ ಸಂದಪನೈಸೆ! ಇಂತೀಗಳ್ ಪಿಡಿದುಯ್ದು ಸೂಲದೊಳ್ ಕೊತ್ತಿಂ ಪ್ರಾಣಿಟ್ದಿಂ, ಕಲ್ಗಾಲೆಯೊಳಿಕ್ಕಿ ಸುಱಿದುಂ, ಕರಗಸದನುಳ್ಳಂತ್ರದೊಳ್ ಕೊಱೆದುಂ, ನೆಲ್ಲೊರಲೊಳಿಟ್ಟವಲ್ದಿಂ, ನೆರೆದ ನೆತ್ತರ ಕೀವಿನೊಂದು ಕೊಳನೆಳವ್ರಱುಗಳ್ ತಿನಬಡಿಸುವೆವು; ಅಲ್ಲದೊಡೆ ಕಿಮುಟ್ಟಿ ಸೊಸಡುವಸೆಯುಂ ಪಿಂಡಿ ಜವನೆಮರ್, ವ್ರೋರಿಗೆಱೆತಂಗುಡುವೆವು. ಅಂತದುಕಾರಣಮೆಮಗಮೆಮ್ಮೊಡೆಯನಾಣ.

ತಿಗಂ ತಡೆನಾರದಂತುಂ ನಿಮ್ಮೊಂದು ಪೆರ್ಮೆಗಂ ನೆಗಟ್ತೆಗಂ ಪೞುವನೊಡಗೂಡಿಸದಂತುಂ ಪಿಂದೆಗೆದು ಪೋಪುದೆಂದು ಬಿನ್ನಯಿಸಿದರ್. ಅದರ್ಕಾವಿಷ್ಣುದೂತರ್ ಯಮಭಟರ ಕಾಮುಕರಂ ಕರಂ ಕರಂಗುವಿನಂ ಮೂದಲಿಸುತೆ—ಪೋಪೋಗಿರೆ ಬಡಿವಾರದ ಕೂೞಿರೆ! ಈಗಳೀತಂ ವಿಷ್ಣುಭಕ್ತನಾಗನೆ! ಸಾಳಗ್ರಾಮದೊಂದು ಕರ್ಚುನೀರಿಂ ಪರಿಶುದ್ಧನಾದೊಡಂ ಕೆಟ್ಟದಿರಿಂ. ಕಡೆವೊತ್ತಗಾನುಂ 'ರಾಮ ರಾಮ' ಎಂಬೀ ನಾಲಗೆ ಪ್ರಟ್ಟ್ಯವ ನಾಲಗೆಯ ಮಾನಸಂ ಪಾವನನಾಗದೇಂ ಪೋಕುಂ! ಶ್ರೀಹರಿಗೆ ಕರ್ಗಲ್ಲ ಕಾಲ್ಮಣೆಯೆನಿಪ್ಪ ಸಾಳಗ್ರಾಮದ ಮಹಾತ್ಮ್ಯೆಯೇಂ ಕಿಱಿದೆ! ನೀಮಱಿಯಿರೆಂದು, ತಾಂ ಬಲ್ಲಂತು ಬಣ್ಣಿಸಿ ತೋಱಿ ಯಮನ ದೂತರನೆಟ್ಟಟ್ಟಿದರ್.

ಆ ವೇಳೆಯೊಳ್ ದೇವಾಂಗನೆ ತಾಂ ನಿಚ್ಚಮೆಱೆವ ಪೊಯ್ನೀರಿಂ ಪೂತ ಮಂದಾರದ ಬಿರಿಮುಗುಳ ಮಾಲೆಯಿಂ ಚೆಲ್ವಾಗೆ ಸಗ್ಗದ ಜೇಲವಣಿ ಸತ್ತಿಗೆಯಿಂ ಸಿಂಗರಂಬೆತ್ತ ಸಿವಿಗೆಯೊಂದು ನೆಲಕ್ಕಿೞಿತರ್ಪುದುಂ; ವಿಷ್ಣುದೂತರಾವಿಷ್ಣುಭಕ್ತನನದಱೊಳೇಱಿಸಿ ತಾಮುಮಡರ್ದು ಪೋದರ್ ಗಡ! ಅಂತದುಕಾರಣಂ ಬೆರೆವಾರದ ದೊರೆವಡೆದೊಂದು ಮೈಮೆಯೇಂ ಗಂಡಕಿವೆಸರ ಪೊನಲ್ಗಂ ಕಲ್ಗಂ ಸಲ್ಗುಂ. ನೀನೀನೀರೊಳ್ ಮಿಂದುಂ ಶಿಲೆಯುಂ ಪೂಜಿಸಿಯುಂ ಕೃತಕೃತ್ಯನಾಗೆಂದಱಿಪಿದಂ.

ಪಗೆಗಾಱರ ಮೊನೆಗಾಱರ ಬೀರ! ಬೞಿಕ್ಕಂ ರತ್ನಗ್ರೀವಂ ವಿಪ್ರನೊಂದು ಸೊಲ್ಲಿಂಗೊಡಂಬಟ್ಟು ಸಪರಿವಾರಂ ತೀರ್ಥದೊಳ್ ಮುೞುಂಗಿ ಸಾಳಗ್ರಾಮಪೂಜೆಯನೊಡರ್ಚಿ ತಾನೊಂದು ಕ್ಷೇತ್ರಸಂಖ್ಯೆಯ ಕಲ್ಗಳಂ ಕೊಂಡು ಮುಂ ತೆರಳ್ದಂ.

ಇಂತು ಸತ್ಯದ ನೆಲೆಯುಂ ನಿತ್ಯದ ಬೀಡಂ ನನ್ನಿಯ ಕಡಲಂ ಪುಣ್ಯದೊಡಲಂ ಭಕ್ತಿಯ ಗುಂಪಂ ಮುಕ್ತಿಯ ಪೆಂಪಂ ಆಱನೊಗೆವ ಗೊತ್ತಂ ಪರಸುಖದೊತ್ತಂ ಕಱಿದು ಮುಂತೆ ಮುಂತೆ ದಿನಮಯಣಂಜೊಗುತಿರ್ಪನಮಾಪಥದೊಳ್—

ಮತ್ತಮೊದಲ ಗೆಡೆಯ ಗೆಣೆಯ ಪೊಸಕೂಟದ ಕೂರ್ಪರ ಮಿಂಟದ

ಸಂತ್ರಸಮುಕಿರ್ನ ಪೆರ್ಚುರ್ಗೆಯೊಂದು ಲೀಲೆಯ ಮಾಣ್ಕೆಯಿನಡಿಗಡಿಗೆ ತಂ ತಮಗೆ ಪೆರ್ಚಿಪ್ಪಡನಾಟದ ತೆರೆಗೈಯ ತೞ್ಕೆಯಿಂ, ಬೋರ್ಗರೆವ ಸಬುದದ ಪೊನ್ನಣಿಯ ಬಣ್ಣನೆನುಡಿಯಿಂ, ಕರೆಗಣ್ಮುವ ಸಾಲ್ಸರಿವ ಬೆಳ್ನೊರೆಯ ಬೆಳ್ನಗೆಯಿಂ. ಕಣ್ಗೆಡ್ಡಮಾದ ಗಂಗಾಸಾಗರಸಂಗಮಂ ಪುಂಗಪೆಯೊಳಸೆ ದತ್ತು. ಪುತ್ತಮದು ಗುಱುಗುಱುಸುತ್ತೀಱ್ವ ಬೀಱ್ವ ಮಱುಮೀಂಗಳತೆ ದಾಟದಿಂ, ತಂ ತಮಗೆ ನೆಗೆನೆಗೆಗುರುಳ್ವ ಮೀಂಗಳೊಂದು ಸೋಂಪಿನ ಪೊಂಬೆನೆಯಾಟದೊಳ್ ಎಡೆಗೆಡೆಗೆ ಪಾಱುವ ಕಡಲ್ವಕ್ಕಿಗಳ ಸುೞಿಯಿಂ, ಮುತ್ತಿ ಮುಂಡಳಿಸಿದ ನೀರ್ವಕ್ಕಿಗಳತ್ತಣೊಂದು ಭಯದಿಂ ನೀರೊಳ್ ಮೈ ಗರೆವ ಬಾಳೆಮೀಂಗಳಂ, ಒಳಗೊಳಗಡಂಗಿ ಪರಿದಾಡುವ ಬಾಳೆಗಳಂ ಪೆಂಪೆಂಪತ್ತಿ ಸುೞಿಸುೞಿದು ತಳಮಳಂಗೆಯ್ವ ತಿಮಿತಿಮಿಂಗಿಳಗಳ ಪಱಿವ ಱಿದಿಂ, ಕರವೊಪ್ಪಿರ್ದುದು.

ಇಂತು ರನ್ನ ಬಂಡಾರಿಯೆನೆ ಆಯ್ದೊಱಲ್ಬು ಬೆರೆದು ಬೆಱದಿರ್ದ ನೀರವೆಣ್ಣ ಕಡುಜಾಣ್ಮೆಗೆ ಸೋಜಿಗಂಗೊಂಡು ತಲೆದೂಗಿ ಮೇಣ ತಾಂ ಪೋಗಲಿರ್ದ ಕ್ಷೇತ್ರದೊಂದು ನೆನಪಿಂ ವಿಪ್ರನೊಳ್– ಆಚಾರ್ಯರ್! ಎನಿ ದೂರದೊಳಿರ್ಕುಮಾಸಂದ ನೀಲಾಚಲಂ. ಎಂದಿಗೆ ಕಾಣ್ಬಂ. ತಿಂಗಳೊಂ ದಾದುದಲೇ! ಎಂದು ಬೆಸಗೊಳೊಡಂ; ಭೂಸುರಂ– ಏಂ ತೋಱುವೆ! ಅಲರ್ಕ್ಕಿಯ ಮುಗಿಲ ಕಮರ್ಣೆಯ ಮಾಕಾಳಿಯ ಬಡಲ ಕಪಿರ್ನಚಲಂ ಅಂದಿ ಯೆಡೆಯೊಳ್ ನಾಲ್ಗೆಯ ಬೇಡರಂ ಕಂಡೆನೀ ಬಟ್ಟೆಯೊಳ್ ಪೋದೆ ನೀಂದಸೆಯೊಳ್ ಬೆಟ್ಟಮನೇಱುವೆಂ, ಇದೆ ಬೆಟ್ಟಂ ದಿಟ್ಟಸೆಂದು, ಸುಟ್ಟಿ ತೋಱಿದಂ. ಆಗಳರಸಂ ಕಣ್ಣೆತ್ತಿ ನಾಲ್ಕುಂ ದೆಸೆಯುಂ ಸುತ್ತಿ ಕಂಡುಂ ಕಾಣಿಸದಿರೆ ದುಗುಡದಿಂ ಬೆಮೆಗೊಂಡು,—ಪೂರ್ವಂ ಪೇೞ್ದ ಬೆಟ್ಟಮಂ ಕಂ ದಿರೆ! ಎಂದು ತನ್ನ ಪರಿಜನರಂ ಕೇಳ್ವುದುಂ; ಕಂಡೆವಿಲ್ಲೆಂದು ಪೂಸುರ್ ಡಿದರ್. ಆ ನುಡಿಗೆ ರತ್ನಗ್ರೀವಂ ಕಟ್ಟಚ್ಚರಿವೆತ್ತು—ಏನಯ್ಯಾ! ನೀನೊ ರ್ವನೆ ಕಂಡಯ್! ಆಮಿನಿಬರುಂ ನೋಡಲಾಱದ ಪಾಪಿಗಳೆ? ಇದಱಿ ಯೇಂ? ಪೇಳೆಂದು ಕೇಳೊಡಂ; ತನ್ನ ಜಾನದ ಜಾಣ್ಮೆ ನೆರವಾಂತಱಿವಿಂ ವಿಪ್ರಂ– ಅಪ್ಪುದಪ್ಪುದು ಈಗಳಱಿತೆಂ. ತೊಪ್ಪಿರ್ದ ಸಂಗಮದೊಳ್ ಮೊ ದಲೊಮ್ಮೆ ಮೀಯದಿರ್ದ ಜಾತ್ರೆಗರ್ಗೆ ಬೆಟ್ಟಂ ದಿಟ್ಟಿಗೆ ಬಾರದೈಸೆ! ನೀ

ಮದುಕಾರಣಂ ಗಂಗಾಸರಿತ್ಸಾಗರಸಂಗಮತೀರ್ಥದೊಳ್ ಮಿಂದು ಬರ್ಪುದೆಂದು ತಿಳಿಪಿದಂ.

ಕೇಳ್! ಆ ನುಡಿಯಂ ಕೇಳ್ದೞ್ದು ಸರ್ವರುಂ ತೀರ್ಥಸ್ನಾನಂಗೆಯ್ದು ದಾನದಕ್ಷಿಣೆಗಳಿಂ ವಿಪ್ರಕುಲಮಂ ಸ್ವೈತುಗೊಳಿಸಿ ತವಕದಿಂ ಮುಂದೆಸೆಯಂ ನೋೞ್ಪುದುಂ; ಪುಣ್ಯದ ರಾಶಿಯಂತೆ ಬಗ್ಗಿನ ನೆಲೆಯಂತೆ ಪೆರ್ಮೆವೆತ್ತು ಚೆಲ್ವಾದ ಪರ್ವತಂ ತೋಱಿದುದು. ಆಗಳಾಗಳೆ ಪೆಳವಂ ನಡೆಗೊಂಡಂತುಂ, ಕುರುಡಂ ಕಣ್ಬಡೆದಂತುಂ, ಷಂಡಂ ಪುರುಷನಾದಂತುಂ ಪೆರ್ಚಿದೊಂದು ಸಂತಸದಿಂ ಬೈಗಿನೊಳ್ ಕೆಲೆದುಂ ಪುಲ್ಕ್ಕಿಱಿಕ್ಕೆಯುಂ ನೆಗೆದಾಡಿಯುಂ ಚೆವಱಿ ಪೋಪಾಕಳ ಮುಂದೆಯ ಮಾಳ್ಕೆಯಿಂ ನಡೆದು ಬಂದ ಜಾತ್ರೆಯ ಪಯಣಿಗರ್ ಶ್ರೀರಘುವರನಂ ಪಾಡುತುಂ ನೋಡುತುಮೋಡುತುಂ ದೊರೆವಡೆದ ಕರ್ವೆಟ್ಟಮನೇಱಿ ಪೊಕ್ಕರ್.

ಕೇಳೆಲೆ ಚಿಕ್ಕರಸ! ಇಂತು ನೀಲಾಚಲಶಿಖರಮನಾರೋಹಣಂಗೆಯ್ದು ಶ್ರೀಪುರುಷೋತ್ತಮಮೂರ್ತಿಯಂ ಕಂಡುಂ, ಪ್ರಸಾದಮಂ ಕೊಂಡುಂ, ಸಿಕ್ಥಕಮನುಂಡುಂ ಕೆಲಕೆಲರ್ ವಿಷ್ಣುಸಾರೂಪ್ಯಮಂ ಪೊಂದಿದರ್; ಕೆಲಕೆಲರ್ ಪೊಂದಿ ವಿಷ್ಣುಲೋಕಕ್ಕೆಯ್ದಿದರ್; ಕೆಲಕೆಲರ್ ಪುರುಷೋತ್ತಮನ ಸೇವೆಯೊಳೆ ನಿಂದರ್; ಕೆಲರ್ ಬಂದರ್. ರತ್ನಗ್ರೀವಂ ನಿಜಸತಿಸುತ ಮಂತ್ರಿಪುರೋಹಿತರ್ ಸಹಿತಂ ದೇಹಂಬೆರಸು ಸಾಯುಜ್ಯಪದವಿಗೇಱಿದಂ. ಕಣಾ! ಇಂತೆ ನೇರ್ಪಟ್ಟ ಪೆರ್ಮೆ ಈ ಬೆಟ್ಟೊಡೆಯಂಗೆ ಸಲ್ಗುಮೆಂದು ನೀಲಗಿರಿಮಾಹಾತ್ಮ್ಯಮಂ ಮಂತ್ರಿಪಂ ಕಥಿಸಿದಂ.

ರಮಣೀಮಣಿ! ರಾಘವಾವರಜಂ ಇನಿತೊಂದು ಪೆರ್ಮೆಯ ಕ್ಷೇತ್ರಕೊಂದು ಪೆರ್ಮೆ ದಿಮ್ಮಿತೆಂದು ಕೌತುಕಂಗೊಂಡು ದರ್ಶನಸ್ತುತಿಗೆಯ್ದು ತುರಂಗದ ಬೆಂಬಲದ ಸೇನೆಯ ಕಾಪಿನೊಳ್ ಪೋಗುತುಮಿರ್ದಂ.

ಎಂಬಲ್ಲಿಗೆ

ಶ್ರೀರಾಮಾಶ್ವಮೇಧದೊಳ್ ನೀಲಾಚಲದರ್ಶನಮೆಂಬ ದಶಮಾಶ್ವಾಸಂ

ಸಂಪೂರ್ಣಂ.



## ಏಕಾದಶಾಶ್ವಾಸಂ.

ಎನ್ನ ಸಿಂಗರದ ಸಿರಿಯೆ! ಆ ಅಂದಿನ ರಗಳೆಯ ಬಣ್ಣನೆಯ ದಿನಂಗಳ್ ಬಿಂಜಿಸುವು. ಆಗಳುಂ ತನ್ನೊಡಲುರಿಯೊಂದು ಬೇವಿನಱುಕೆಯಿಂದೆದೆವಿಡಿದ ಪ್ರಯ್ಯಾಲ್ಜುವ ಕಡಲೀಂಗಳ್ ಬೇಸಱುನೆನಸುಂ ಸೈರಣೆಗೊಂಡುವು. ಪ್ರಸವೆಸಲಾದ ಪೆಣ್ಗಳ ಜವ್ವನದ ಬಿಗುಪಿರ್ಱುದು ತಿಳಿಸಂತೆ ನೊಱೆವೆಂತಿಗುಱ್ಕಿಱ್ನುಬ್ಬರಮುಡಂಗಿ ತಿಳಿದುವು. ತಾನುಮುಣ್ಣದ ಪೆಱವಗಱ್ವಿಡಿಯುವ ನೆಲಕಲಿನ ಮಱೆಯ ಮುಚ್ಚಿನ ಭಂಡಾರದೊಳಗಣೊಂದು ಪಾಸ್ಗೀಡಿಂ ಪ್ರರುಳ್ ಕುಂದುವಂತಿರೆ ಕೊಳಂಗಳ ಜಳಂ ಮೆಲ್ಲಮೆಲ್ಲನೊಳಗೊಳಗಿಂಗುವು. ಜ್ಯೈಗಿನ ಮುತ್ತ ಪ್ರೂತ್ತಿನ ಚೆಂಬಿಸಿಲ ಪರ್ಬುಗೆಯ ಬೆಳಗಿನೊಂದಿರವಿಂ ತಾವರೆಯೆರ್ದುವು. ಸಾವಗೆಱ್ ನೋವದವರ ಜಾಳಗೆವ್ರೆನ್ನಂ ಕವಪ್ರೊಱ್ದು ಬಗೆಯೊಳಾರಯ್ವ ನೆಂಟರ್ಗೆ ದೊರೆವಂದ ಬಂಡುಣಿಗಳ್ ನೀರ್ವರ್ಗಗಳಂ ಸೇವಿಸುತಿರ್ದುವು. ನೀರುಣದೆ ಮುಗಿಲ್ಗಳ್ ಬೆಳತುಱ್ ಬೆಂಡಾದುವು. ಪೆಱಿಸೀಸರ್ಕಳ ಕೈಗಳ್ ನಿಡಿದಾದುವು. ಬಾಂಬೊಲಂ ಬಿತ್ತಿರಚುಗೆಲೆಯಿಂ ಸೊಗಯಿಸಿದತ್ತು. ಭೂರಮೆ ಕಱಂಗಿ ಬೆಳದಾರವೆಸೆಂಬ ಕಾಂಗಿನ ಸೀರೆಯನುಟ್ಟು ನಱುನಗುಸುವ ಕೆಯ್ದೊವಲವೆಂಬ ಮಿಸುನಿಗಟ್ಟಿನ ಪ್ರಂಗುಪ್ಪಸಮಂ ತೊಟ್ಟು ಕಣ್ಗೆಡ್ಡವಾದಳ್.

ಇಂತು ಮುಂಚೆ ಬಂದ ಶರತ್ಕಾಲದೊಳ್ ರಾಘವನ ಜನ್ನದ ಬಣ್ಣಗುಮುರೆ ತಿಂಕಳ್ಗೆ ಮೊಗಮಿಕ್ಕಿ ನಗೆಯುತುಮಿರ್ದುದುಮಿತ್ತಲಾವೇಳೆಯೊಳ್ ಚಕ್ರಾಂಕಪುರದ ರಾಯಗುರಂ ಪ್ರಜೆಗಳೊಂದು ದಾಱಿಂಗೆ ತನ್ನೊಂದು ಬಿನದಕ್ಕೆ ಮೊೞಲ್ತನದ ಸಡಗರದಿಂ ಬೇಂಟೆಗೆಂದು ಪೆಱವಂ ಪ್ರಗುತಂದಂ. ಆಗಳ್ ದಿಕ್ಕರಿಗಳ್ಗೆ ಗಿರಿಗಳ್ಗೆ ದೊರೆವಡೆದ ಕರ್ವೇಡರ್ ಎಕ್ಕಡವಾವುಗೆಯ ತೊವಲುಡೆಯ ತುಪ್ಪುಳಂಗಿಯ ಸೊಪ್ಪಿನ ಟೊಪ್ಪಿಗೆಯ ಸಿಂಗರದಿಂ ಕವಣೆಯ ಮಿಂಟೆಯ ಪೆಟಿಯ ಅಂಟುನಲೆಯ ತಡಿಕೆವಲೆಯ ಬೀಸುಂಬಲೆಯ ಪಾಸುಂಬಲೆಯ ಕಣ್ಣಿವಲೆಯ ಬೆಳ್ಳೈರಬಲೆಯ ಗುದಿಯ ಸಬಳದ ಕಸಲ್ಗೋಲ ಅಡಿಕಿಲ್ಗಡೆಯ ನೇಣ ಕಡಿಗತ್ತಿಯ ಬಿಲ್ಲಂಬುಗಳ ಬಲ್ಪೊಱೆವ್ರೆತ್ತು ಪೀಲಿಯಮುಡೆಯ ಜಂತವೋಲೆಯ ಪುಲಿಯುಗುರ ಬಾ

ಪ್ರತಿಯ ಗುಂಜೆವೊಕ್ಕಸರದ ಎಳ್ವಿನ ಬಳೆಯ ಸಾದಿನ ಬೊಟ್ಟಿನ ತಮ್ಮ ಪು ಳಿಂದಿಯುಮೇರಸು ಜಾಮಿಲಂಗಳಂ ಕೂಡಿ ನಡೆತಂದು ನೆರೆದರ್. ಅಂತು ಬಂದಬೇಡರ್ ಕಾಡಂ ಮುತ್ತಿಯುಂ, ಮಿಗದಿಕ್ಕೆಯಂ ಪೊಂಚಿಯುಂ, ಕೊ ೞಕುವ ಸಬುದಮುಸಾರಯ್ದುಂ, ಕರ್ಪನಗುಟ್ಟಿಂ, ಬಲೆಗಳನೊಡ್ಡಿಯುಂ, ಕುತ್ತುಱಂ ಸೋವಿಯುಮಿತಿಕುಱೊಳ್ ನುಸುಳ್ದುಂ, ಸರುವ್ರೊಳ್ ಹುದುಗಿ ಯುಂ, ನೀರ್ದಾಣದೊಳ್ ಕತ್ತರಿಗೆಂಡಿಯನೆತ್ತಿಯುಂ, ಮರನನಡರ್ದು ಮಬ್ಬರದೆ ಬೊಬ್ಬಿಱಿದಱುಚಿ ಬೇಂಟೆಯಾಡುತಿರೆ; ನಟ್ಟ ಕೊಡಂಕೆಯ ಮೊಲನ, ಅಳ್ಕಿಯೊತ್ತುವ ಮರೆಯ, ಡಗೆವ್ರಿಯ್ದಿರಲೆಯ, ಪೆಕ್ಕೆಗೆಟ್ಟ ನ ರಿಯ, ಪೆದಱುವ ಕಡವೆಯ, ಕೆರಳ್ದಿಕ್ಕಲನ, ಕೊಕ್ಕರಿಸಿದ ಕಕ್ಕಡವಂದಿ ಯ, ಕನ್ಲೊಳಸಿನ ಕರಡಿಯ, ಮುಕ್ಕುಱಿಕ್ಕುವ ಕಾಟ್ಕೋಣನ, ಕೋಡಿ ಡುಮಾನೆಯ, ಗರ್ಜಿಸುವ ಸಿಂಗದ, ಮೊರೆವ ಬಲ್ವುಲಿಯ ಗಜಬಜದ ಸಂ ಚಾರಂಬೆತ್ತಿರಿದಾಯ್ತು.

ಆಗಳ್— ಇದೆ ಕಿಱುಬನನಿಸು! ಇದೆ ಕಾಟ್ಕುಱಿಯನಿಡು! ಇದೆ ಬಗ್ಗನನಿಕ್ಕು! ಮೋಣಿದೆ ಚಿತ್ರಗನಂ ತುಡು! ಇದೆ ಕಲ್ಲಾನೆಯುಂ ಕು ತ್ತು! ಇದೆ ಪೆರ್ಬುಲಿಯುಂ ಕುತ್ತು! ಎಂದೆಬ್ಬಿಱಿಸುತುಂ ಮುಟ್ಟಿವರು ತುಂ, ಮೋಹೊರ್ಮೆ ಸೊಪ್ಪಳಾಗದಂತು ಸನ್ನೆವೇಂಟೆಗೆಯ್ದುತುಮುಳವಿ ಗೆಟ್ಟ ಕಾಟ್ಮಿಗಂಗಳಂ ಸಂಹರಿಸಿದರ್. ನೊರೆಯಿಡಿದರೆಗರ್ಚಿದ ಪುಲ್ಲ ಪ್ರಲ್ಲೆ, ಮುಱುಗೋಣ ಮಱಿಯ ಮರೆ, ಕಟ್ಟಿದ ಮೊಗದ ಪೊಡೆಯೊ ಡೆಮುಡು, ಪುತ್ತಂ ಕೋಡುವಿದಾನೆ, ನಟ್ಟಾಲಿಯ ಮೊಲಂ, ತಲೆ ಕಡಿ ವ್ರೋದ ಪೆರ್ಬುಲಿ, ಪಲ್ಲುಡಿದ ಪಂದಿ, ಕರುಳೊಕ್ಕ ಕತ್ತೆ ಬೇಡರ ಬಗೆಗೆ ಬಂದುಂ ಬಾರದಾಯ್ತು.

ಇಂತು ಪನದೊಳ್ ಮೃಗಕುಲಂ ನಿರ್ನಾಮಮಪ್ಪಾಗಲೊಡಂ, ಸಂತಸ ಪಡೆ ಪೊಡೆ ಸನಿಯಡಗಂ ಬಸೆಯುಂ ನೆತ್ತರಂ ತೊವಲಂ ಕೋಡಂ ಜಂತ ಮಂ ಪುತ್ತಂ ಚಪ್ಪರಿಯುಂ ಪೊತ್ತು ನಗರಿಗೆ ಮರಳ್ದುವರ್ಪ ನಡುವಟ್ಟೆ ಯೊಳ್ ಚಂಚರಿಸುವ ಮಿಂಚಿನಂತಿರೆ ಮುಂಚಿನರ್ದ ಮಿಂಚುವ ಪಂಚವ ರ್ಣದ ಕುದುರೆಯುಂ ಕಂಡು— ಎಲೆ ಅಣ್ಣ! ಎಲೆ ತಮ್ಮ! ಏ ಪ್ರಾರ ನಿಗ ಳದೊಂದು ಬಣ್ಣಗುದುರೆ! ಎಮ್ಮ ಜಾಮಿಲಂಗೆ ದೊರೆವಕುರ್ದಂ! ಕೊಂಕ

ದ ಬಾಲಂ, ನಿಮಿರ್ದ ಕೊಡಂಕೆ, ಡಗೆವೊಯ್ಯ್ವೊಳ್ಳೆ, ಗುಜ್ಜುಗಾಲ್, ನಿ
ಟ್ಟೊಡಲ್, ಕಟ್ಟಾಯದ ಮೆಯ್ಸಿರಿ. ಆಃ! ಕೀಲಿಂ ಪಲ್ಲಣಮುಮೇನಾ
ಯ್ತು. ಓ! ಸೊರ್ಕಿದ ದುಱುದುಂಬಿಗುದುರೆ! ಇಂತುಂ ಸಿಂಗರಮೇಂ
ನೋೞ್ಪಿಂ ನೋೞ್ಪಿವೆಂದು, ಮುಟ್ಟೆವಂದು ಪಿಡಿದು ತೆಮ್ಮೊಡೆಯಂಗೆ ವಾ
ಹನಮಕ್ಕುಮೆಂದು ದಮನಂಗುಯ್ದೊಪ್ಪಿಸಿದರ್.

ಆಗಳ್ ತನಗೆ ದೊರೆವಡೆದೊಂದು ಜವ್ವನದ ಪೊಸಕುದುರೆಯುಂ ನಿ
ಟ್ಟಿಸಿಯಲ್ಕೞಿಂ ಪೊಂಪುೞಿವೋಗಿ, ಬಾಳದ ಬಿರುದಿನ ಪಾಡಿನೊಕ್ಕಣೆಯ
ಓಲೆಯಂ ಕೈದೊಳ್ ಕೊಂಡಿಂತು ವಾಚಿಸಿದಂ:— "ಕಡಲೆ ಕಡೆಯಾದೀ
ಪೊಡವಿಯುಂ ತನ್ನೊಂದು ಬೆಳ್ಗೊಡೆಯ ನೆೞಲೊಳಿರಿಸಿ ಮಾರ್ಮಲೆವ
ಪಗೆರಾಯರ ಬಿಂಕಮನುದಿರ್ಚಿ ತಿರ್ದಿ ಸಮಕಟ್ಟಿ ಬಿರುದರ ಗಂಡಂ ಕೈದು
ವೊತ್ತರ ದೇವಂ ಶ್ರೀರಾಮಚಂದ್ರಮಂ ಅಯೋಧ್ಯೆಯೊಳರಸುಗೆಯ್ಯುತ್ತು
ಮಿರ್ದಪಂ. ತನಗೆ ಕೂರಿರತ್ತಣಿಂ ಬಲ್ವೊಱೆಯಾಗೆ ಬಣ್ಣವಿೞಿದು
ಸೊಬಗೞಿದು ಸುೞುಂಟಿ ಮುೞುಂಟಿ ಮೆಯ್ಯುಗೆಂದಿದೀಭೂರಮೆಯುಂ ಪೊ
ರೆವೊಂದು ದೂಸಱಿಂ ರಾವಣಾಪ್ಪರಂ ಕೊಂದೊಂದು ಕೊಲೆಯ ಶಾಂತಿ
ಗೆಂದು ಕುಂವರ ಜನ್ನಮಂ ಕೈಕೊಂಡು ದೀಕ್ಷೆಯೊಳಿರ್ದಂ. ಇಂತಿ
ದಾತನಯೆ ಜನ್ನಗುದುರೆ; ತನ್ನಣುಗದಮ್ಮನ ಶತ್ರುಘ್ನನ ಮೊನೆಗಾಱನ
ಬೀರಸಿರಿಯ ಗಂಡನ ಕಾಪ್ಪಂಟು. ಅಂತದೞಿನಾರಾನುಮೆತ್ತಾನುಂ ಮಿ
ಡುಕುಳ್ಳ ಪೆಂಪಿನ ಕೊರ್ವಿನ ಜವ್ವನದ ಗಂಡುಗಲಿತನದ ರಾಯರಿರೆ ಹ
ಯಮಂ ಕಟ್ಟಿಕಾದುವುದು. ಕೆಯ್ಯುದ್ದಿಯುದ್ದ ಸೋಲ್ತರ್ ಶತ್ರುಘನಂ
ಕಂಡು ಮಱೆವೊಕ್ಕು ಕಪ್ಪಮನಿತ್ತು ಸಂತಂ ಬೞಿಸಂದು ಬಾೞ್ವುದು.
ಶ್ರೀರಾಮನಾಣೆ!"

ಕಾಮುಕಲ್ಪವಲ್ಲರೀ! ಇಂತು ದಮನಂ ಪರಿವಿಡಿಯಿಂ ನೋಲೆಯನೋ
ದಿದನಪ್ಪುದುಂ; ಕೈಪಿಡುನುಂಡಂತುಂ, ಕಲ್ಗಡವಿದಂತುಂ, ಪುಳ್ ಬೆಟ್ಟ
ದಂತುಂ, ತೇಳ್ ಇಱಿದಂತುಂ, ಕಲಂಕುವಗೆಯೊಳ್, ಏಱುಗೊಂಡೆಕ್ಕಲನ
ದಾಂಟುಗೊಟ್ಟ ಪಾವಿನ ಪೊಸವಗೆಯೊಂದು ಮುಸಕದಿಂ ಕಿಡಿಕಿಡಿವೋಗಿ
ಕುಡಿವರಿದ ಮೀಸೆಯುಂ ತಿರ್ದುತ್ತೆ— ಆಃ! ಶ್ರೀರಾಮಂ ಗಡ! ಬಂದೆ ಬೆ
ಳ್ಗೊಡೆಯೊಳಾಳ್ವ ರಾಯಂ ಗಡ! ರಾವಣಾಪ್ಪರಂ ಕೊಂದಂ ಗಡ! ಶಾಂ

ತಿ ಗಡ! ಜನ್ನಗುದುರೆ ಗಡ! ಬೇಳ್ವಂ ಗಡ! ತಮ್ಮಂ ಶತ್ರುಘ್ನಂ ಗಡ! ಕಾಪು ಗಡ! ಮಿಡುಕುಳ್ಳ ಬೀರರ್ ಕಾವಲಕ್ಕಂ ಗಡ! ಕಾಣ್ಕೆ ಗಡ! ಪೂಣ್ಕೆ ಗಡ! ತನ್ನಾಣೆ ಗಡ! ಜಗಕೆ ರಾಮನೊರ್ವನೆ ಚಲದಂಕಂ; ಶತ್ರುಘನೊರ್ವನೆ ಬೀರಂ; ಮಿಕ್ಕ ರಾಯಗುವರರ್ ಪಂದೆಗಳೇನಾಗರೆ! ಏತಱೊಂದು ಪೊೞ್ಚಱದ ಮಾತಿನೊಂದು ನಿಱಿಗೆಯೊ! ಲೋಗರೊಳ್ ಬಲ್ಲರ್ ತನಮ್ಮಾಳ್ತನದ ಪೆರ್ಗಳಿಕೆಯುಂ ಗಳಪುವರೆ? ಲೋಗರ ಕಣ್ಣಂಜಲ್ತಾಗುವಂತು ಬೆರ್ಚನಿಟ್ಟು ಪಕ್ಕಿಗಳಂ ಬೆದರ್ಚಲೊಡರ್ಚಿದ ತೋಂಟಿಗನೊಂದಾಯತಿಯುಂ ಕಂಡನಕ್ಕುಂ ರಾಮಂ. ಅಕ್ಕೆ, ತಪ್ಪೇಂ. ಇಂತೊಂದು ಪೂಣ್ಕೆ ಎಮ್ಮನ್ನರ್ಗೆ ದಳ್ಳಿಸುವ ಬಲ್ಗಿಚ್ಚಿನೊಳೆಱೆದ ಪೊಸ ನೆಯ್ಗೆ ಪಾಸಟಿವಾರದೇಂ ಪೋಕುಂ. ಅದುಕಾರಣಂ ತಾಂ ತನಗೆ ದೊರೆಕೊಂಡ ಕುದುರೆಯುಂ ಕಟ್ಟಿ ಕೈವಿಡಿದ ನಲ್ಲಳ್ಗೆ ಸಂತಸವಕ್ಕಸಂಗಳ ನವಿರ್ ಮೂಡುವಂತುಂ, ಪೆತ್ತೋವಿದಬ್ಬೆಗೆ ಪೆತ್ತೊಡಲ ಎತ್ತಿದ ತೋಳ್ಗಳ ಕಟ್ಟಬ್ಬಸದಾಯಸಂ ಸ್ಮರಣೆಗೆ ಬಾರದಂತುಂ, ಅಂದಂದಿಂಗಂ ಬಳೆಯಿಸಿ ನಡೆನುಡಿವೇೞ್ದು ಪೊರೆದಯ್ಯನ ಕೂರ್ಮೆ ಪೆರ್ಮೆವಡೆವಂತುಂ, ಬೀರದ ಗಂಡುಗಲಿಗಳಪ್ಪ ಗೆಣೆಯ ರಾಯಗುವರರ್ ತಲೆದೂಗುವಂತುಂ, ನೇಹದ ನಂಟರೊಳನಂಟು ಗಂಟುಗೊಳ್ವಂತುಂ, ಬಿಡುಗಣ್ಣರ್ಗೆ ಕಣ್ಣಹಬ್ಬಮಪ್ಪಂತುಮೆತ್ತಿವಂದ ಪಗೆಯುಂ ಬಾರಿಸುವೆಂ. ಮೇಣೆನ್ನ ಗಂಡುಗಲಿತನದ ಚಲಮುಂ ತೋಱಿಸುವೆಂ, ಎಂದು ತಱಿಸಂದು ಶ್ರೀರಾಘವನ ಕುದುರೆಯುಂ ಬಂದಿವಿಡಿದು ಬೇಡನಡೆಯ ಕಾಪಿನೊಳ್ ತನ್ನ ಪೊೞಲ್ಗಟ್ಟಿದಂ.

ನಸೆಗಾತಿ! ಇಂತು ದಮನಂ ಹಯಮುಂ ಸೆಱೆವಿಡಿದು ನಿಜಪುರಕೆ ಕಳಿಪಲೊಡಮಿತ್ತಲ್ ಹಯದ ಬೆಂಬಲದ ಕಾಪಿನಾಳ್ಗಳ್ ತತ್ತಱದಿನೊತ್ತರಿಸಿ ಪತ್ತೆಸಾರ್ದು ರಾಯಗುವರರನಂ ಸುತ್ತಂ ಮುತ್ತಿ, ಮೈಗಲಿಯುಂ—ಎಲೆಲೆ ಪಗಲ್ಗಳ್ಳ! ಏತಱೊಂದು ಗೆಯ್ತಂ. ತಾಂ ತಾಂ ಬಟ್ಟೆವಿಡಿದೈದಿ ಪೋಪ ಕುದುರೆಯನಿಂ ನೀಂ ಕಟ್ಟಿಕೊಂಡುಯ್ವ ಬಲ್ಪೇನದೊ! ಆರೊಂದು ಹಯವೆಂಬುದನಾರ್ಪೈದು ಪೋಗಬೆ ಪತ್ತುಗೊಳ್ವ ನೀಂ ಕಾಲುರಿಚನಕ್ಕುಂ, ಸಾಜಂ. ನಿಲ್ ನಿಲ್! ಮಾಣ್ ಮಾಣ್! ಶ್ರೀರಾಮನ ಜನ್ನದೊಂದು ಸಿಂಗರದ ಕುದುರೆ ಕಣಾ! ದೇವರ್ ಮುನಿವೆತೆಯೊಳ್ ಕಳ್ವ

ಕೊಳ್ವ ನಿನ್ನೀಬಲ್ಮೆ ಪೊಳ್ಳಕ್ಕುಂ. ನಿನ್ನ ತನು ಪರ್ದಿಂಗೆ ಬಿರ್ದಕ್ಕುಂ. ಮೇಣ್ ನಿನ ತನುವಿನುಸಿರ್ ಜವಪುರದ ಪ್ರಜೆಗಳ್ಗೆ ಸುಯ್ಲ್ಗುಡುವ ಜೀವದ ಗಾಳಿಯಕ್ಕುಂ. ಮೇಣೀ ನಿನ್ನ ಪಾಪೊಡಲ ನೆತ್ತರ್ ಪಿಶಿತಾಶಿಪಡೆಗೆ ಪಗಲ ಬೋನದೊಂದು ಕಟ್ಟಕ್ಕುಂ. ನಿನ್ನಟ್ಟೆಯಿಲ್ವು ಕುಟ್ಟಪ್ರಜೆಗಳ್ಗೆ ಕಟ್ಟುಜ್ಜಿನ ಪೋಳಿಗೆಯಕ್ಕುಂ. ನಿನ್ನೀ ರುಂಡಂ ಮರುಳ್ವಡೆವೆರಸು ನಂದಳಿಸಿ ಸೆಂಡನಾಡುವ ಪೂತಾಳಿಯ ಕೈಗಂದುಗಮಕ್ಕುಂ. ನೂಱಿಱಿನೇಂ; ನಿನ್ನ ನಾಡು ಬಕ್ಕಂಬಯಲಕ್ಕುಂ. ಅಂತೆವಱಿಂ ಬಗೆಗೇಱಿಂ ತೆಕ್ಕಳಿಸು ನಿರ್ಭರಂ ನೀಂ ಬನ್ನದೊಳಾಗದೆ ಬೇಗಂ ಪಯಮಂ ಬಿಟ್ಟು ನೆಟ್ಟನೆಮ್ಮಂ ಶರಣ್ಬೊಕ್ಕು ಸೊಗಂಬಾಳ್ವುದೆಂದರ್. ಆನುಡಿಗೆ ನಸುಂ ನಕ್ಕು ಮತ್ತಂ ಕಿಸುಗಣ್ಣಿಂ ದಸನಂ ಕೈಯ ಕೂರ್ವಾಳ ತೆಳ್ಪನೆಯುಂ ನೋಂಕಿ– ಈ ಸೂಳ್ಗೆ ನಿಮ್ಮಂ ತಱಿಗಾಪೆಂ; ಮುಂತಿಂತು ಬಾಯ್ಗೆ ಬಂದಂತೆ ಜಬುಬಿಕೆ ಕುಡಿನಾಲಗೆಯುಂ ಸೌಳನೆ ಸೀಳ್ವೆಂ, ನಿಕ್ಕುವಂ. ಆನೆ ಬಲ್ವಳ್ಳಂ ಕುದುರೆಯುಂ ಕಟ್ಟಿದೆಂ. ಕಾದುವೊಡಂ ಬೆಸನಮಿಮಗಕ್ಕುಂ. ಆ ನೊರ್ಕಿನ ರಾಮಂ ನಿಮ್ಮ ದೇವನಾವನೋವಂ? ಈಗಳ್ ನಿಮ್ಮಾಳ್ದನಂ ತಟ್ಟ ರಣಕಟ್ಟೆಂ; ಇದೆ ಎನ್ನೊಂದು ತೋಳ್ಬಲಮಂ ಮೆಱೆವೆಂ. ಈ ಮುರೆಯೊಂದು ಮಾಸಱಿಂ ಮೊನೆಯೊಳೆನ್ನೀ ಮೊನೆಯ ಬಾಳ್ಗೆ ತಲೆಯಂ ಮಾಱುಗುಡದಿರಿಂ. ಪೋ! ಪೋಗಿರೆ! ಎಂದು ಕಾಪಿನಾಳ್ಗಳಂ ಗದಱಿ ಗರ್ಜಿಸಿದಂ.

ಇಂತಪ್ಪುದುಮನುಚರರ್ ಪೇಳಿಗೆಯ ಪಾವಿನೊಂದು ನಾಕ್ಕೆಯಿಂ ತಡೆಗಟ್ಟುವಟ್ಟರಾಗಿ ಮರಳ್ದು ತಮ್ಮೊಡೆಯನಪ್ಪ ಪ್ರತಾಪಾಗ್ರ್ಯಂಗಿಂತಿದಂ ಬಿತ್ತರಿಸಿದರ್.

ಮುದ್ದಣಂ– ದೇವೀ!

ಮನೋರಮೆ:– ಆವ ದೇವಿ! ಶ್ರೀದೇವಿ ಏಂ ಭೂದೇವಿ!

ಮು:– ನಿನ್ನನೆ ದೇವಿಯೆಂದು ಕರೆದೆಂ.

ಮ:–ಬಲ್ಗತೆಯಂ ಬಿತ್ತರಿಪ್ಪೆಂದುಜ್ಜೆಮೊಗೋನೆನ್ನಂ ತೊೞ್ತು ಮಾಡಿ ದೇವಿಗೆತ್ತು ಕರೆದೆಯ್?

ಮು:– ಏಂ ಕಾರಣನೆ? ಸೋಲ್ಯುಂ ಪಪ್ಪಿದೆನೆ?

ಮ:– ಮೇಣಾವ ದೇವಿಯುಂ?

ಮು:– ರತಿದೇವಿ.

ಮ:– ಅಂತಪ್ಪೊಡೆ ನೀಂ ಕಾಮದೇವಂ.

ಮು:– ಅಕ್ಕೆ ದೇವಿಯೊಂದು ಪಸಾದಂ.

ಮ:– ಎಲೆ ಮದನಮೋಹನರಾಜ! ಅಂತಿರ್ಪೊಡೆ ನೀಂ ಪೇೞ್ದು ರತಿಯಾನೆ ಬಣ್ಣಿಸಿ ಪೊಗೞ್, ನೋೞ್ಪೆಂ.

ಮು:– ಓ! ಏತೆಱ ಮಾತೊ! ಎನ್ನಳವೆ?

ಮ:– ಆಃ! ರತಿಯುಂ ಬಣ್ಣಿಸಲ್ಕೆ ಸಲ್ಲದ ನೀನೇತೆಱ ಕಾಮದೇವಂ.

ಮು:– ಅಂತಪ್ಪೊಡೆ ಸಲ್ವೆಂ ಸಲ್ವೆಂ. ಕಾಮದೇವನೆಂಬೊಂದು ಬಿರುದಂ ಪಡೆದುದಱಿನೆ? ತೆಗೞ್ವರಿರ್ಕೆ. ಇದೆ ಇದೆ ತೊಡಂಗಿದೆಂ— ಅಸಿಯೊಡಲ ಪೊಗರ್ಣ್ಣ ಪೆಣ್; ಸವಿಮೊಗದ ಕಿಸುವಾಯ ಪೊಸನಡುವಿನರಸಿ; ಮಿಡಿಮೊಲೆಯ ಪಿಡಿನಡೆಯ ಬಿಡುಜಡೆಯ ನೀಱೆ, ಬೆಟ್ಟ್ಯ—

ಮ:– (ಅರೆನೋಟದಿಂ) ಆಃ! ಕಬ್ಬಿಗರ್ಗೆ ನೀಂ ಕಲ್ಲಾಯ್ತನಕ್ಕಂ. ಎಂದುಂ ಕಾಣದರೊಂದು ಪೊಂಗಿಸಿಂ ಪೇೞ್ದು ಪ್ರೇಕ್ಷಕರ ನಿನ್ನೀ ಬಣ್ಣನೆಯ ನುಡಿಗೇನೆಂಬೆನೊ! ಬಡಲಸಿದೇಂ? ಮೊಗದೊಳೇತೆಱ ಸಸಿ, ಕಣ್ಣೊಳೇತೆಱ ಪೂ, ನಡುವಿನೊಳೇಂ ಪಸಿ! ಎಂದು ಬಾಯುಂ ಕಿಸಿದಳ್. ಜಡೆಯುಂ ಬಿಡಿರ್ಕಲ್ಕೇಂ ದೆವ್ವಮಾಳ್ದುದೆ. ಪೋ, ನೀಂ ಕಾಮನಲ್ತು, ಭೀಮಂ.

ಮುದ್ದ– (ಕಿಱುನಗೆಯಿಂ) ಎನ್ನ ಕುಲದೇವಿ! ಇನಿತೊಂದು ಮುನಿಸೇಂ. ಎನ್ನ ನಗೆಯಿಸಿಂತಾಯ್ತಕ್ಕಂ. ಸೈರಿಸು! ಸೈರಿಸು! ನುಡಿಸಿಱಿಗೆಯುಂ ಬೆದಂಕೆ ಪಾರದಂತುಂ, ಇರ್ದಂತೆ ಬಣ್ಣಿಪ್ಪೊಡಮ ಜಾಣ್ಮೆ ದೊರೆಕೊಳ್ವಂತುಂ, ಬಾಸೆವೆಣ್ಣಿಂದೊಲ್ಮೆದಾಳ್ದು ವಾಕ್ಸಿದ್ಧಿಯುಂ ಪಡೆದು ನಿನ್ನಂ ಎನ್ನ ಜನ್ಮದಾರದಾಣೆ! ರತಿಯಿಂ ನೂರ್ಮಡಿ ಮಿಗಿಲೆನಿಸಿ ಬಣ್ಣಿಪೆಂ.

ಸುವ್ವಿ! ಸುವ್ವಿ! ಸಾಲ್ಗಗನಗ್ಗಿಟ್ಟಿಕೆಯೊಳೂರ್ದ ಬಣ್ಣಗೆಯ ಮುದ್ದುಗೂಸೆ! ಸುವ್ವಿ! ಸುವ್ವಿ! ಬೀಸೆ ಪೊತ್ತಗೆಗಳಂ ಪೊತ್ತ ಕೈ

ಯ ಚೆಲ್ವೆ! ಸುವ್ವಿ! ಸುವ್ವಿ! ಜಾಣೆ. ಎನ್ನೀ ಮಡದಿರನ್ನೆಯುಂ ರತಿಗೆಣೆಯೆಂಬ ಪೊಗೞ್ದು ಪಾಡುವೊಂದು ಜಾಣ್ಮೆಯ ಪೊರ್ದುಗೆಯ ನುಡಿಬಿನ್ನಣಮನೆನಗೆ ಕರುಣಿಸಾ! ನಿನಗೆಱಗುವೆಂ. ಸುವ್ವಿ! ಸುವ್ವಿ! ಆ! ಆ! ಆ! ಆ! ಆ!!!

ಮ.– ನೀಂಗೆಯ್ದ ಸರಸತಿಯ ಪೊಗೞ್ತೆಯ ತುತ್ತತುದಿಯ "ಆ! ಆ!!" ಏಂ?

ಮು:– ಅಂತಮ ಪಾಡಿನ ಜೋಡಿನ ದಾಟಿಯೈಸೆ.

ಮ:– ಆಪ್ತಾಯ್ತು ಚೆಲ್ವು. ಏಂ ನಿನ್ನಂ ಸರಸತಿಯೊಲ್ದಳ್ ?

ಮು:– ಎಂತೆಂತೊ ಪಾಡಿ ಬೇಡಿ ಒಲ್ಮೆವಡೆದೆಂ. ಈಗಳಿನಮುಂ ತಡಂಬಡದೆ ಬಣ್ಣಿಸಿ ನಿನತೊಂದೊಲ್ಮೆವಡೆದಪೆಂ. ಕೇಳ್! ಮಾಕಾಳಿಯ ಮೈವೊಗರ್ಗೆ......

ಮ:– ನಿನ್ನ ರತಿಯ ಬಣ್ಣಿಪೊಂದು ಸಂಧಿಯೊಳ್ ಮಾಕಾಳಿಯೊಳೇಂ ಕಜ್ಜಂ?

ಮು:– ಆಃ! ಎಡರ್ಗೇಡಿಯನೆ ಮಱೆತೆಂ. ಆತನಂ ಬಲಂಗೊಳದಿರ್ಪೆನಂ ಮೊತ್ತಮೊದಲೊಳಿನಿತುಂ ವಿಘ್ನಂ. ಓ ಓ! ಬರ್ಪನೆಯ ಬಿಂಕಣಿಗಿವಿಯ ಮೂಗೊಂಕುಮೂಗಿನ ಪೇರೊಡಲ ಇಲಿದೇರ ಬೆನಕ! ಇದೆ ಮಣಿವೆಂ. ಈ ರಮಣೀಮಣಿಯಪ್ಪ ರತಿದೇವಿಯಂ ಬಣ್ಣಿಪೊಂದು ಕವನದ ಕಜ್ಜಮುಜ್ಜುಗಮನಿತೊಂದು ಪೊತ್ತಿನೇಮಾೞ್ತೆಯೊಳ ಮೆಡರ್ ಬಾರದಂತು ಕಾಪ್ಪುದು. ಇನಿತೊಂದು ಮೇಲನೊಡರ್ಚಿದೆಯಪ್ಪೊಡೆ ಆಬಣ್ಣನೆಯ ಪೊಗೞ್ತೆಯ ಪಾಡಿಂಗೊಲ್ದೆನ್ನೀಮಡದಿ ಕೂರ್ಮೆಯಿನೆನಗೆ ತಿನವಡಿಸುವಾಪಸುಗೆಯ ಚಕ್ಕುಲಿಯುಂ ಗಾರಿಗೆಯುಂ ಪುರಿಗಡಲೆಯುಮನಲಂ ಕರ್ಬಂ ತೇಂಗಾಯುಂ ನಿನಗಂ ಪಾಲಿತ್ತು ಮೊದಲೊಳರ್ಪಿಸುವೆಂ.

ಮ:– ನಿನ್ನ ಬೆನಕಂ ಬರ್ಪನೆವಾಯೊಳೆಂತುಣ್ಗುಂ.

ಮು– ಏಂ ರಮಣಿ ದೇವರುಣ್ಬರೆ! ಉಣ್ಬೊಡಂತೆಂಬೆನೆ?

ಮ:– ಮೇಣೊರ್ವನೆ ತಿನಲ್ ಬಗೆವಾ!

ಮು:— ನೀನೀವ್ರದೋಂ ದಿಟಂ.

ಮ:— ಎತ್ತಾನುಮಿತ್ತೊಡೇಂಗೆಯ್ವೆಯ್.

ಮು:—ಇಸ್ಸಿ! ಅನಿತ್ತು ಭಕ್ಷ್ಯಮನೊರ್ವನೆ ನುಂಗಲಾಂ— ತಾವೆ(?) ಚಕ್ಕುಲಿಗಾರಿಗೆಗಳ್ ಕಾಮದೇವಂಗೆ; ಅವಲುಂ ಪುರಿಗಡಲೆಯುಂ ಮುದ್ದಣಂಗೆ; ಕಬ್ಬು ಕಬ್ಬಿಗಂಗೆ; ತೇಂಗಾಯೆನಗೈಸೆ !

ಮ— ನೀಂ ಜಾಣಂ. ನಿನ್ನ ರತಿದೇವಿಗೇಂ ?

ಮು—ತಾನೆ ಬಲ್ದೀವ ದೇವಿಗಾವುದಱೊಳಾಸೆಯೊ ?

ಮ— ಅಂತಿರೆಯುಂ ಮನೋರಮೆಗೇಂ ?

ಮು— ಓವ್ವೊ! ರತಿಯಂ ಬಣ್ಣಿಪ್ಪೊಂದು ಬೆಸನದೊಳ್ ಮನೋರಮೆಯುಂ ಮಱೆದುಬಿಡೆಂ. ಅಕ್ಕೆ! ಕರ್ಬಿನ ಸಿಪ್ಪೆಯುಂ ಮುಗ್ಗಿದ ಗಾರಿಗೆ ಪುಡಿಯುಂ ಮನೋರಮೆಗಿರ್ಕೆ.

ಮ— ನೀಂ ಬಲ್ಗಡಸುಗಾಱಂ, ಸಾಜಂ. ಇರ್ಕೆ. ನೀಂ ಮನದೊಳೆ ಮಂಡಿಗೆಯನುಂಡಂತಾಯ್ತು. ಈಗಳಿಂ ಕೇಳ್ವೆಂ ರತಿಯ ಪೊಸಬಣ್ಣನೆಯಂ.

ಮು— ಕೇಳ್. ಆಂ ಬಣ್ಣಿಪ ರತಿಗೆ ಮಿಂದ ಮರಗೂಬಿನೊಂದು ಮೆಯ್ಯೊಗರ್ ?

ಮ— ಮರಗೂಬಿನೆಂದೊಡಾರ್ ?

ಮು— ದೆಸೆವಳರೊಳೊರ್ವಂ.

ಮ— ಉಂ. ಹುಂ.

ಮು— ಸಿಂಗರದ ಮಲೆನಾಡಿಗನೊಂದು ಭಂಗಿಯ ಮೊಗಂ.

ಮ— ಮಲೆನಾಡಿಗನೆಂದೊಡಾವಂ ?

ಮು— ಮಲೆಯೊಳೆ ನೆಲೆಗೊಂಡಿರ್ಪ ನಾಲ್ಗೈಯ ದೇವರ್.

ಮ— ಇಂತಪ್ಪ ದೇವರೊಲ್ಮೆವಡೆದ ಮಲೆನಾಡ ಪೆಣ್ಗಳ್ ಕಣ್ಗೆ ಚೆಲ್ವೆಯರಾದರಕ್ಕುಂ.

ಮು— ಅಪ್ಪುದು. ಪತ್ತುಮಾಸಿಱಿಗೆ ಇರುಳ್ಗಣ್ಣಂಗೆಂತಂತೊಪ್ಪುವ ಬಟ್ಟೆ ನುಣ್ಗಣ್.

ಮ– ಇರುಳ್ಗಳ್ಳನೆಂದೊಡೆ ಅವ ಸ್ವಪ್ನಕ್ಕೆಂ.

ಮು– ಇರುಳ್ಗಳ್ಳನೆಂದು ಚೆಂದವನಕ್ಕುಂ.

ಮ– ಆಃ ಕಾಮದೇವರ ದೇವ! ಈಗಳೀಗಳಱಿತಂ. ನೀಂ ಬಣ್ಣನೆಯೊಳ್ ರಚನೆಯ ಜಾಣ್ಮಂ ನಿಕ್ಕುವಂ. ಎನ್ನೀ ಜೋಲ್ಮುಡಿಯ ಪ್ರಸರವಾಣ! ನಿನಗಾವ ಭಕ್ಷ್ಯದೊಳಿಷ್ಟಂ. ಪೂರಣಗಡುಬನೀವೆನೊ? ಚಕ್ಕುಲಿಯುಂ?

ಮು– ಅರರೆ! ಸ್ಮೃತಿ ಜ್ಯೋತಿಷ ಮಹಾದೇವಿಯು ಕಡೆವ್ರೇಟ್ಟನೊಂದು ರೂಪಿಗೆ ಪಡಿಮರಿಜಾಗೆ ಮೆಚ್ಚಿವೆನ್ನ ರತಿದೇವಿಯುನಡಿವಿಡಿದು ಮುಡಿವರೆಗಂ ಬಣ್ಣಿಸದ ಮುನ್ನಮಿನಿತೊಂದು ಬೇಗದಿನೊಲ್ದ!

ಮ– ಮುನ್ನೀರ ನೀರ ಸವಿವ್ರೊಂದು ಬಗೆಯೊಳ್ ಕೊಡನ ಕುಸರನಂತಿರೆ ಬಲ್ಲಡಲನೆ ಕುಡಿವ್ರೊಡಕ್ಕುಮೆ? ಬರ್ಣಿಸಿ ಸಾಲದೆ?

ಮು– ಅತಿಪ್ರಸಂಗಂ ಸಾಲ್ಗುಂ. ಇಂತು ವ್ಯರ್ಥಾಲಾಪದಿಂ ಪೊೞ್ತಂ ಕಳೆವೆಮ್ಮಂ ಲೋಗರ್ ಪಳಿಯರೆ? ಪೋ ಮರುಳೆ, ರಾಮಕಥೆಯು ನಿನ್ನೊರೆವೆಂ, ಕೇಳ್.

ಆ ವೇಳೆಯೊಳ್ ಶ್ರೀರಾಮನ ಕುವರೆ ಬಲ್ಪಿನ ಪಗೆರಾಯುಗುವರನೊಳ್ ಬಂದಿಪಟ್ಟುದೆಂದು ಚರರೆಂದ ನಿಟ್ಟುರದ ಕರ್ಕಶದ ನುಡಿ ತನ್ನ ಕಿವಿವೊಳಗಂ ಪುಗುತರ್ಪ ಮುನ್ನಮೆ ಪ್ರತಾಪಾಗ್ರ್ಯನೆಕ್ಕೆಕ್ಕೆ ಮಿಕ್ಕುವರ್ಪ ತೆಕ್ಕದೆಕ್ಕತುಳಿಗ ರೋಸದಿನಾದ ಕುಣಿವ ಕುಡಿಮೀಸೆಯುಂ ಪುರಿಗೆಯುದ್ದ ಬೆಮರಿಡುವ ಕಣ್ಣಯುಂ ಸುಸುಳಿ ಕೆತ್ತುವ ಮುಯ್ಯನೊತ್ತಿ ಬಿಲ್ಗೆ ಕೊಪ್ಪನೇಱಿಸಿ ತಿರುವಾಯ್ದ್ಗ ಕಣೆಯುಂ ಪೂಡಿ ತೇರನೇಱಿ ಸಾಲ್ಯಗೆಯ ಪಡೆವೆರಸು ಕುವರೆಗೆಯ್ವಸಾಸನಾವಂ ತೋಱು ತೋಱೆಂದು ಪಗೆಯೊಳ್ತಿ ನಡೆದಂ.

ಇತ್ತಲ್ ದಮನಂ ಪೂರ್ಣಕರ್ಣಗೆಂದು ಬರ್ಣರಿಸೇನೆಯುಂ ಕಂಡು ತನ್ನ ಮೊಗ್ಗಾವಲ ಕಿಱುವಡೆಗೆ ಕೈವೀಸಿ ಚತುರೆಯೊಳ್ ನಿಂದು ತಾಗಿದಂ. ಆವ್ರೊಟ್ಟಂಗೆ ಮಹಾಬಲಾಂತರಾಯುಗುವರನಂ ತೂಳ್ದು ಬಾರಿಸುವ ಪರ್ಪರಿಕೆಯು ಸೂರೆಗೊಂಡು ಬಿಟ್ಟ ನವ ಗಂಪಗರ್ವದಿಂ ತೇರಂ ನೂಂಕು

ತುಂ ಕಾರ ಕರ್ಮುಗಿಲೊತ್ತೆನಲ್ಕೆಡ್ಡಮೆಸೆವ ಪೇರಾನೆಗಳ ಘಟೆಯುಂ ನೊಳ್ಗಿಸುತುಂ, ಪೇರುರ್ಬಿನ ಕಡಲ ನಡುವಿನೊಳಡಿಗಡಿಗೆ ಗುಡಿಗಟ್ಟ ಮಡಿಮಡಿವ ನಿಡುದೆರೆಯ ಲೀಲೆಗೆ ಪಡಿವರ್ಪೊಂದು ಗತಿಯ ಕುದುರೆಗಳ ತಟ್ಟುನಣೆದೊತ್ತುತ್ತುಂ, ಮಾರಿಯ ಮಸಣಿಯ ಜೋಳಿಯಂ ಪಿಡಿದು ಜಡಿವ ಜವಪುರವಂ ತಗುಳ್ಚಿ ತಾವೊಕ್ಕಲಿಕ್ಕುವ ಬೋಟೆಯರ್ಗೆ ಗುರ್ವನಗುರ್ವಿಸುವ ಸೆಱಗಂ ಬೆಱಗಂ ಪಾರದ ಬಲ್ಗೈಬಂಟರ ಪೆರ್ವಡೆಯುಂ ಜರ್ವಿಕೆತ್ತಿಸುತುಂ, ತಾಂ ನಾಯಕನಾಗೆ ಪ್ರತಾಪಾಗ್ರ್ಯಂ ಮಾರ್ಮಲೆದು ದಮನನಂ ತಡೆದೊಡ್ಡಿ ನಿಲ್ತಂ. ಇಂತುಱುಬಿ ಬಂದುಂ ನಿಂದುಂ ಮುಂದುಂ ಪಿಂದುಂ ಸಂಧಿಸಿದ ಬಂದಿಗಾಱರ ಗೊಂಣಮಂ ನಂದಿಪೊಂದು ಕುಂದದ ಗರಗರಿಕೆಯ ಕೈದುಗಾಱತನದ ಬಲ್ಮೆಯೊಳ್ ಮಾಱೊಡ್ಡಿ ಮೊನೆಗಾಂತ ದಮನನನಿದಿರ್ಚಿ ಕೋಲ ಸರಿಯಂ ಕಱೆಯುತೆ ಕರೆಯುತೆ ಎಲೆ ಪಸುಳೆ, ನಿನಗಿಂತೇಂ ಹರಣಂ ತಿಣ್ಣಮಾಯ್ತು ! ನಿರ್ನೆರಮೆನ್ನೀಕೂರಂಬುಗಳ್ಗೆ ತಲೆಯಂ ಮಾಱುಗೊಟ್ಟು ಸಾಯಲ್ ಬಗೆವಾ! ಇಸ್ಸಿ! ನೀಂ ತರಳಂ; ಪೊಣರ್ಕೆಯಾಗದು. ಅಂತಿರ್ಪಿನಂ ದೇವರ್ಕಳಿಂ ನಿಚ್ಚಂ ನುತಿಗೊಳ್ವ ಪೆರ್ಮೆಗೊಡೆಯನಪ್ಪ ರಾಮನ ಹಯಮಂ ಬಿಟ್ಟು ಕಾಣ್ಕೆಯುಂ ಕೊಟ್ಟು ಪುದುವಾೞ್ — ಎಂದು ಕೇಳಿಸಿದಂ. ಆನುಡಿಗೆ ಕಡಂಗಿ ದಮನಂ— ಕೇಳ್ ! ಕೇಳ್ ! ಹರಣಂ ತಿಣ್ಣಮಾದರ್ಗೆ ದಾವುಂ ಪಾವುಂ ನೀರೊಂದು ಟಾವುಂ ಪೊತ್ತುವ ಕಿಚ್ಚಿನ ಬೇಹುಮೊಳವು. ಸಂಗರದೊಂದು ದಂದುಗಮೇಕೆ? ನಾಲಗೆ ನಿಡಿದಾದರ್ಗೆ ಕೂರ್ವಾಳುಂ ಕೊಲುಮೀಗಳ್ ಸಾಧ್ಯಂ. ಅಂತದುಕಾರಣಂ ಸಲ್ಲದ ನಿನ್ನಂಕದ ಬಿಂಕದ ವೈಸಾಸದ ಸಡಗರದ ಬಿಡುನುಡಿಯ ಚೊಕ್ಕಳಕೆಯುಂ ಬಲ್ಲದೆ ನಿಲ್ಲದೆ ಮರಲ್ವುದೆಂದಂ. ಇಂತಾಡಿದ ದಮನನಂ ಪೊಸಮಸೆಯ ಕೂರ್ಗಣೆಗಳಿನಿಸುತುಂ— ಎಲೆ ಕುದುರೆಗಳ್ಳ! ಕೂಱಿ! ನೀಂ ಬಾಲನೆಂದಿಂತು ನಯಂಬೇೞ್ದೊಡಂ ಬಳ್ಕದಳ್ಕದೆ ಮಾಱಾಂತಿದಿರ್ಚಿ ಸಾವ ನಿನ್ನೀನೊಸಲಕ್ಕರದೋದಿಂಗೇನೆಂಬೆನೊ! ಪುಣ್ಯಮೂರ್ತಿರಾಘವನ ಜನ್ನಕ್ಕೆಡರಂ ತರ್ಪೊಂದು ಸೆಡಕಿಂ ದುಡುಕಿಂ ಪೋಪ ಹಯಮಂ ಬಂದಿಗೊಂಡೊಂದಱಿಗೆಯ್ಮೆಯೆ ಸಿಂದಿದುದಕ್ಕುಂ; ತಪ್ಪೇಂ— ಎಂದಾಡಿದಂ. ಆ

ಗಳ್ ಕೋಪಾಟೋಪದಿಂ ದಮನಂ—ತೆಗೆ ತೆಗೆ ನಿನ್ನಾರಾಘವನಂ, ಹಯಮಂ. ಗಂಡುಗಲಿತನದಿಂ ನಿನ್ನಾರಾಯುಗುವರನೆಂ; ನಿನ್ನ ಬನ್ನದ ಜನ್ನದ ತುರಂಗಮಂ ಕಟ್ಟಿದೆಂ. ನೀಂ ಕಲಿಯಾಗಿ ಕಾದಿ ಎನ್ನಂ ಸಮಂತು ಹಯಮಂ ಗೆಲ್ದು ಕೊಳ್ವುದು—ಎಂದಂ. ಪ್ರತಾಪಾಗ್ರ್ಯನೆಂಗುಂ:— ಬಿಟ್ಟ ಕುಮರೆಯುಂ ಬಿಟ್ಟಿರ್ಪರೆ ಬೀರರ್. ಇದೆ ಇದೆ ಪೊಂಗಱಿಯ ಕೋಲ್ ಕಟ್ಟ ಬಿಡವರೆರ್ದೆಯೆಲ್ಗಳಂ ಪುಡಿಗುಟ್ಟ ನೆಟ್ಟನೆ ಹಯಮಂ ಮರಲ್ಚಲ್ಕೆಂದು ಪೂಣ್ಗು ಪೂಡಿದೆಂ, ಅರಸುಗನೆಂಗುಂ:— ಅಂತಿರೆಂದು ಮರಲ್ಚಲ್ಕೆಂದು ಬರ್ಪ ಪಗೆಯನೆಬ್ಬಿಟ್ಟಲ್ಕೆಂದು ಬೀರಸಿರಿಯೆತ್ತಿದ ನೆತ್ತರುಂಡ ಕೆಂಗಣೆಯಂ ನೋಡಿದೆಂ.

ಕಾಂತೆ— ಈಗಳ್ ಪೊಯ್ಕೈಗೆ ಮೊದಲ್. ಆಗಳ್ ಪ್ರತಾಪಾಗ್ರ್ಯಂ ತನ್ನೊಂದಗಟಿನರಿಯಂ ಶರಜಾಲದಿಂ ಮುಸುಂಕಲೊಡಂ ನಡುವಟ್ಟೆಯೊಳೆ ಬರ್ಪ ಕಣೆಗಳಂ ಮುಕ್ಕಡಿಗೆಯ್ದು ಮೇಲಂಬುಗಳನೇಸಾಡುವ್ರದುಂ, ಪ್ರತಾಪಾಗ್ರ್ಯಂಗೆ ಜೀವರಕ್ಕೆ ಬೆಸುಗೆವಿಟ್ಟುದು; ತೇರಿನರಗೀಲ್ ಕೞಿಲ್ದುದು; ಪೞಿಯಿಗೆಯುಡಿದತ್ತು. ಮತ್ತಂ ಪೊಸದಗಲೆಯುಂ ಬಿಗಿದು ಅಳವಟ್ಟ ಪೊನ್ನ ಪಡಿದೇರನೇಱಿ ಮುಟ್ಟಯಿಸಿ ಕಱುತ್ತಱಗಿ— ನೀಂ ಕಡುಗೈಗಲಿಯಕ್ಕುಂ, ಏಂ ಮಿಱುತ್ತಿನುಂಡಿಗೆಗೊಂಡಯ್! ಇದೆ ಇದೆ ನಿನ್ನಟ್ಟೆಯಿಂ ಜವನರಮನೆಯ ಮುಂಬಾಗಿಲ್ಗೆ ಲಾಳವಿಂಡಿಗೆಯಂ ಸಮೆವೆನೆಂದು ಮೂಡಿಗೆಯಿಂ ಕಿಡಿಯಿಡುವುರಿಗಣೆಯನಾರ್ದೆಚ್ಚಂ. ಅನಿತಱೊಳೆ ದಮನಂ ಭುಗುಭುಗಿಲೆಂದು ಪೊಗೆದುಂ ಪೊತ್ತಿಯುಂ ಕಿಡಿಗಾಱಿಯುಂ ಜಾಲೆಯೊಕ್ಕುಂ ಮಿಕ್ಕುಂ ಮೀಱಿಯುಂ ಪರಿತರ್ಪ ಕಿಚ್ಚುರ್ಗೋಲಂ ಚೆಚ್ಚರದೊಳೆ ತನ್ನೊಂದು ಬೆಚ್ಚಪೊಚ್ಚಪೊಸನೀರೊಡಲ ನಿಡುಗೋಲಿಂ ಕಾಲ್ದೊಳೆಯಿಸಿದಂ. ಬೞಿಯಂ ಮುೞುವಕ್ಕವತ್ತಣಿಂ ವಾಯುವ್ಯಾಸ್ತ್ರಂ ತಳರ್ದು ಬರ್ಪುದುಂ ಸರ್ಪಾಸ್ತ್ರಮಂ ಸಂಧಿಸಿದಂ. ಇಂತು ಮಂತ್ರಾಸ್ತ್ರಂಗಳ್ ಮುೞಿಯಲೊಡಂ, ಬಲ್ಮೆಯ ತೋಳ ತೋಟಿ ಬಳ್ವೆಳವಾಗೆ ಪೊಣರ್ದರ್. ಕಡೆಯೊಳ್ ಪ್ರತಾಪಾಗ್ರ್ಯಂ ದಮನನ ಬಲ್ಪಿಡಿಗುರ್ದಿಂಗೆ ನಿದ್ದೆವೋದಂ ಆಪ್ರಸ್ತಾ

ವದೊಳ್ ರಥಿಕನೊಂದು ಸೋಲಂ ಕೇಳ್ದು ಪ್ರಷ್ಕಲಂ ಶತ್ರುಘ್ನನಿಂ ಬೆಸನಾಂತು ತಳ್ವದೆ ಮಾಱಾಂತ ವಿಕ್ರಾಂತರಾಜಪುತ್ರನಂ ಸರಲ ಸೋನೆಯಿಂ ಕಿವುಳ್ಚಿ ಮುಸುಳ್ಚಿ—ಎಲೆಲೆ! ಪೋ ಪೋಗದಿರ್, ಭಟನಾಂ ಕಾಳೆಗದ ಮೊನೆಗೆ ಬಿಲ್ಗೊಂಡು ಬಂದೆಂ. ನಲ್ನುಡಿಯೊಳೆ ಹಯಮುಂ ಚಲಮುಂ ಬಿಡು. ಅಲ್ಲದೊಡೀಗಳೆ ಪಡೆಯನೊಡೆಮುಱಿವೆಂ- ಎಂದು ತಡೆದಂ. ಆಗಳ್ ಸುಬಾಹುತನಯಂ ಬಂದನಂ ನಿಂದು ನೋಡಿ—ನೀಂ ಪಡೆಯೆನಲ್ ತೊಡೆಯುಂ ಮುಱಿವೈ; ಭಟನಲ್ತು ಭಟ್ಟಂ; ಕೊಂಡುದು ಬಿಲ್ಲಲ್ತು ಪುಲ್; ಬಂದುದು ಕಾಳೆಗದ ಮೊಗೆನಲ್ತು ಮಾಳೆಯದ ಮನೆಗೆಂದಂ. ಪುಷ್ಕಲಂ ಕಾತುರದಿನೆಂಗುಂ:— ಬಿಡು ಬಿಡೀಬನ್ನಣದ ನುಡಿಯುಂ. ಇದೆ ಪೊಣ್ದೆಂಬೆಂ. ಇಂದೀಕೊಳುಗುಳದೊಳ್ ನಿನ್ನಂ ಗೆಲ್ದಲ್ಲದೆ ಕಾಲ್ಕೆಡೆದೆ. ನಾಬೊಡೀಬಿಲ್ ಉಱುಂಗೋಲಕ್ಕೆ, ಅಣ್ಮು ಕಣ್ಮಾಯಮಕ್ಕೆ, ಮೇಣುಂ ಗೆಲ್ಲವೆಣ್ ನಿನ್ನೊಳ್ ಕೇಣಿಯಕ್ಕೆ! ಕೈಮುಱಿದು ಕೆಕ್ಕಳಿಸದಿರ್. ದಮನನೆಂಗುಂ:—ನೀನಿಂತಿರೆ ಗಡಾವಣೆಯುಂ ಕೋರವಿಸಿ ಗಟ್ಟಿಸಲೇಂ? ಪೋಗಸಣಿಯ ಗರುವಾಯ ಗೊಳೆಯದ ಜೋಹಮುಂ ಬಿಡು. ಆರ್ಪೊಡೆ ಕೈಚಳಕಮುಂ ತೋಱು. ಪುಷ್ಕಲನೆಂಗುಂ:—ಅಬ್ಬಾ! ಮೊನೆಗಾಱದ ಮೊನೆಗಾಱಕುವರ! ನಿನ್ನೊಳ್ ಕಡುಕೆಯ್ದು ಪೊಣರ್ವಿನಂ ಗುಣಂಬಾರದೆಂಬೊಂದು ಬಗೆಯಿಂ ಸೈತಿಡೆ ನೀನೊಡಂಬಡದೆ ಬಾರ್ತೆಗೆಟ್ಟೆಳನೆತ್ತರ ಕೊರ್ಪಿಂ ತಲೆಯುಂ ಪೋಗುಡುವೀನೀಂ ಮರುಳಾಗಾ! ನಿರ್ನೆರಂ ಕಾಡಾನೆಯೊಳಡಿಬರ್ಪ ನಾಡ ಕುನ್ನಿಯಂತು ನೀನೆನ್ನೊಳ್ ಕಡುಕೆಯ್ವೈ! ದಮನನೆಂಗುಂ:—ನೀಂ ಕಾಡಾನೆಯಲ್ತು; ನೆಣಗೊರ್ವಿನೂರಾನೆಯುಕ್ಕುಂ. ಪುಷ್ಕಲನೆಂಗುಂ:—ಏನೆನ್ನಂ ನಾಡ ಪಂದಿಯೆಂದು ಕೊಱಚಾಡುವಾ! ನಿನ್ನ ತುದಿನಾಲಗೆಯನೀಕೂರ್ವಾರ್ಗಳಿನೀಗಳೆ ಸಾಳನೆ ಸೀಳ್ವೆಂ, ಗಳಪದಿರ್. ದಮನನೆಂಗುಂ:— ನಿನ್ನಂ ಪಂದೆಯೆಂದರಲ್ಲ; ಪಂದಿಯೆಂದು ನುಡಿದರೊಳರೇ! ಇಂತೀ ನುಡಿಗೆ ಪುಷ್ಕರಂ ಕರಂ ಕನಲ್ದು ದೊಣೆಯಿಂ ನಂಜನುಗುಳ್ವ ಕವಲಂಬುಗಳನುರ್ಚಿ ಮೊಗೆದಿಸುತುಮಿರೆಯಿರೆ, ದಮನನುಂ ಎಡಸಂ ಬಲಸಂ ತಿರುಗಿಯುಂ ಸಾರ್ದುಂ ಪಡಿಸರಲಂ ಜೋಡಿಸಿಯುಂ ರಯ್ಯನೆ ಬರ್ಪ ಪಗೆಯ ಪ್ರಾಸಕಣೆಗಳಂ ಖಂಡಿಸಿಯುಂ ದೇವ

ರ್ಕಳ್ ಪೊಗಲ್ವಿನ್ನಂ ಸಮದಂಡಿಯೊಳ್ ಪೊಣರ್ದರ್ಂ. ಕಟ್ಟಕಡೆಯೊಳ್ ಕೈಸೋಲ್ತು ಮೈಗುಂದಿ ಬಸವಳಿದು ಮುಚ್ಚಿಪ್ರೋದಂ.

ಮುದ್ದಣಂ– ಸಕಲಗುಣಸಂಪನ್ನೆ ! ಏಕಗುಣಹೀನೆ !

ಮನೋರಮೆ– ಅಬ್ಬಾ! ಎನ್ನ ಗುಣದೊಳಾವುದೊ ಬಂದು ಹೀನಂ!

ಮು– ನಲ್ಲತೆಯುಂ ಪೇಲ್ವಿರ ಕಣ್ಗೆ ಕಟ್ಟಿದಿರೊಳ್ ಪುರುಳನಱಿಯದ ಗಾವ್ಪಿನ ಕಾಡನರಂತಿರೆ ನಿದ್ದೆಯ ಬಿಣ್ಪಿಂ ತೂಂಕಡಿಪ ಸಿನತೊಂದು ಗುಣಂ ಹೀನಂ.

ಮನೋ– ತೂಂಕಡಿಸದೇವೆನೊ ? ಕಿವಿಗಳ್ಗೆ ಪುರುಳಮರದ ಗುರ್ದಿ ನಾಟದ ಬಱುರಗಳೆಯು ನಿಡುಗತೆಗೆ.

ಮು– ನಿನಗೇಂ ವೀರರಸಂ ಮೆಚ್ಚದೆ ?

ಮನೋ– ಮೆಚ್ಚುಮುಚ್ಚನಱಿಯೆಂ. ಎರ್ದೆವುಗುವ ಪೊಚ್ಚಪೊಸ ನಲ್ಲತೆಗಳನೆ ಮೆಚ್ಚುವೆಂ.

ಮು– ಉಂ! ಪೋಕೆ. ಮುಂತೆ ಮುಂತೆ ಚೆಲ್ವಿನ ಬಲ್ಸೊಗಸಿನಯೆ ನಲ್ಲತೆಗಳ್. ಇಂತು ಸುಬಾಹುಜಂ ಪುಷ್ಕಲನೊಂದು ಬಾಣಪತಿಗಳ ವಱಿದು ಮೈಮಱೆಯಲೊಡಮಾಗಳ್ ತಳ್ವದೊರ್ವನೋಲೆಕಾಱಂ ತಳ ರ್ವುರ್ ಪುರಕ್ಕೈತಂದು ಸೋದರಂಬೆರಸೊಡ್ಡೋಲಗಂಗೊಟ್ಟಿರ್ದ ತಮ್ಮಾ ಳ್ದಂತೆ ಮೊೞಗಿ–ಕಾಮದೇವರೀಗಳ್ ಕೊಳುಗುಳಕ್ಕೆ ಪೋಱಮಡಲಕ್ಕುಂ. ಅರಿರಾಯರೊಳೆಮ್ಮ ಚಿಕ್ಕರಸಂ ನಿಂದು ಕಾದಿ ಮೈಸೋಲ್ತಂ. ಇಂತಿದೆ ಕಜ್ಜದುಜ್ಜುಗದೊಂದು ಬಿನ್ನಪಂ ಬಿನ್ನಪಮೆಂದು ಕೇಳ್ವುದುಂ, ಸುಭುಜಂ ಕಿಕ್ಕಿಱಿದೆಲ್ದು ತೂಗುಂದೊಟ್ಟಿಲೊಂದು ಪಾಂಗಿನಿಂ ಬಗೆ ಮನಮುಱು ಕದ ಗಂಡಗರ್ವದಿರ್ದೆಸೆಮೂಲೆಗಳೂಳಮುಯ್ಯಲಾಡೆ ತನ್ನೊಂದಾಯು ತಿಯಿಂ ತಱಿಸಂದು ಸಂಗರಕ್ಕೆಂದು ಪೋಱಡಿಯಿಕ್ಕಿ ಮಿಕ್ಕನ ಸೇನೆ ನ ಡೆದು ಬರ್ಪಂತು ರಣದುಂದುಭಿಯುಂ ಮೊೞಗಿಸಿದಂ. ಆವೇಳೆಗೆ ಅಂಬಿಗರ ಸಬಳಗರ ಕೊಂತಗಾಱರ ಹರಿಗೆಕಾಱರ ಕೈದುಗಾಱರ ಪಡೆವೆರಸು ಪಡೆ ವಳ್ಳರ್ ರಾವುತ್ತರ್ ಸಾಡಿಗಳ್ ತೇರಾಳ್ಗಳ್ ವಂತೆತ್ತಿ ಪೋದರ್. ಅವರಂ ಬಳ ಸಿ ಚಿತ್ರ ಚಿತ್ರಾಂಗ ಸುಕೇತುಗಳ್ ಮುಂತಪ್ಪ ಸಂದ ಮಹಾರಥರು

ಮತಿರಥರುಂ ಜೋದರುಂ ನಿಚ್ಚಳದ ಕಾಹಿನ ಬಂಟರನುೞಿದು ಪಡಿಬಲ ಮುಂ ಕೂಡಿ ತೆರಳ್ದರ್. ರಾಯನುಂ ಬೆಂಬಲಂಗೊಂಡು ರಥಮನಡದರ್ ತಳರ್ದರ್ಂ.

ಅಂತು— ಇೞಿತರ್ಪ ಸೊವಡುಗುವ ದಾನಧಾರೆಯು, ಪನಿತುವೊಲಿಂ ಗಾಲೊಳ್ ಕಾಲ್ವರಿವ ನೊರೆಯು, ತಲೆಯೊಳೊಟ್ಟಿದ ಮಣ್ಣು, ಪೊಸತೊಂ ದು ಮಾಚ್ಕೆಯಿಂ ಬೆನ್ನ ಜೊಂಚೆಯು ಪಕ್ಕೆಯು ಗುಜಿದ ಕೋಡ ಕೀರ್ತಿಮು ಖದ ಕೊರಲ ಕಿಱುಗಂಟೆಯು ಕಾಲ ಗಗ್ಗರಗೆಜ್ಜೆಯು ನೊಸಲ ಜಂಟಚಾ ರಿಯು, ಕೈಯ ಇಟ್ಟಿಯು ಸಿಂಗರದ, ನೆಲೆವೆಟ್ಟುಗಳೊಟ್ಟಜವಂತೆ ಮುಗಿ ಲೊಡ್ಡಿನ ದಡ್ಡಿಯಂತೆ ಜವನಾಳ್ಗಳ ಜಂಗುಳಿಯಂತೆ ನಡೆವ ಕಾರೊ ಡಲ ಪೇರಾನೆಗಳ; ಮತ್ತಂ ಮಿಂಚಿನ ವೇಗದಂತೆ ಸಿಡಿವ ಸಿಡಿಲಂತೆ ಕಡಲ ತೆರೆಯೊೞ್ಗನಂತೆ ಬೆಳಗಿನ ಪಬ್ಬುಗೆಯಂತೆ ಮೀಱಿ ಧೀಂಕಿಡುವ ಪೊನ್ನ ಕಡಿಯಾಣದ ಸಮ್ಮದ ವಾಗೆಯದ ರನ್ನದ ಪಲ್ಲಣದ ಸೊಗಸಿನ ತುರಗ ದಳಿದ; ಮತ್ತಂ ಎತ್ತಿದ ನೊಗದ ಸುತ್ತುವ ಗಾಲಿಯ ಬಿಗಿದಚ್ಚಿನ ನಿಂದ ಪಾಪೆಯ ನೆಮ್ಮಿದರಗೀಲ ಸಮಕಟ್ಟಿದೀಸಿನ ಗಟ್ಟಿಸಿದ ಮೊಗವಾಡದ ಬೆ ಟ್ಟದ ಕೀಲ ಕಟ್ಟಿದ ಕುದುರೆಯ ನಟ್ಟ ಪಲಿಯಿಗೆಯ ತೇರ್ಗಳ ಮೊತ್ತದ ಮತ್ತಂ ಮಾರಿಯೊಳ್ ಪೋರ್ವ ಮಸಣಿಯೊಳ್ ಗಸಣಿಗೆಯ್ವ ಜವನಂ ಜವಗಿಡಿಸುವ ಕುಳಿಕನಂ ಗುಳಿಗೆಗಟ್ಟುವ ಪೆರ್ಕಳದ ಕಾಲಾಳ್ಗಳ ಪಡೆ ಯು; ಮತ್ತಂ ಖಳಿಲೆಯ ಕಾಯ್ಪನೇಡಿಸುವ ಬಲ್ಸಿಂಗನ ಮುಂಗುಡಿಯ ಜರ್ಮನಣಕಿಸುವ ಪಲ್ಲಮಱಿಯ ಚಲ್ಲದ ಸೊರ್ಕನಿೞಿಕೆಯ್ವ ಬೀರದ ಜೋದರ ದಳಿವುಱಿದಿಂ ಸೇನೆ ಗಳಿಗೆಗಳಿಗೆಗೆ ಮುಂದೊತ್ತಿ ಕಡಲ್ಗೆ ಪಡಿ ಗಡಲ್ ಕೈಯೆತ್ತಿ ನಡೆವಂತು ನಡೆದು ಮುಗಿಲ್ ಮುಗಿಲಂ ತಾಗಿದಂತೆ ಬೆ ಟ್ಟು ಬೆಟ್ಟಮನಿದಿರ್ಚಿದಂತೆ ತಾಗಿ ನಿಲ್ವುದುಂ; ಮೊದಲ ರಣರಂಗದೊಳ್ ಪಗೆಯ ಕೋಲ ಪೊಯ್ಗೆ ಬಸವೞಿದು ಮುಚ್ಚೆಗೆ ಸಂದ ದಮನನೞಿದು ೞಿದ ಮೈಗಾಪಿನ ತುೞಿಲಾಳ್ಗಳ ಶೈತ್ಯೋಪಚಾರದತ್ತಣಿಂ ಮೆಯ್ದಿಳದೆ ತ್ತಂ ದಿಟ್ಟಿಸುವ ಭರದೊಳ್ ಇದಿರ್ಗೆ ಬಂದ ತನ್ನಯ್ಯನ ಬೆಂಬಲವ ಸೇ ನೆಯುಂ ಕಂಡು ತಾನವಕೊಳಗೊಂದಿದಂ. ಮತ್ತಮಿಂತಳವಾಂತ ಕುವರ ನೊಂದಿರಕ್ಕೆ ಮೆಯ್ವೆರ್ಚಿ ಸುಭುಜಂ ಪಗೆರಾಯರಂ ಕೊಲ್ವೆನೆಂಬಾಸೆಯಿಂ

ಬಾಸೆಗೊಟ್ಟು ತನ್ನ ಪಡೆಯಂ ಕೊಂಚೆಗಟ್ಟನ ಕೋಂಟೆಯಂತೆ ಸಮೆದು ಮೊಗದೊಳನುಜಸುಕೇತುವಂ ಕೊರಲಡೆಯೊಳ್ ಚಿತ್ರಾಂಗನಂ ಪಕ್ಕಂಗಳೊಳ್ ಚಿತ್ರದಮನರನಿರಿಸಿ ತಾಂ ಬಾಲಬೊಳ್ ನಿಂದು ಒಡಲೊಳ್ ಮಿಕ್ಕ ಜೋದರಂ ತುಂಬಿ ಯುದ್ಧಸನ್ನದ್ಧನಾದಂ.

ಅತ್ತಲ್ ಮಱುವಕ್ಕದಿಂತೆ ಪ್ರ್ಪಟ್ಟ ಪವಣಪೊಸಗೆಯ್ಮೆಯಂ ದಿಟ್ಟಸ್ರದುಂ ಕಲಿಯಾಗಿ ಪೆಟ್ಟುವೆರ್ಚೆ ಬೊಬ್ಬಿಱಿದು ದೊಣೆಯಂ ಕಣೆಯಿನಣಿಗೆಯ್ದುಂ ಕೈಯ ತೆಳ್ವಾಳಂ ಮಸೆದುಂ ಬಿಲ್ಲ ಪೆದೆಯಂ ಪೊಸೆದುಂ ದಿಟ್ಟವಾಯ್ತು.

ಆಪೊಳ್ತಿಂಗೆ ಶತ್ರುಹಂವಂತ್ರಿಯಂ-ಅಯ್ಯ, ಎಮ್ಮಾ ಕುದುರೆಯಂ ಸೆಱೆವಿಡಿದಿನ್ನೆ ಬರವೆವೆಮ್ಮಡನೆ ಕೈಗೈದ ಕಲಿಯಾವನೀಗಳ್ ಬಲ್ಪಡೆವೆರಸು ಬಂದಿದಿರ್ಚುವನಾವನಾವನಾಡಿದು? ಏಸೆವ್ಮಾಳ್ ಕಾದಲಾರ್ಪನೆ? ಪೇಟ್-ಎಂದು ಕೇಳಲೊಡಂ, ಸುಮತಿ-ಇದೆ ತೋರ್ಪುದು ಚಕ್ರಾಂಕಪುರವರಂ; ಈರಾಯನಾನಾಡೊಡೆಯಂ. ಮೊನೆಯ ಮೊದಲೊಳ್ ತನಯನಳವಱದನೆಂದಱಿತು ಎಮ್ಮೊಳೆತ್ತಿ ಬಂದಿರ್ಪಂ. ಕಡುಗಲಿ ದಲಿವಂ. ಕಾದಿಗೆಲ್ವೊಡೆಮ್ಮಿನಸದಳಂ. ಈತನೊಳ್ ಕಾದುವ ಬೀರನಾವನೊ? ಎಂದು ಸೇನೆ ಬೆಱಗುವಡೆ ನುಡಿದಂ. ಆನುಡಿಯಂ ಮಾಂಕರಿಸಿ ಲಕ್ಷ್ಮೀನಿಧಿ ತಾಂ ಕೈವೊಯ್ದು ಏತಱ ಪೊಳ್ತುರಾಯಂ. ಎನ್ನೊಂದು ಸೂಟಿಯ ಗಜೆಯ ಬಡಿಗೆಡೆಗಿಡದೇಂ ಪೋಕುಂ. ಸಂತಂ ನೋಲ್ಪುದೆನ್ನೊಂದು ಕೈಚಳಕವನೆಂದು ಪನ್ನತಿಕೆಯ ಗಂಡಗರ್ವದಿಂ ನುಗ್ಗಿನೊಳ್ದುಱುವೊಗನಂತಿರೆ ಕೊಂಚೆಗೋಂಟೆಯತ್ತಣ್ಗೆತ್ತಿ ನಡೆವುದುಂ ಬೆಂಬಱಿಯ ಕಾಲಾಳ ದಳಿಂ ವ್ಯಾಹಮಂ ಮುತ್ತಿದುದು. ಅಂತು ಮುತ್ತಿಯುಂ ಖೊಪ್ಪರಿಸಿಯುಂ ಸಾರ್ದುಂ ಸೇರ್ದುಂ ಕಾಲಾಳ್ಗಳ್ ಕಾಲಾಳ್ಗಳಂ ತೇರಾಳ್ಗಳ್ ತೇರಾಳ್ಗಳಂ ಗೋಱೆಯಿತ್ತರ್ ಗೋಱೆಯಿತ್ತರಂ ಸಾದಿಗಳ್ ಸಾದಿಗಳನಿದಿರ್ಚೆ ಕಾದುತಿರಲೊಡನಾಗಳ್ ಪಡೆಗೋಂಟೆಯ ಬಾಗಿಲೊಳ್ ತನ್ನಾಯತಿಯಿಂ ನೂಂಕಿ ನಡೆವ ಲಕ್ಷ್ಮೀನಿಧಿಯಂ ತಡೆದು ಸುಕೇತು ಗವಱ ನಿಲ್! ನಿಲ್! ಜವಪುರದ ಪೆರ್ವಾಗಿಲಂ ಪುಗುತರ್ಪಂತಿರೆ ಬರ್ಪಱಬೀರ ನೀನಾರವಂ ಎಂ

ಮು ಜರ್ಿದಂ. ಅದರ್ಕೆ ಸೀತಾವರಜಂ ಆನಾರುವನಲ್ತು ಜವನೆರ್ನೆ ಪ್ರೇರಿಯುವಂ. ನಿನ್ನನುಯ್ವೊಡೆಂದೆ ಬಂದನೆಂದಂ. ಆನುಡಿಗೆ ಸುಕೇತು ಕಿಸುಗಣ್ಣಿ ಗಜೆಗೊಂಡು ತನ್ನಾ ತೇರಿನೆಳಗೆ ಧಿಮ್ಮನೆ ಧುಮ್ಮಿಕ್ಕಿ ಮಾರಾಂತ ಬಲ್ಲಾಳ್ತನದ ಬಂಟನನೊತ್ತಿ ಅಂತಪ್ಪೊಡಿನಿತೊಂದು ಬಡಿಯನಾನುಂ ಕೊಂಡುಯ್ದು ಪೋಗೆಂದು ಮೋದುವನಿತೊಂದು ಬೇಗದಿಂ ಜನಕಜಂ ಕುಳ್ತು ಪಗೆಯ ಬಡಿಗೆ ತಪ್ಪಿ ಕನ್ನ ಗಜೆಯಿಂದೆ ಮೊಟಿಕಾಲ ಕೀಲನಿಟ್ಟಂ. ಬಡನೆಯೆ ಸುಧ್ವಜನುಂ ಪಿಂಜರಿವರಿಯ ಕೈಯುಂ ಕುಟ್ಟಿದಂ. ಮತ್ತಮಿರ್ವರುಮೆಟ್ದು ಗದೆಗಳಂ ತಿರಿಪುತೆ ಜಡಿದುಂ ಬಡಿದುಂ ಪಿಡಿದುಂ ಪೊಣರ್ದರ್.

ಇಂತು ಮುಂದೆಸೆಯೊಳ್ ಪೊಣರುತಿರೆಯಿರೆ ಪಕ್ಕದೊಳ್ ಕಲ್ಕನೆ ಪುಷ್ಕಲಂ ಕುದುರೆಗಳಂ ಚಪ್ಪರಿಸಿ ಪೊಂದೇರಂ ಮುಂತೆ ನಡೆಯಿಸಿ ಮಲೆವ ಜೋದರಂ ತತ್ತಳದಱಿದು ತಾನುಂ ತನ್ನನೊಲ್ದ ಬೀರಸಿರಿಯುಂ ಬೀದಿನರಿದು ನುರ್ಗಿವರ್ಪನ್ನೆಗಂ ಚಿತ್ರಂ ಪ್ರಾಟಿಯ ಬೆಳ್ಗುದುರೆಯ ತನ್ನ ರನ್ನದೇರಂ ನೂಂಕಿ ಕೋಲ ಹಂದರಮನೊಡ್ಡಿ “ ಎಲೆಲೆ-ಇದೇನೆತ್ತಣೆ ಪೋಗು. ನಿಲ್ ನಿಲ್ಲೆಂದು ತಡೆದಂ. ಈನುಡಿಗೆ ಪಡಿನುಡಿಯೊಳ್ ಕೇಳಲೆ! ಎಮ್ಮಾತಶ್ವಮಿರ್ಪತ್ತಣ್ಗೆಮ್ಮ ಪೋಕು ಕಣಾ! ಇಂತೆಮ್ಮ ಪೋಗಂ ಬರವಂ ಕೇಳ್ವ ಪೇಟ್ವ ನೀನಾರ್ಗಾರೊಳ್ ಪೇಟೆಂದು ಕೋಲ ಮುಸುಂಕಂ ಪರಿಹರಿಸುತೆಂದಂ. ಚಿತ್ರನೆಂಗುಂ:- ಕೇಳಳ್ವೊಡೆ ಕೇಳ್. ಈ ನೆಲದೊಳ್ ಸಂದ ಬೀರರ ಲೆಕ್ಕಕ್ಕೆ ದತ್ತಕನಿಷ್ಠಿಕನಾಗಿ ಅಲವ್ರೊಡೆಯ ನಡಿಮಲರ ಬಂಡುಣಿಯೆಂಬೊಂದು ಬಿರುದಂ ತಾಳ್ದ ಬಾಟ್ವ ಚಕ್ರಾಂಕ ಪುರದರಸಂಗೆ ಸುಭುಜಂಗೆ ಪುತ್ರಂ ಚಿತ್ರಂ ಕಿಱಿಯುಂ ನೀನೇಂ. ಭಾರತಿಯೆಂಗುಂ- ಇದು ಚಿತ್ರಂ! ನೀಂ ಸುಬಾಹುಜಂ ಬಾಹುಜರನೆಮ್ಮಂ ತಡೆವುದು. ಅಂತದಱಿಂ ನಿರ್ದರಂ ಕಡುಕೆಯ್ದು ಕಾಟ್ಕಡದೆ ಸೋದರರೊಂದು ಬಗೆಯ ನಂಟಿಂ ಮಖಾಶ್ವಮಂ ಬಿಟ್ಟು ಕಟ್ಟಿಱಕದಿನೆಮ್ಮೊಳ್ ಪುದುವಾಟ್. ಚಿತ್ರಾಖ್ಯನೆಂಗುಂ- ಎಲೆ ಅಣ್ಣಂಗಳಿರಾ! ಏ ಮಾತೊ! ಚಲದಿಂ ಬಲದಿಂ ಕಟ್ಟಿದ ಕುದುರೆಯಂ ಮೊನೆಯೆಡೆಯೊಳ್ ಕೊಟ್ಟು ಕೆ

ಮ್ಮನೆ ಮಾಣ್ಬ ರಾಯರ ಪಂದೆಗಳಾಗರೆ! ಅಂತು ಬೇಳ್ಪಿರಾಯರ್ ಬೀರರೇಂ? ದಾನಮುಂ ಪಾರ್ವರ ಪಾರ್ವರಾಗರೆ? ನಂಟುಂ ಬಂಟುಂ ನೆರಮಿರ್ಪಿನಂ ಗೆಲ್ವುದು ವೊಲ್ವುದುಂ ನಿಮಗಕ್ಕುಂ. ಪುಷ್ಕಲನೆಂಗುಂ-ಬಲ್ಲರ ನಯಮುಮಂ ಕೇಳರೆ! ಬಡರಾಯುಗುವರ! ನಿನಗೆಮ್ಮೊಳ್ ಕಾದುವ್ರೊಂದು ಬೆಸನಮೇಕೊ! ಪೆರ್ಮೆಯಿನಾಗಳೆಮ್ಮಂ ತಾಗಿದ ನಿನ್ನಣ್ಣನೇನಾದನೆಂದು ಬಗೆಯದೆ ಕುಮರೆವೊಂದು ದೂಸಱಿಂ ಬಂದು ಸಾಯಲಿರ್ಪ ನೀಂ ಮರುಳರಾಗಿರೆ? ಚಿತ್ರನೆಂಗುಂ- ಮರುಳರೆನಲಕ್ಕುಂ ನಾಡನುಱಿದು ಕಾಡಂ ಪೊಕ್ಕು ತೊೞಲುತುಮಿರ್ದೆವೆ? ಪುಷ್ಕಲಂ ಕೆರಳ್ದೆಂಗುಂ— ತಾಂ ಪೊಡಸು ನುಡಿ ಬಿಱುಸು ಗಡ! ಅಯ್ಯನ ಸನ್ನಿಗೆಂದು ಕಾಡಂ ಪೊಕ್ಕ ಶ್ರೀರಾಮನಂ ಹಗರಣಂಗೆಯ್ವಾ! ನಿಮ್ಮವರಪ್ಪ ಕಾಲುರಿಚರಾಯರ್ ಕ್ಷಾತ್ರಧರ್ಮಂಗಳನೆತ್ತಣಿನಱಿವರ್. ಚಿತ್ರನೆಂಗುಂ- ಕ್ಷಾತ್ರಧರ್ಮಮನಱಿಯದಾದೊಂದು ಕೊಱತೆಯಿನಱಿಂಗೆಟ್ಟೆಮ್ಮವರಾವ ಕಲಿಯಂ ಗನ್ನಗತಕದಿಂ ಮುನ್ನಂ ಕೊಂದರುಂಟು ಪೇೞಿ. ಪ್ರಷ್ಕಲನೆಂಗುಂ- ಕಟ್ಟಣಕದ ನುಡಿಗಾಱ! ಅಡಿಗಡಿಗೇಂ ಜಱುಚುವಯ್. ನಂಬಿದನಂ ಪೊರೆವೊಂದು ಕತದಿಂ ಲೀಲೆಗೆಂತಂತು ವಾಲಿಯುಂ ಶ್ರೀರಘುರಾಮಂ ಕೊಂದನಕ್ಕುಂ. ನಿಮ್ಮನ್ನರಪ್ಪ ಕ್ಷೀಣಬಲರ್ಗೆ ಇಂತೊಂದುಗೆಯ್ಮೆ ನಾಣ್ಗೆಟ್ಟ ಕೈಮುಸಕದೆಸಕಮಾಗಿ ಪರಿಣಮಿಸಿರ್ಕುಂ. ಚಿತ್ರನೆಂಗುಂ-ನಿನ್ನೆರಮೆಮ್ಮಂ ಪೞಿವ ಬಲ್ಮೆಯಿದೇಂ? ಎಮ್ಮನ್ನರಪ್ಪಕ್ಷೀಣಬಲರೊಳಾರಾನುಂ ಮತಿಗೆಟ್ಟು ತಾಂ ತನ್ನ ಕೈವಿಡಿದ ಮಡದಿಯಂ ಪೆಱವರ್ಗೆ ಮಾಱುಗೊಟ್ಟರಂ ನೀಂ ಕಂಡು ಕೇಳ್ದಮುಂಟೆ! ಪುಷ್ಕಲಂ ಕಿನಿಸಿನೆಂಗುಂ- ಎಲೆಲೆ! ಬಾಯಂ ಮುಚ್ಚು ಮುಚ್ಚು! ಅಲ್ಲದೊಡೀಗಳ್ ಯಥೇಷ್ಟಂ ಗಳಪುವ ನಿನ್ನ ಕುಡಿನಾಲಗೆಯಂ ಸೌಳನೆ ಸೀಳ್ದು ಕುನ್ನಿಗಿಕ್ಕುವೆಂ. ಆನುಡಿಗೆ ಚಿತ್ರಂ ಕನಲ್ದು ಅಂತಿರೆನ್ನ ನುಡಿಯಂ ಲಾಲಿಸಿ ಪೊಲೆಯಾವ ನಿನ್ನ ಕೊಡಂಕೆಗಳ ಬೆಚ್ಚ ಬೆಸುಗೆಯಂ ಕಳಿಲ್ಚುವೆನೆಂದು ಮಾರ್ಗಣಂಗಳಂ ಜೋಡಿಸಿದಂ. ಇಂತು ಮಾಗಲೊಡಮೆಚ್ಚ ಮಾರ್ಗಣಂಗಳಂ ಮಾರ್ಗಣೌಗಳಿಂ ತುಂಡಿಸಿಯುಂ ಭ್ರಾಮಕಾಸ್ತ್ರಂಗಳಂ ಸಂಧಿಸಿಯುಂ ಕಡುಕೆಯ್ವ ಪುಷ್ಕಲನೊಳ್ ಚಿತ್ರಂ ಚಿತ್ರತರಮಾಗೆ ಕೈಗೆಯ್ಯುತಿರ್ದಂ.

ಈಮಾೞ್ಕೆಯಿನಾಜಿಯೊಳೋರೊಂದೆಡೆಯೊಳುಱಿತದಿಸುಗೆಯು ಪೊಯ್ವ ಬಡಿತದ ಕಡಿತದ ನುರ್ಗುನೊಂಕಿನ ಹಾಣಾಹಾಣಿಯು ಕೇಶಾಕೇಶಿಯು ಜುದ್ದಂ ಪೆರ್ಚಿರೆಯಿರೆ, ಎತ್ತಂ ಕಡಿಕಂಡದ ರುಂಡದ ಮುಂಡದ ತಂಡವಾಯ್ತು. ಪೆಣನ ಬಣಂಬೆಯನಡರ್ದು ಬಿಸುನೆತ್ತರ ಕಾಲನಿೞಿದು ಕಡಿಮೊಲ್ಗಳೊಗ್ಗಂ ಕುಕಿಲ್ದು ಪಂದೊವಲಂ ಬಾರ್ದುಂ ಸಾರ್ದುಂ ನಲಿವ ಕಾಗೆಗೂಗೆಗಳುಂ, ದಂಡೆಗರುಳನುಂಡು ಬಸಬಸನೆ ಸುರಿವ ಬಸೆಯ ಪೊಸಬಸೆಯುಂ ಕುಡಿದೊಬ್ಬಿ ಬಗುಳ್ವ ನರಿನಾಯ್ಗಳ್ ಪಗಲುಮಿರುಳುಂ ಕಾವಲಿರ್ದುವು. ಇಂತಾಕೆವಾಳರ ಬೀರಮುಱ್ಕಡೆ, ಸೊರ್ಕು ಸೋಱೆ, ಅಳವೊಳವಾಱೆ, ಚಲಂ ನೆಲೆಗಿಡೆ, ಬಲಂ ಬಯಲ್ಪುಗೆ, ಕೊಂಚೆಗೋಂಟೆ ದೂಳಿಗೋಂಟೆಯಪ್ಪುದುಂ; ಸುಭುಜಂ ಬೆನ್ನ ಮುಂದೆಸೆಯೊಳ್ ಕಟ್ಟುಬ್ಬಟೆಯ ಕಾದಾಳ್ಗಳ್ ಬೆರಸಂಕೆಯಿಂ ಬೀದಿವರಿದು ನುರ್ಗಿವರ್ಪ ಸೌಮಿತ್ರಿಯುಂ ನೆಟ್ಟನೆ ಕಂಡು ಕಡೆಗಾಲದ ಸಿಡಿಲ ಕಡುಕಾಯ್ಪಿಂ ಮನಕಂ ಮಸಗಿ ಜವಿರ್ದು ಜಂಕಿಸಿ ಕಱುತ್ತೆಱಗಿ ಮುಂಬಱಿವ ಸೊಱೆಗಾಱನಂ ಶಕ್ತ್ಯಾಯುಧದಿನಿಟ್ಟಂ. ಆವೇಳೆಯೊಳ್ ಶತ್ರುಹಂಗೆ ಬೆನ್ನೊಳೆ ಹೊಂಚುವ ಸಂಚುವೆತ್ತಣುವಂ ತನ್ನೊಡೆಯನಂ ಪಿಂದುಱಿಪಿ ತಾಂ ಮುಂಜರಿದು ರಥಿಕನನಿದಿರ್ಚಿ ಪೊಯ್ವ ಶಕ್ತಿಯುಂ ತುಡುಕಿ ಪುಡಿಗುಟ್ಟಿದಿಂಬೞಿಯುಂ ಸುಬಾಹು ಹನೂಮಂತನೊಳ್ ನಿಂದು—ಕೆಲಸಾರೆಲೆ ಪಾೞ್ಮೃಗದ ಮುದುಗೋಡಗ! ಬಯಲ್ಗೆ ಬಂದ ಕಿತ್ತಿಲಿಯನಱಿಯುಟ್ಟುವ ದಿಟ್ಟನ ಗೊತ್ತಿನ ಕೊತ್ತಿಗೆ ತಡೆಯ ಪಡಲಿಗೆಯೇಂ ಬಲ್ವಟ್ಟೆ? ಮೇಣುಂ ಮೃಗರೆವಕ್ಕಿನ ತಲೆ ದಕ್ಕುಂತಲೆಯೇ ಇರ್ಕೆ; ತಡೆದ ನಿನ್ನನಡಂಗಿದ ರಾಯನಂ ಸಟೆಯು ಸಮಂತು ದೆಸೆವಲಿಗುಡುವೊಂದು ಬೆಡಂಗಂ ನೀಂ ಮಿೞ್ತುವಿನರಮನೆಯ ಮೊಗಸಾಲೆಯೊಳಿರ್ದು ಕಾಣಲಕ್ಕುಮೆನುತುಂ ಬಲ್ಗಣೆಗಳಂ ವಾಯುಜನಂ ನೋಯಿಸಿದಂ. ಆಗಳ್ ಕೋಲ ಪೊಯ್ಲನಣುವನಣುವಂ ಬಗೆವ ಸುಭುಜಂಗೆ ಕೊಲ್ವರ್ ನೀಮುಂಟು; ಸಾವರುಮುಂಟು. ಜಯಮುಂ ಬಿಡಿಸಿ ಕೊಂಡುಯ್ವ ದೊರೆ ಬೇಱೆಯುಂಟು. ಅಕ್ಕುಬೆಕ್ಕುಗಳೊಂದು ಗೊಡವೆಯೆಮಗೇಕೆ? ಆದೊಡಂ ಕಾಡ ಮುದುಮಂಕಡನೊಂದು ಕೈಚಳಕಮಂ ಪರಿಕಿಪ್ಪೆಂದು ತನ್ನಡಿಯಿನೆರ್ದೆ*ಯ

ಸೊಣೆದಂ. ಏನೆಂಬೆಂ ಆರಾಯುಂ ವೀರನೊಂದು ಪದಹತಿಗೆರ್ದೆವಡೆ* ಪವ್ವನೆ ಪಾಱಿಗಂತಾಗೆ ಕಟ್ಟಾಯಸದಿಂ ನೊಂದು ದಿಮ್ಮನೆ ತಿರೆಯೊಳ್ ಮುಚ್ಚೆಗೊಂಡಂ; ಪಡೆಯೊಳ್ ಗಲಬೆಯೆತ್ತಂ ಪೆರ್ಚಿದುದು. ಕತ್ತ್ರಿನ ಕೋಂಟೆಯಂ ತೆಗೆದು ನಾಯಕರುಂ ಜೋದರುಂ ಪನಂ ನೊಂದು ರಾಯನೆಡೆಯೊಳ್ ನೆರೆದುಪಚರಿಸುತಿರ್ದರ್.

ಎನ್ನ ಜೀವಿತೇಶ್ವರೀ! ಇಂತಪ್ಪುದುನಾಗಳ್ ವಾಯುಪುತ್ರನ ಕರಹತಿಗೆ ಗಾಱಿಗೆಟ್ಟು ನಿದ್ದೆವೋದ ಸುಭುಜಂ ಕನಸಿನೊಳ್ ಶ್ರೀರಾಘವಂ ಮೈದೋಱಿದುದಂ ಕಂಡನಪ್ಪುದುಂ ತನ್ನೊಳ್ ತಱಿಸಂದನಿಚ್ಚಟದ ಬಕುತಿಯಿಂ ನೆನೆನೆನೆದು ಜಗದೊಡೆಯಂಗೆ ಗೆಲವಕ್ಕೆ! ಗೆಲವಕ್ಕೆ! ನಿಜ್ಜಸೊಗದ ಗಂಡುಮರಿಜಂಗೆ ಗೆಲವಕ್ಕೆ! ಮಾಳಕುಮಿಯರಸಂಗೆ ಮೇಲಕ್ಕೆ! ಅಜನಯ್ಯಂಗೆ ಮೇಲಕ್ಕೆ! ಅಜನ ಮುಮ್ಮಗಂಗೆ ಮೇಲಕ್ಕೆ! ನೀನೆ ಎನ್ನೊಡೆಯಂ ಎನ್ನ ಕಾವ ದೇವಂ! ಎಲೆ ಮಾಯುಗಾಱ! ಲೋಕದ ಮಂಕುಮಾಯೆಗೊಳಗಾಗಿ ಇಂತೊಂದು ಪೊಲ್ಲದ ಕಜ್ಜಮನೊಡರ್ಚಿದೆಂ. ಅಂದು ಮುನಿಯೊಳ್ ನಿನ್ನಂ ಪಡೆದೆಂ. ನಿನ್ನಿದಿರೊಳೆನಗಾವ ಚಲಮಾವ ಬಿಂಕಮಾವುದರಸುತನಂ ನಿನ್ನೆರಂ ಕಾದಿದೆಂ. ತಪ್ಪೊಪ್ಪಗಳಂ ನಿನ್ನೊಳೊತ್ತೆಯೀವೆಂ. ಕಾಯಯ್-ಎನುತೆ ಕನವರಿಸುತುಂ ಮತ್ತಂ ಚೇತರಿಸಿ ಅಱಿವುಗೊಂಡು ಮುಂತಿರ್ಪ ಸೋದರನಂ ಕುವರನಂ ಮೊನೆಯಿಂ ಕೈದೆಗೆವುದೆಂದು ನಿಯಮಿಸಿ ಶತ್ರುಹಂಗಮಾಱುವಂಗಂ ಕೈಮುಗಿದು ನಿಮ್ಮತ್ತಣಿನಾಂ ಪಾವನನಾದೆಂ. ರಾಘವನ ಜನ್ನಗುದುರೆಯು ಬರವಿನದೊಂದು ನೆವದಿನೆನ್ನ ನಾಡುಂ ಬೀಡುಂ ಬಳಗಮುಂ ಮೇಲಾಯ್ತು. ಶ್ರೀರಾಮನಂ ಕಂಡ ಮೇಲಾವುದೊ! ತಾಂ ಪೋಕ್ಕಕ್ಕುಂ. ರಾಮಭಕ್ತರ್ಗೇಂ ಬಾರದೊ. ಇದೆ ಮಖತುರಂಗಮುಮಿದೆ ಚತುರಂಗಸೇನೆ; ಇದೆ ಭಂಡಾರಮಿದೆ ರಾಜ್ಯಂ; ಪಲವಿನೇನಿದೆ ಸರ್ವಸ್ವಂ. ನಿಮ್ಮಡಿಗಳೊಲ್ಮೆಯನೊಂದನೆ ಬೇಡುವೆನೆಂದು ಮತ್ತಮಡಿಗೆಱಗಿದಂ. ಇಂತು ಮಣಿವ ಬೇಡುವ ರಾಯನಂ ಕರುಣಿಸಿ ತನ್ನರ್ಧಾಸನದೊಳ್ ಕುಳ್ಳಿರಿಸಿ ಸುಭುಜನೊಳ್-ನೀಂ ಮಾನ್ಯಂ, ನಿನ್ನನನುಗ್ರಹಿಸಲ್ಕೆಂದೆ ಶ್ರೀರಾಮಚಂದ್ರಮನೆಮ್ಮೊಳ್ ನಿಮ್ಮೊಳ್ ಇಂತು ಕಾಳಗಮನೊಡ್ಡಿದನಕ್ಕುಂ- ಎಂದು

ಸಂತಮಿಟ್ಟು ಲಾಲಿಸಿ ಪಾಲಿಸಿ ಕಪ್ಪಮುಂ ಕಾಣ್ಕೆಯುಂ ಹಯಮುಂ ಕೊಂಡು ಪ್ರೇಮಮಿಟ್ಟು, ಸುಭುಜನುಂ ತನ್ನ ಚೊಚ್ಚಲ ಮಗಂಗೆ ಪಟ್ಟಮಂ ಕಟ್ಟಿ ತಾನುಂ ಪಡೆವೆರಸು ಶತ್ರುಹಂಗೆ ಬೆಂಬಲನಾದಂ.

ಎಂಬಲ್ಲಿಗೆ

ಸುಬಾಹುಯುದ್ಧವೆಂಬ ಏಕಾದಶಾಶ್ವಾಸಂ

ಸಂಪೂರ್ಣಂ.

---

## ದ್ವಾದಶಾಶ್ವಾಸಂ.

ಮುದ್ವರ್ಣಂ.– ಓ ಎನ್ನತ್ತೆಯ ಮಗಳೆ! ಮುತ್ತಿನ ಸೆಂಡೆ!

ಮನೋರಮೆ– (ಹುಸಿಯ ನಸುಮುನಿಸಿಂ) ಬಱಿವಱಿದೆ ಬಣ್ಣಿಸಿ ಬಣ್ಣಿಸಿ ಕರೆಕರೆದು ಕರಕರಿಸದಿರ್. ಎನಗೆ ತಲೆ ನೋವಪ್ಪುದು.

ಮು– ಅಂತದೇತಱಿನರಸಿ?

ಮ– ಅಡಿಮುಡಿಯಿಲ್ಲದ ನಿನ್ನ ಕತೆಗೆ.

ಮು– ಆಃ! ಎನ್ನ ಚಿತ್ತರದ ಬಣ್ಣನೆಯ ನಲ್ಗತೆಯೊಳೇನಡಿಮುಡಿಯ ಕೊಱತೆ? ಸವಿಸ್ತರಂ ನಿರವಿಸಿದೆನಲ್ತೆ.

ಮ– ಎಂತೆಂತೊ ತೊಡಂಕಿ ಬೆಡಂಕಿ ಪೇೞ್ದೊಡಾಯ್ತೆ? ನಿಡುಗತೆಯ ನಿಱುಗೆಯ ಕೂಟಂ ಕೇಳ್ವರ್ಗೆ ಮನಕ್ಕೆ ಬಾರದೊಡಕ್ಕುಮೆ?

ಮು– ಇರಿರ್! ಆಂ ಚಿತ್ತರಿಸಿದ ನಲ್ಗತೆಯೊಳ್ ನಿಱುಗೆಯ ಕೂಟಂ ಮೀಱನಿಸದುಂಟೆ? ನೀನೆ ಪೇೞ್.

ಮ– ಸುಭುಜಭೂಭುಜಂ ತನ್ನಂ ಮುನ್ನಮೊರ್ವ ಮುನಿ ಪೊಯ್ದನೊ ಬಯ್ದನೊ ಎಂದು ಶತ್ರುಹನೊಳ್ ಗೋಣಗಿದನಲ್ತೆ.

ಮು– ಮುನಿ ಪೊಯ್ದನೆಂದಲ್ತು, ಬಯ್ದನೆಂದು ಪೇೞ್ದನಕ್ಕುಂ.

ಮ– ಏಕೊ ಪೇೞನೆ?

ಮು— ಅನಱಿವೆನೆ, ಕತೆಯೊಳಿರ್ಕುಂ.

ಮ— ಅದನೆ ನಿರವಿಸು.

ಮು— ಓ! ಓ! ಇನಿತೊಂದು ವಿಷಯಮಂ ಪೇೞಿಸುವಱಿಂ ಬೇಸಱಾಯ್ತು. ಈಗಳೆ ಬಿತ್ತರಿಪೆಂ. ಈಧರಣೀಮಂಡಲ.....

ಮ— ಬಣ್ಣನೆಯ ಧರಣೀಮಂಡಲಗಳೇಕೆ? ಬಂದುಬೞಿಯುದಂತು ತಿರುಳನೆ ಕೂಡಿ ಪೇೞ್ವೈ.

ಮು— ಆಯ್ತಾಯ್ತು. ಮುನ್ನಂ ಪುತ್ತ ದಿನಂಗಳೊಳೊರ್ವ ಸುಭುಜರಾಜಂ ಆದಿದೈವದಿರವನಱಿವೊಂದು ಬಯಕೆಯ ಬಿಸುಪಿಂ ಪೊಱಮಟ್ಟು ಮುನಿಗಳೇರೊಂದೆಡೆಯ ಪುಣ್ಯಾಶ್ರಮಂಗಳೊಳ್ ತೊೞಲ್ತೊೞಲ್ದಂ ಗಡ! ಅಂತು ಪೋಪೋಗುತುಂ ಮುಂತಿರ್ಪ ತಪೋವನದೊಳಸಿತಾಂಗನೆಂಬೊರ್ವನಂ ತಪಸಿಯುಂ— ದೇವರೊಳ್ ಪಿರಿಯನಾವನೆಂದು ಬೆಸಗೊಂಡಂ. ಆಗಳ್ ಮುನಿಪಂ— ಶ್ರೀರಾಮನೆ ಜಗದ ದೇವರ ಗಂಡನೆಂದು ಕುಱುಪಿಟ್ಟು ಪೇೞ್ವುದುಂ; ರಾಯುಂ— ಮಾನಸರೆಂತಂತು ಬಸಿಱೊಳ್ ಪುಟ್ಟಿಯುಂ, ಬವಣಿಗರೆಂತಂತು ಕಾಡಂ ತೊೞಲ್ದುಂ, ಪಾಪಿಗಳೆಂತಂತು ಬಲ್ಬನ್ನದೊಳ್ ತೊಡರ್ದುಂ, ಬಾೞ್ವ ರಾಮಂ ದೇವನೆ! ಛೀ! ಬಿಡುಬಿಡೀ ನಿನ್ನ ಗನ್ನಗತಕದ ನುಡಿಯಂ. ಅಂತು ರಾಮನನೊಲ್ವೊಡೆ ನಿನ್ನಂತಿರಾಂ ಗಾಂಪನೆ? ಎಂದು ರಾಮನಂ ಮೋೞ್ ಮುನಿಯುಂ ತೆಗೞ್ದಂ. ಆನುಡಿಗೆ ಕರಂ ಕನಲ್ದು ಮುನಿಪಂ ರಾಮಭಕ್ತಿಯೊಳ್ ಬೆಂಗೊಟ್ಟರೆಂದು ಶಪಿಸಲೊಡಂ ಪೂರ್ವಸಂಚಿತದೊಂದಱಿವಿನೆೞ್ಚಱಿಂ ತನ್ನೊಂದು ಕುತ್ತಮಂ ಬಗೆದು ಮುನಿಗೆ ಕಾಲ್ಗೆಱಗಿ ತಪ್ಪಂ ಕ್ಷಮಿಸಿ ಕಾವುದೆಂದು ಬೇಡಿದಂ. ಆಗಳಸಿತಾಂಗಂ ರಾಯನಂ ಪಾಲಿಪೊಂದು ಭಾವದಿಂ ಎಂದಿಂಗೆ ರಾಮಭಕ್ತಂ ನಿನ್ನಂ ಕಾಲಿನೊದೆವನಂದಿಂಗೆ ನಿನ್ನೊಳ್ ಭಕ್ತಿಯೊಗೆತರ್ಕೆ! ಎಂದು ತಿಳಿಪಿ ಕಳಿಪಿದಂ. ಇಂತೆಂದೆ ಸುಬಾಹು ಮುನಿಯ ಬಯ್ಗುಳನಾಗಳ್ ನೆನೆದು ಶತ್ರುಘ್ನಂಗೆ ತನ್ನಿರವಂ ಕೇಳಿಸಿದನಕ್ಕುಂ.

ಮನೋ— ಈಗಳಱಿತೆಂ. ಮುಂತಣ ಕತೆಯನಱಿಯೆ ಪೇೞ್.

ಮುದ್ದ— ಎನ್ನ ಚಿತ್ತರದ ಚಿತ್ತರದ ಬೊಂಬೆ! ರಂಬೆ! ಈಪರಿ

ದೊಳ್ ಸುಮಿತ್ರಾಪುತ್ರಂ ಚಿತ್ರಚಿತ್ರಾಂಗದರಂ ಮಿತ್ರಭಾವದೊಳೊಪ್ಪುಗೊಂಡುಂ, ಸುಭುಜಸುಧ್ವಜರೊಳೊಡಂಬಟ್ಟುಂ, ದಮನನಂ ಸಂತವಿಟ್ಟುಂ, ಮುಂಬಟ್ಟು ಪಡೆವೆರಸು ಹಯದ ಬೆನ್ನೊಳೆ ನಡೆಯುತ್ತಿರೆಯಿರೆ; ಬಟ್ಟೆಯೊಳ್ ಕರ್ನೆಲದೆ ಕೊರ್ವಿ ಬೆಳೆದ ಕರ್ವಿನ ತಸಿರಸಕ್ಕೆ ಪೆರ್ಮರನ ಪಾೞುಗೊಂಬಿನೊಳ್ ಪೊಸೆಯ ತೆೞ್ಪಬಿಲೆಯೊಳೊತ್ತುಗಟ್ಟಿದ ಕಿಱುನೊಱಿನ ಸವಿಜೇನ ಸಜ್ಜಿಸಿಂಬನಿಯನೆಱೆದು ಪಾಲ್ಗೋೞಿನ ಜೋಲ್ಗೆಚ್ಚಲ ತೋರವೊಲೆಯ ಎಳಗಂದಿ ಕದುಱುವಿನ ತೊಱೆದ ತಂಬಾಲಂ ಬೆರೆದು ಹಸಿಸಿ ಕೊನೆಗಾಲಗೆಯೊಸಱೆ ಬಾಯ್ಗಿನಿದಿಸಿದಾಗೆ ಸವಿವ ಸವಿಯಂ ಲೋಗರಱಿವಂತು ಪೆಱತೊಂದು ಮಾತ್ಕೆಯಿಂ ಮೂಗಿನುಣ್ಬಂತು ತುಂಬುವಂ ಪವನನೆನೆ-ಬಿಸಿಲ ಜಳಕ್ಕೆ ಬಾಡದೆ ಬೆಳ್ದಿಂಗಳ ಹಿವಕ್ಕೆ ಕೋಡದೆ ಪಗಲೆನ್ನದೆ ಮರ್ಬೆನ್ನದಾಗಳಾಗಳುಳ್ಳಲರ್ ಕೊಳದ ಬನದ ಬಿಱಿಮುಗುಳ ತನಿಗಂಪಂ, ಪಾವಡರದೆ ಪಕ್ಕಿ ಸೋಂಕದೆ ತುಕ್ಕುಡಿದ ಸೆಕ್ಕೆಯೊಡೆದ ಚನ್ದನದ್ರುಮಂಗಳ ನಱುಗಂಪಿನೊಳ್ ತೆತ್ತಿಸಿ, ಪಸುರ್ ಮಾಯುವ ತಣ್ಪಾಱದ ಮೆಲ್ಪುಗುಂದದ ಮರುಗದ ದವನದ ಪೊಸಗಂಪಂ ಪತ್ತಿಸಿ, ಪೋಪ ಬರ್ಪ ಬಟ್ಟೆಗರ ಮೂಗಿನಂಡೆಯೊಳ್ ತುಱುಕುವ ಬನಗಾಳಿಯುಂ ಬೞಿಗೊಂಡು ಕಡಲಂ ಬಾಂಬರಂ ನೆಗೆದ ಕರ್ಮುಗಿಲೊಡ್ಡಿಂ ಪಗಿಲ್ತು ಕೊಳನ ನೀರುಣಲೆಂದು ತೇಂಕಿ ವರ್ಪ ಕಿಱುಮುಗಿಲೆಂಬಂತಿರೆ ನೆರೆದುಬರ್ಪ ಪರ್ಬಿ ಪಜ್ಜೆವಿಡಿದೀಸಿ ಪರಿವೆಣ್ಣೆದೊಡೆದ ನೇಱಿಲ್ ಪಣ್ಗೆ ಬಣ್ಣಂಬಳಿದ ಕರ್ಮಣಿಗೆ ತಣ್ಣೀರೊಳೞ್ದಿದ ತನಿಗೆಂಡಕ್ಕೆ ದೊರೆವರ್ಪ ಬವರಿಗಳ ಗಾವರಕ್ಕೆಬ್ಬಿತ್ತು ಗೂಡನುೞಿದು ಕೋಡುಗೊಂಬನಡರ್ದು ಕೂಡಿ ಪಾಡಿ ಕಾಡ ಪಣ್ಗಳಂ ನಾಡ ನೆಲ್ಗಳನಾಯ್ದು ಬೇಡಿ ಕಾಡುವ ಪಿಳ್ಳೆಗಳ್ಗೆ ರೂಡಿಸಿದ ಮಮತೆಯಿನೂಡಿ ನಲಿವ ಪಕ್ಕಿಗಳ್ಗೆ ಬೀಯುವ ಪಣ್ಣಂ ಮಾಗದ ಮಿಡಿಯುಂ ಪೀಯುವಮಾಗದ ತಳಿರಂ ಆವಗಮೊದವಿಪ ಮರಂಗಳಂ ಬಳಸಿ ನಿಚ್ಚ ಮೊಸರ್ವ ಪೆರ್ಚುಗೆಯುಬ್ಬರದಿಂ ಕರೆಗಣ್ಮಿ ಪರಿವ ಬನಸಿರಿಯ ಜೀವದ ಗೊತ್ತಿನಂತೊಪ್ಪುವ ನೀರ್ಗೊಳಂಗಳಿಂ ಮನೋಜ್ಞಮಾದಾರವೆಯ ಮುಂದೆಸೆಯೊಳ್ ದಿನದಿನಕ್ಕೆ ತನಗೆ ಬಿರಯಿಮಿಗಂಗಳ ಬೇಂಟೆಗೆ ಬೇಱೆವೇಱೆವಿಲ್ಗಳ್ ದೊ

ರೆಕೊಳ್ವಂತು ನಸೆಗಾಪನೊಸೆದು ಬೆಳ್ಪಯಿಸಿದನೆನಲ್ಕೆಸೆವ ಕರ್ಬಿನ ತೋಂಟದ ಗೊಂಟನೊಳ್ ಬಿತ್ತೊಂದರ್ಕೆ ಪವಿತ್ತಮಿಂ ಪೊಲಿವರ್ಪ ಕದಿರ ಬೆಳೆಯು ತನ್ನೊಂದು ಪೊರ್ಲಿಯಿಂ ಬಣ್ಣವೆರ್ಚೆ ನಳನಳಿಸಿ ಬೆಳೆದ ಕೆಯ್ವೊಲಮನಣಕಿಸಿ ತಲೆವಾಗಿಸಿ ತಣಗಿಸಿ ನೊಸವುಡಿ ಮಿಗುವ ಬಿತ್ತಂ ಪೊತ್ತು ನಿಗುರ್ದ ಸಿಂಪ ರಾಗಿಪ್ಪೆಲಬೊತ್ತಿನೊಳ್ ಕೆಸಱೊಳಾಗದ ಬಸಿಱೊಳ್ ಪ್ರತ್ಯಾಣಿಮುತ್ತುಗಳಂ ಬಿಱಿದು ದೂವೆಯು ಕುಸುಱಿಂ ಪ್ರದಿದು ಬಣ್ಣಗುಂದದಂತು ಬೆಳ್ವಟ್ಟೆಯಂ ಪೊದೆದೊಡಲಿಚಂ ತನ್ನ ಬೆದೆಗಾತಿಯು ಚಲ್ಲೆಯು ಸಿಂಗರಕ್ಕೆಂದು ಸಮೆದು ಬೈತಿಟ್ಟ ಕುಂದಣದ ಗೊಂಡೆಯೆನೆ ತಾವರೆಯು ಕೋಶವಂತಿರೆಸೆವ ಜೋಳದ ಪೊಱೆಯಂ ಸೂಲ್ಗೊಂಡು ಮೊಳೆತ ಬೆಸ್ಸುಱವಿಟ್ಟ ಕೊನೆಯಿಕ್ಕಿದ ಕಾತ ಪಣ್ತ ಪೊಂಬಾಳೆಯು ಚೆಂಬಾಳೆಯು ರಂಗುಬಾಳೆಯು ತೋಂಟದಿನೊಳಗೊಳಗೆ ಬಾಂಬಟ್ಟೆಗರ್ ಪೊಱಲ ಸೊಬಗಂ ನಿರುಕಿಸಲ್ಕೆಂದು ಅಗಳಾಗಳ್ಮಾತಪ್ಪೊರ್ಜೆಂದು ಕಟ್ಟಿಬೊಂದು ಸರಣಿಯೆನೆ ಮುಗಿಲೊಳ್ಗೊಂಡಿದ ನಾಡ ಪೊಱಗೊಂಟೆಯುಗಳ್ ಸೊಗಯಿಸಿದತ್ತು.

ಇಂತು ಪೊಱಲ್ಗೆ ಪೊಱಮೆಯ್ಯು ಸುಲ್ಲ ಸನ್ನಣದಂತೆ ಕೆಂಕಮಾಗೆಸೆವ ಜಾದುಗಲ್ಲ ಸಿಡುಗೊಂಟೆಯಿಂದೊಳಗೆ ಚೆಂಗದಿರನ ತೇರ ಸೂಟಗೆತ್ತಂ ಮಿಳಿರ್ದಂ ಮುಂಚಿ ಪರಿವೇಱಿಂಕುದುರೆಗಳ ಖುರಪ್ರಟದ ಪ್ರೊಯ್ಲಿಂಗಿರದಡರ್ದ ಪುಸುಂಕುವ ಕೆಂಧೂಳಂ ಬೀಸಿ ಜಾಡಿಸುತುಮೋರಣಂಬಿಡಿದ ಪಟಿಯಿಗೆಗಳಂ, ಮನೋಜ್ಞಮಾಗಿ ನೆಱೆನೆಱೆಯಿರುಳ್ಗಳ್ ತಾಂ ತಮಗಿಱತಂದು ಬಿನದದಿಂ ವಿಹರಿಸಲ್ಕಿರಿಯರ ನೆಲೆಯ ಸಿಂಗರದ ಮೊಟದ ಬೆಳ್ಳಿವೆಟ್ಟುಗಳ ತಪ್ಪಲ್ಗಳೆಂಬಂತಿರೆ ಪಗಲ್ಗೆ ಪಾಲಿಸಱೆದಂತುಮಿರುಳ್ಗೆ ಜೊನ್ನದಿಂ ಸಮೆದಂತುಂ ತೋರ್ಪ ಸೌಧಗಳಂ, ಮತ್ತಂ ಪೊತ್ತಿದ ಪೋಮದೆತ್ತಿನ ಧೂಪದ ಪತ್ತಿದ ದೀಪದ ಸುತ್ತಿದ ಕರ್ಪೂರಗೆ ಮೇಲ್ಮೆಗೆಯುತೆ ಬಿತ್ತರದಿಂ ಮುಗಿಲೊತ್ತನೊತ್ತೆ ಮರಕತಕಳಶದ ತನಿವೆಳಗು ಮೇಘಮಂಡಲದೊಳ್ ಬೆಳೆಯುತೆ ಬೆಳ್ಳಿಮಿಂಚನಾಗಿಸೆ ಗೋಪುರಂಗಳ ಮಿಸುನಿಯ ನೆಲೆಮಾಡದ ಚೆಂಬೆಳಗು ಬಾಂದಳದೊಳ್ ಪಳಂಚುತಿಂದಿರವಿಲ್ಲನೊಡರ್ಚೆ, ಅಗಳಾಗಳ್ ಮೊಱೆಗುವ ಭೇರಿಯೊಸ್ದು ಬಿ

ಱುಸರಂ ಕಾರ ಗುಡುಗಂ ಪುಟ್ಟಿಸೆ ತುಂಬುಗೊಳನೊಳಂಬುಗೊಂಡ ಮುದ್ದಂಟಿಕೆಗಳ್ಗೆ ಜಲಕ್ರೀಡೆಗೆ ಮನಮಂ ನೀಳ್ಕರಿಸುವ ದೇಗುಲಂಗಳಂ, ಮತ್ತಮೋದನೋದುವ ಶಾಸ್ತ್ರಮಂ ಕಲ್ವ ಪುರಾಣಮಂ ಕೇಳ್ವ ಇತಿಹಾಸಂಗಳನಱಿವ ವೇದಾಂತಮಂ ಬಗೆದು ಭಾವಿಸುವ ಕೀರ್ತಿಸುವ ವಿಪ್ರರ ಅಗ್ರಹಾರಂಗಳಂ, ಮತ್ತಂ ಕ್ಷತ್ರಿಯರರಮನೆಗಳಂ ಮತ್ತಂ ಪರದರಂಗಡಿಗಳಂ, ಮತ್ತಂ ಕೀಟರ ಗುಡಿಗಳಂ, ಊರು ಚೆಲ್ವಾಗೆ ಕಣ್ಗಂ ಮನಕಂ ಬಂದುದು.

ಇಂತಿಂತು ನೆಱೆ ಮೆಱೆದೊಪ್ಪುವ ತುಂಬಿದೂರ ಕೇರಿಗಳೊಳೊರೊಂದೆಡೆಯೊಳ್– ಅಂದು ಮಿಂಬಟಿಯಿಗೆಯಿಂ ಜೋಗದ ಜೋಹದ ಸಾಂತನಸಿಮಿಚರ್ಚುವ ಪದದೊಳ್ ತನ್ನೈದುಂ ಕಣೆ ಕಾದಿಗೆಲ್ವ ಕೈಗುಣಕ್ಕೆ ನೆರಂ ಬಾರದೆಂದು ತಱಿಸಂದು ಪಲವೆಡೆಯಿಂ ತಂದಂದವಾಗೆ ಕೂಡಿಟ್ಟ ಕೋಲ ಮೂಡಿಗೆಯ ನೂಱುಱುವಗೆಯ ಪೂಗಳಂಬಾಗೆ ಎತ್ತಿಪಿಡಿದಂಗೈಯ ನಸುಗೆಂಪಿಂ ಕಡೆಗಣ್ಣ ಕುಡುನೋಟವರೆಗರ್ಪಿಂ ಮೊಗದ ಬೆಳ್ನಗೆಯುಚ್ಚವೆಳ್ಪಿಂದೊಪ್ಪಂಬೂಸಿ ಬಣ್ಣಂಬಳಿದಂತುಂಟಾಗಿಸಿ ಬಿಡುಸರದ ಪೊಸಗಂಪಿಂಗವ್ವಳಿಸಿ ಮುಸುಱಿ ಮೊರೆವ ದುಱುದುಂಬಿ ದುಂಬಿಗಳ ಕಾಟಕ್ಕಳ್ಕಿ ಬಳ್ಕಿ ನೋಟದ ಬೇಟದ ಬೆಡಂಗನೊಲ್ದು ತೋಱಿ ಪಣಕಂ ಖಣಕಂ ಮಾಱುವ ಮಾಲೆಗಾರ್ತಿಯರ ಪೂವಿನಂಗಡಿಯಿಂ; ಮತ್ತಂ ತಲೆಮೊಲೆಯ ಮುಂಗುರುಳುಯ್ಯಲಾಡೆ ನಡುನೋಟದ ನಿಮಿರ್ದ ಕಂಗಳೆಸಮಂ ಚಳಿಸೆ ಮೊಗಂ ಬೆಮರಿಡೆ ಬಳ್ಮೊಲೆಗಳ್ ಕದಕ್ಕದಿಸೆ ಮುತ್ತಿನಗೊಂಡೆವಾವುಲಿ ತೊಂಗಲ್ತೊಗೆ ಕೆಂಬರಲೋಲೆ ಮಿಱುಗೆ ಬಳೆ ಘಲ್ಘಲ್ಲೆನುತುಲಿಯೆ ಅಸುಮೆಸೊಳೊತ್ತೊತ್ತಿ ಪಸಿನೀರನೆಱೆದೆಱೆದು ಪಚ್ಚೆಗಸ್ತುರದ ಪ್ರತಿಯುಂ ಸರಿಸುರಿದು ಸುಯ್ವ್ಯಾಲರ ನಱುಗಂಪನೊರೆದೊರೆದು ಬಾಪನ್ನಪಿಟಿಸಂ ತೀವ ಘಟ್ಟವಳ್ತಿಯರ ಗಂಧಿಗಪಸರದಿಂ; ಮತ್ತಂ ಬಿಡುನುತ್ತಿನ ಪಚ್ಚೆಪರಲ ಕೆಂಬರಲ ಕಮರ್ಣಿಗಲ್ಲ ಬಜ್ಜರಗಟ್ಟಿಯ ಚೆಂಬವಳದ ಸರದ ಪರಪಿದ ಪೊಂದಟ್ಟೆಗಳಂ ರಂಜಿಸ ಬೆಲೆವಣೆಗಾಗರಮೆನೆ ತೋಱಿಪ ರನ್ನವರದಂಗಡಿಯಿಂ; ಮತ್ತಂ ಲೆಕ್ಕಿಗರ ಲೆಕ್ಕದಂತು ಸೊನ್ನೆಯಿಂ ಕಣ್ಗೊಪ್ಪಿದುದು, ಗಗನದಂತು ಚೆಳ್ಳಿಯಿಂ ಮೆ

ಱಿಗಂ, ಕೆಯ್ದೊವಲನಂತು ಕಪ್ರೆರ್ನ್ನಿಂ ಸೊಗಯಿಸಿಯುಂ, ಪಲ್ಲವಾಧರೆಯ ಕೆಂಪುಟಿಯ ರಂಗಿನಂತು ಕಿಸುರಿಂ ರಂಜಿಸಿಯುಂ, ಬೊಂದಿಯಂತು ಸೀಸದಿ ನೊಂದಿಯುಂ, ದಿಟ್ಟಿಯ ಬಟ್ಟೆಗೈತರ್ಪ ಲೋಹಕಾರರ ಮನೆಯಿಂ; ಮತ್ತಂ ಹಚ್ಚಡದ ಹೂವಿನಂಗಿಯ ಪಟ್ಟೆಡೆಯ ಕಾಂಗಿನ ರಂಗಿನ ಚೆಂದಿರಗಾವಿಯ ಮಿಸುನಿಗಚ್ಚಿನ ಬಣ್ಣಸೀರೆಯ ದೂಸಿಗವರದರ ಮಱುಗೆಯಿಂ; ಮತ್ತಂ ತ್ರಿಸುಳಿಯಂತೆ ಮುಕ್ಕಣ್ಣನುಂ ತೊವಲ್ವೆದೆಯನುಂ ಮುಗಿಲಂತೆ ನೀರೊಡಲನುಮೆಸಿಪ ತೆಂಗಾಯಿಂ, ಮತ್ತಂ ಹರನೆಂತಂತು ಜಟಾಧರನುಂ ಹರಿಯೆಂತಂತು ಪೀತಾಂಬರಧಾರಿಯುಮಾಗಿರ್ಪ ನೀರುಳ್ಳಿಯಿಂ, ಮತ್ತಂ ಜೀರಿಗೆಯಿಂ, ಕೊತ್ತುಂಬರಿಯಿಂ, ಮೆಣಸಿಂ ಗುಳದಿಂ ಶರ್ಕರೆಯಿಂ ಚೆಲ್ವಾದ ಕೇರಿಯಂಗಡಿಯಿಂ; ಮತ್ತಮಿರ್ಕುಳಿಯ ತಂಡಸವ ಕತ್ತರಿಯ ಸುತ್ತಿಗೆಯ ಕೈವಾರದ ಕಂಬಚ್ಚಿನ ಕೊಱಿವೆಯ ತಗಲ್ಲ ಅರಸಮುಟ್ಟೊಟ್ಟಯಿಸಿರೆ ಕೊಟ್ಟಂ ಕೆಟ್ಟೆನೆಂಬೊಂದು ಸನ್ನೆಯ ಸಬುದಮೊಗೆವಂತಿರೆ ಬಡಿವ ಸೊನ್ನೆಗಾಱರ ಸಾಲೆಯಿಂ; ಮತ್ತಂ ಕೊಡಲಿಯಿಂ ಕಡಿವ ಉಳಿಯಿಂ ಕೀಸುವ ಕತ್ತಿಯಿಂ ಕೆತ್ತುವಾಣಿಯಿಂ ಬೆಟ್ಟಿನ ಕರಗಸದಿಂ ಕೊಱೆವ ಬಡಗಿಯರೆಡೆಯಿಂ; ಮತ್ತಂ ಕಾಯಿಸುವ ಕರಗಿಸುವ ಎಱೆವ ತಿದಿಯೊತ್ತುವ ಊರ್ದುವ ನೀರ್ಗುಡುವ ಬಡಿವ ಬಿಸುವ ಮಸೆವ ಸಣ್ಣಿಸುವ ನುಣ್ಣಿಸುವ ಸಾಣೆವಿಡಿವ ಕಮ್ಮಱರ ಮುಂಗುಡಿಯಿಂ; ಪುರಂ ಕಣ್ಗಿಂಬಾದುದು.

ಇಂತು ಸೊಬಗಿನ ಬೀಡಿನಂತೆ ಸಿಂಗರದ ನಾಡಿನಂತೆ ಸೊಗದ ನೆಲೆಯಂತೆ ಸೊಗಸಿನಾಗರದಂತೆ ಮಂಗಳದ ಮನೆಯಂತೆ ಸಲೆ ಸಂದು ನಾಡ ಪೆಣ್ಗಳ ಚೆಂದಳಿರಡಿಯ ಮೆಲ್ವೊಗರಿಂ ತೊಳಗಿ ಬೆಳಗುವ ಕೇರಿಯ ಬೀದಿಗಳಿಂ ಪೊೞಲ ಸೊಬಗೆಯರ ಕಳೆವೆರ್ಚಿದ ನಗೆಮೊಗದ ಕಾಂತಿಯಿಂ ಬೆಳರ್ತು ಮಿಱುಗುವ ಹರ್ಮ್ಯಂಗಳಿಂ ಪುರದ ಪುರಂಧ್ರಿಯರ ಪೊಂಬಚ್ಚಗೊಚ್ಚತಂ ತಳತಳಿಪ ಹಚ್ಚೆಯ ಪರ್ಬುಗೆಯಿಂ ಚಕಚಕಿಸುವ ನಲ್ಲೆಲೆಯಿಂ ರಾಜಿಪ ನಗರಮಂ ಕಣ್ದಣಿಯೆ ಕಂಡು ಶ್ರುತಕೀರ್ತಿಮನೋಹರಂ ನಿಜಸಚಿವನೊಳಿಂತಿದಾವ ನಾಡೆಂದು ಕೇಳ್ದಪೆ;—ಕೂರಾಳ್ಗಳ ಕಟ್ಟಾಣೆಯ! ಇಂತಿದುಕಣಾ! ಗೋಪ್ರಾಜಾಫಲದತ್ತಣಿಂ ಸಂತಾ

ನನುಂ ಪಡೆದ ಋತಂಭರರಾಜನಾಖ್ಯ ತೇಜಃಪ್ರರಮೆಂದು ಕೇಳಿಸಿದಂ.

ಆನುಡಿಗೆ ಸೌಮಿತ್ರಿ ಬೆಸವಂದಂಗೊಂಡು-ಎಂತು ಆರಾಯಂ ಗೋಸೇವೆಯತ್ತಣಿಂ ಮಗನಂ ಪಡೆದಂ? ಧೇನುಮಾಹಾತ್ಮ್ಯಮನಿತೊಂದು ಬೊತ್ತಿತೇಂ? ನೀಂ ಬಲ್ಲಂತು ಪೇಳೆಂಬುದುಮಿಂತು ವಚಿಸಿದಂ ಸಚಿವಂ. ಅದೆಂತೆನೆ:—

ಅಯ್ಯ! ಮುನ್ನಮೀನಾಡೊಡೆಯಂ ಋತಂಭರನೆಸರಿಂ ಪೆಸರ್ವೆತ್ತ ಭೂಭುಜನುಂಟು. ಬೋಳೆಯರೋಜನ ಜಾಣ್ಮೆ, ಚುಕ್ಕಿಯಱಿವು, ಜವನ ಜರ್ವು, ಜಕ್ಕರರಸನೈಸಿರಿ, ತನ್ನೊಳೊದವೆ ಮನುವಿನ ಮಾಗಱದೆ ನಡೆಯುತೆ ಮೃಗಣ್ಣನೋಲಗದ ಸೊಂಪಿಂಗಿಮ್ಮಡಿ ಮೀಱಿದ ಪೆಂಪಿಂ ಮೆಱೆದಂ. ಆದೊಡಮೀತಂಗೊಗೆತನದ ಗುಣ್ಪಿಂಗೆ ನೇರ್ಪಡುವೊಂದು ಬಱಿಯ ಬಳವಿಯ ಪುಟ್ಟಿನೊಂದು ಸೊಗಂ ತಾಱಿದುದು.

ಮಡಲಿಱಿವ ಬಾಳ್ವೆಳ್ಳಿಯ ಚೆಂಗುಡಿ ಸುರುಂಟಿದಂತೆ, ಸೊಬಗಿನ ನೆಲೆವನೆಯ ಮುಂಗುಡಿ ಮುರುಂಟಿದಂತೆ, ತುಂಬಿ ಪರಿವ ಕಾಟ್ಬಿರದ ಕಾಲ್ ಮುಱಿದಂತೆ, ಇಂಬಿನೊಡಲ ಪೊಸಜವ್ವನಂ ಸರಿದಂತೆ, ಇನ್ನೆಬರಂ ಕೊನೆವರಿದು ನೀಳ್ಕಿರಿಸಿದ ಬಱಿಯ ಬಱಿಯೀಗಳ್ ತನ್ನೊಳ್ ತಡೆದುದೆಂಬೊಂದು ಬಾಗುಳ ಪೆಱಸಿನಗವಟ್ಟ್ಯಗಳುಮೀಕತದೊಳೆ ಬಗೆಗೆಟ್ಟಿರ್ಪ ರಾಯನೋಲಗಕೊರ್ಮೆ ಜಾಬಾಲಿಮುನಿಪಂ ಬಿಜಯಂಗೈದಂ. ಆಗಳರಸನೈತಂದ ಮುನಿಯುಂ ಯಥೋಚಿತಮಾಗತಸ್ವಾಗತಂಗಳಿಂ ಕುಶಲಮುಂ ಬೆಸಗೊಂಡು ತಸುವಾಯಿಂ ಕಟ್ಟನ ನುಡಿಗತೆಯ ಪೊಱಿತ್ತನೊಳ್-ಕಿತ್ತಣಿಗಳ ಬಿತ್ತಗ! ಪಣ್ಣಿಲ್ಲದ ಮರನ ಬಾೞ್ತೆ, ತಣ್ಣೀರೊಸರ್ ಕುಂದಿದ ಕೊಳನ ನೆಗೞ್ತೆ, ಚಂದವನಿಲ್ಲದಿರುಳ ಗಗನದ ಚೆಂಗಂ, ಕಂದಂ ಪುಟ್ಟ ಮೆಱೆದೊಪ್ಪದ ಬಱಿಯುಂದಂ, ಸಂದ ಜಗದ ತೊಱೆಪಕ್ಕೆಡೆಗುಡದೇಂ ಪೋಕುಂ? ಅಂತುಮಲ್ಲದೆಯುಂ ಮಗನಂ ಪಡೆದಂಗೆ ಸಗ್ಗಗರ ಬಾಗಿಲಂ ತೆಱೆಯರೆಂಬರಲ್ತೆ! ಸಲ್ಮೆ ಮಿಗೆ ಪೆತ್ತ ಕುವರನ ಬಾಲಲೀಲೆಯಂ ಕಾಣದ ಕಣ್ಗಳವು ಪೀಲಿಯ ಕಣ್ಗಳಾಗವೆ? ಅಕ್ಕಟಾ! ಮಗನಂ ಪಡೆಯದೆ ನರಕಮುಂ ಪುಗುವೊಂದು ಭಾಗ್ಯಮುಂ ಬಿದಿಯೆನ್ನೊಳೊಡರ್ಚದುದೇ! ನೊಱಿನೇಂ? ಇಹಕಂ ಪರಕಂ ಪೆಱಗಾದ ಬೂತಾದೆಂ. ಅಯ್ಯ! ಮು

ತೇಂ ಬಟ್ಟೆ! ಸುಟ್ಟೆಸಿ ತೋಱು! ಎಂದು ನಿಜನಿಟಿಲತಟಸಂಘಟಿತಕರಸಂಪುಟನಪ್ಪುದುಂ; ಮುನಿಪನೊಲ್ಮೆಯಿಂ-ರಾಯ! ನೀನಿಂತು ಮಱುಗಲೇನಕ್ಕುಂ? ನಿನ್ನುರದದವಳಲಂ ಕೇಳ್ವ ನರರೊಳರೆ? ನಂಬಿದ ದೈವಕ್ಕೆ ಕೇಳಿಸು! ಆದೊಡಮೆನ್ನೀಬಗೆಗೆ ನೀಂ ಗೋವಂ ಸೇವಿಸಿದೊಡೆ ನಿನ್ನಭೀಷ್ಟಂ ಸಿದ್ಧಮಕ್ಕುಮೆಂದು ತೋಱುಗುಂ. ಮುನ್ನಂ ಮುತ್ತರಾಯರ್ಗಿಂತು ಸುರಭಿಯೊಲ್ದುದುಂಟು, ಎಂದು ಸಂತಯಿಸಿದಂ. ಮಗುೞ್ದರಾಯುಂ ಮುನಿಗೆ- ಗೋಮಾಹಾತ್ಮ್ಯಮಂತುಟೇಂ ಪಿರಿದೆ? ತನಗೊರೆ, ಎಂಬುದುಂ; ಜಾಬಾಲಿಯಿಂತು ಕಥಿಸಿದಂ:—

ಎಲೆ ಮಾರಾಯ! ಗೋಮಾಹಾತ್ಮ್ಯಮಂ ಬಣ್ಣಿಪೊಡೆನಗಮಳವೆ! ಮೆಯ್ಯ ನವಿರ್ಗಳೊಳೆಲ್ಲಾ ಬೇವರ್ಕಳೋರೊಂದು ನೆಲೆ; ಬಸಿಱೊಳೊಡಲೊಳೆಲ್ಲಂ ವಿಶ್ವದೋರೊಂದು ತಾಣಂ. ಇಂತಿರ್ಪಿನಂ, ನೀನೆ ಬಗೆ. ಆವನೊರ್ವಂ ನಿಚ್ಚಂ ಬಿಸಿಲೊಳ್ ಬಾಯಱುತ ಹಸುವಿಂಗೆ ನೀಱನೆಱೆವನವಂಗೈಸಿರಿ ಪರ್ಕುಂ, ಮೇವಿತ್ತು ಕಾವಂಗೆ ಪಾಲ್ಮೊಸರುಣಿಸಿನ ಪುಣ್ಯಲೋಕಮಕ್ಕುಂ; ಮೆಯ್ಯ ನೊಣನಂ ಸೋವ, ಶೃಂಗಂಗಳೆಡೆಯಂ ತುಱಿಪ, ಮನುಜಂಗೆ ಬಂದ ಬಿಯದಿ ತಪ್ಪುಗುಂ; ಮತ್ತಮೆತ್ತಾನುಂ ಮೇವಂ ನಿವಾರಿಪ ನರಂ ನರಕಮಂ ಪೋಕುಂ. ಇದಕ್ಕೊಂದಿತಿಹಾಸಮುಂಟೆಂತೆಂದೊಡೆ:—

ಮುನ್ನಿನ ದಿನಂಗಳೊಳೊರ್ಮೆ ಜನಕರಾಜಂ ಸಗ್ಗಿಗರ ನಾಡಂ ಕಾಣ್ಬೊಂದು ಬಗೆಯೊಳ್ ಯೋಗದೊಂದು ನೆರವಿನ ಮೈಮೆಯೊಳೊಡಲನುೞಿದು ಬಂದ ನಡೆನಾಡಮನಡರ್ದು ಪೋದಂ ಗಡ! ಇಂತಿರೆ ಪೋಪ ಬಟ್ಟೆಯೊಳ್ ತನತನಗೆ ನರಲ್ವ ಪೊರಳ್ವ ಮುಱುಗುವ, ಬೇನೆವಡುವ ಪೊದೆದಾಡುವ, ಉಬ್ಬಸಂಬಡುವ, ಬೇವ, ಪೊತ್ತುವ, ಕುದಿವ, ಸೀಕರಿವ್ರೇಪ, ಕೊಱೆವ, ನಾಱುವ, ಸೋರುವ, ಕಾಱುವ, ನವೆವ, ಸವೆವ, ಕಾಲ್ ಮುರುಂಟಿದ, ಕೈಸುರುಂಟಿದ, ತಲೆ ಬಿರಿದ, ಕೀಲ್ ಮುಱಿದ, ಕಣ್ಣೊೞಿದ, ಸೂಲದ ಮೊನೆಯೊಳೇಱಿದ ಕಲ್ಲಾಲೆಯ ಬಸಿಱೊಳ್ ಸಿಲ್ಕಿದ, ಪರ್ದುಗಾಗೆಗಳ ಬಾಯೊಳಾದ, ಕೀವಿನ ಮಡುವಿನೊಳ್ ಬಿದ್ದ, ಕೂರ್ವಾಳ ತುದಿಯೊಳ್ ಜೋಲ್ದ, ತನಿಗೆಂಡದ ಬೇಹಿನುರ್ಕಿನ ಪತ್ತುಱಿಯಪ್ಪುಗೆ

ಯ ತಳ್ತೆಯೊಳಿರ್ದ ಪೇಸಿಕೆಯು, ಜೋಡೆಗರ ಪಾಪಾತ್ಮರ ಬಾೞ್ವನೆಯೆನಿಪ್ಪ ಯಮಲೋಕಮಂ ಮುಟ್ಟಿಯಿಸಿ ಬರ್ಪುದುಂ; ಪಾವನಮೂರ್ತಿಯೆನಿಪ್ಪ ರಾಯನತ್ತಣಿಂ ಬಳಸಿವರ್ಪ ಗಾಳಿಯು ಸೋಂಕಿಂ ನರಕಿಗಳೆನಸುಂ ಚೇತರಿಸಿ ತಣ್ಪುಗೊಂಡು ಕಟ್ಟುಬ್ಬರದ ಬೇನೆಯುಂ ಸೈರಿಪಂತಿರಾಗೆ ಮುಂತು ಸಮಂತು ದಿಟ್ಟಿಸಿ ಐದಿವರ್ಪ ನಡೆಮಾಡಮಂ ಕುಱಿತು ಕೂಗಿಕ್ಕೆ– ಎಲೆಲೆ! ಸೈಪಿನರಮನೆಯೆ! ಎಲೆಲೆ ಪುಣ್ಯವಂತನ ನೆಲೆವೀಡೆ! ಪೋಗದಿರ್ ಪೋಗದಿರ್. ಇನಿತೊಂದು ವೇಗಮೇಂ? ನಿನ್ನತ್ತಣಿಂ ತೀಡುವ ಗಾಳಿ ಸೋಂಕಲೊಡಮೆಮ್ಮ ನೋವುಂ ಬೇಹುಂ ಪಿರಿದುಂ ಸರಿದುದು. ಇಂತಿರೆಮ್ಮ ನೋವದೆಮ್ಮ ಭಿನ್ನಪಮನಾಲಿಸದೀ ಕುತ್ತದ ತರಿಸಕ್ಕೇನಾನುಂ ಮರ್ದನೀಯದೆ ಬಿನ್ನನೆ ನಡೆವ ಬಲ್ಮೆಯಿದೇನೋ! ನಿನಗಾನುಮೆಮ್ಮೊಳ್ ಮುನಿಕಂ ಪುಟ್ಟಿದೆ? ಹರಹರಾ! ಎಂದು ಕೈಯೆತ್ತಿ ಕರೆದರ್. ಆಗಳ್ ರಾಯನಿಂತೀ ತೆಱನ ಮೊರೆಯುಂ ಕೇಳ್ದು ಬಿಸವಂದಂಗೊಂಡು ವಿಮಾನಮಂ ತಡೆದು ಪಿಂತಿರುಪಿ ಮುಟ್ಟಿಯಿಸಿ ಬಂದು ಶೈಮಿನೀಪುರದ ಮುಂಬಾಗಿಲೊಳೞಿತಂದು ನೋೞ್ಪಿನ್ನಂ ಧರ್ಮರಾಜಂ ತಳ್ವದೈತಂದಿದಿರ್ಗೊಂಡು ತಕ್ಕಂತು ಸನ್ಮಾನಿಸುತುಂ ಮತ್ತಮಭಾಗ್ಯತನೊಳ್–ಏನಯ್ಯಾ ಎತ್ತಣಿಂ ಬರವಾಯ್ತು? ನಿಮ್ಮನ್ನರ್ಗೆಮ್ಮೀ ನಾಡೆಡರ್ಗದಲೇ! ಏಂ ಬಟ್ಟೆದಪ್ಪಿ ಬಂದಯ್. ಆವಗಂ ನಮೆವ ಪಾತಕಿಗಳ ಯಾತನೆಯ ನರಕಮಿತ್ತಲಿತ್ತಲ್. ಪೆಱರ ಸಿರಿಯುಂ ಕವರ್ವ, ಪೆಱರ ಪೆಂಡಿರ್ಗಳುಪ್ಪುವ, ಪೆಱರಂ ಕೀೞ್ಮಾಡುವ, ಪೆಱರೊಡವೆಯುಮಂ ಕಿಡಿಸುವ ಕಡುಕೂಱರ್ಗೆ ನೆಲೆವೀಡು. ಆವುಗಳಂ ಕೊಲ್ವ, ಪಾರ್ವರಂ ಪಗೆವ, ಪೞಿನುಡಿಯುಂ ಪೞುವ, ಜನ್ನಕ್ಕೆಡರ್ಗೆಯ್ವ, ಪೆತ್ತರಂ ಪತ್ತುವಿಡುವ, ಗುರುಗಳನೇಡಿಸುವ ಪಾಪಿಗಳ್ಗೆ ಬಾೞ್ವನೆ. ಇಂತಿಪಂ ನೀಂ ಪುಲಗಕ್ಕುಮೆ? ಕಾಣಲಕ್ಕುಮೆ? ಎಂದಾಡಿದಂ. ಅಂತಪ್ಪುದುಂ ಜನಕಂ ಜವನೊಳ್–ಎಲೆ ಧರ್ಮರೂಪ! ಇಂತೀ ಪೊೞಲ್ ನರಕಮೆಂದಱಿತೆನಿಲ್ಲ; ಪೆಱತೇನಾನುಮಕ್ಕುಮೆಂದೇ ಬಗೆದೆಂ. ಅಂತಾಂ ಬಗೆವಿನಂ ಲೋಗರ್ಗೆಂತೆಂತೊ ಬನ್ನಬೇನೆಗಳೊದವಲೊಡಂ ನರಳ್ವೊಂದು ಮೊರೆಗೇಳ್ದು ಬಂದೆಂ. ನೋೞ್ಪೊಡಿಂತಿದು ದುಸ್ತರಂ ನರಕಂ! ಎಲೆಲೆ! ನೀನುಮಂತಿವರೊಳೇಂ ಮುನ್ನ

ಕಂಗೊಳ್ಳಿಯು! ಛೀ ಪೋಕೆ! ಇವರಂ ಕೊಂಡೇಂ ಕಜ್ಜಂ? ಜನ್ಮಾನುಂ ಬಿಡ! ಎಂದು ನುಡಿವನ್ನೆಗಂ; ಯಮಂ– ಓ! ಬಿಟ್ಟಿಯಾಳ್ಗಳಂ ಬಿಟ್ಟಂತಾಗದೆ! ಎಂತೀತಂಗಳ್ ಪೋಗಲಾರ್ಪರ್. ಇನ್ನುಂ ಪಾಪಂ ಮುಡಿದುದಿಲ್ಲಮೀಗಳೇವೆಂ! ಇದೆ ಕೇಳೀತಂ ಮುನ್ನಮೊರ್ವನಂ ಪಾರ್ವನಂ ಕೊಂದ ಬೊಮ್ಮೆತ್ತಿಗಾಱಿಂ; ಈಗಳದೆ ಎರೆಯಾದಂ. ಈತಂ ಪೆಱನಂ ನಂಜನೂಡಿ ಮಡಿಪಿದಂ; ಅಂತದಱಿನಲ್ಲಿ ಕಾಳೋರಗಂಗಳ್ಗೆ ತುತ್ತಾದಂ. ಮೇಣೀತಂ ಪರಕಾಂತೆಯಂ ಕಾಮಿಸಿದನಂತದುಕಾರಣದಿಂ ಕಾದುರ್ಕಿನ ಪೆಣ್ಬೊಂಬೆಯ ತೆಕ್ಕೆಯೊಳಾದಂ. ಮತ್ತಮೀತಂ ಪಗಲ್ಗಳನೀತನಂ ಸಮ್ಮಕಂಕರಿಯಿಂ ಬಡಿವರೆಂದು ಬೇಱೆವೇಱೆ ತೋಱಿದಂ. ಅದರ್ಕಾರಾಜಯೋಗಿ ಈನರಕಿಗಳೆಂತಾನುಂ ಮುಕ್ತರಾಗರೆ! ಅಕ್ಕಟ! ಇಂತಿವರ ಬಾಳ್ಗೇಡಂ ಕಂಡುಮೆಂತಾಂ ಪೋಗೆನೊ! ಏನಾನುಮೊಂದುಪಾಯಮಂ ತೋಱಲಾಱಾ! ಎಂಬುದುಂ; ಸೂರ್ಯಸುತಂ–ಅಂತಪ್ಪೊಡೆ ನೀನಿನ್ನೆಬರಂ ನಿಚ್ಚಂ ಶ್ರೀರಾಮನಂ ಮೂವಗೆಯು ನಿಚ್ಚಟವಕುತಿಯಿಂ ತುತಿಸಿದ ಪುಣ್ಯವದೆಯಸಿತ್ತೊಡೆ ಇವರ್ ಮುಕ್ತರಪ್ಪರ್. ಸಂದೆಯಂ ಬೇಡವೆಂದಂ. ಒಡನೆಯೆ ಜನಕಂ ತನ್ನ ಪುಣ್ಯದೊಳರ್ಧಮಂ ಧಾರೆಯನೆಱೆವುದುಂ ಪಾಪಿಗಳೆಲ್ಲರ್ ಬಿಗಿವಟ್ಟ ನರಕಬಾಧೆಯಿಂ ಬಿಡುವಟ್ಟು ಸಂತಸದಿಂ ಶ್ರೀರಾಮನಂ ಪಾಡುತುಂ, ಜನಕರಾಜನಂ ಪೊಗಳುತುಂ, ಜವನಂ ನೆನೆಯುತುಂ, ಬದಿರ್ಲರ ನಾಡಂ ಪುಗುತಂದರ್.

ಕೇಳೆಲೆ ರಾಯ! ರಾಮನಾಮಸ್ಮರಣೆಯೊಂದು ಪೆರ್ಮೆಗೆ ಬೆಱಗುವಟ್ಟು ಮಿಥಿಲೆಗೊಡೆಯಂ ಜೈಮಿನಿಯೊಡೆಯನೊಳ್–ಪಾಪಿಗಳಲ್ಲಿ ಪುಣ್ಯಾತ್ಮರ್ ನರಕಕ್ಕೈತರ್ಪರಿರರೆಂದಾಗಳ್ ಪೇಳ್ದೆಯಲ್ತೆ. ಅಂ ಪುಣ್ಯಾತ್ಮನೆಂಬೆಯಂತಿರೆಯುಮಿಲ್ಲಿಗೇಕೆತದಿನ್ನೈತಂದೆಂ, ಪೇಳೆಂಬ ರಾಯಂಗೆ ನಸುನಗೆಯೊಳ್–ನೀಂ ಪುಣ್ಯಾತ್ಮಂ ಸಾಜಮಾದೊಡಂ, ಪೂರ್ವದೊಳೊರ್ಮೆ ತಾಂ ತನಗೆ ಮೇವ ಪಸುವಂ ನಿವಾರಿಸಿದಯ್. ಅದುಕಾರಣದಿಂ ನಿನಗಿಂದು ಎಮ್ಮ ಪುರದರ್ಶನಮಾಯ್ತು. ಇಂತುಟಲೆ ಧರ್ಮಸೂಕ್ಷ್ಮಂ. ಗೋಮಾಹಾತ್ಮ್ಯಮಂ ನೀನಱಿಯಾ? ಎಂದು ನುಡಿದಂ.

ಆನುಡಿಗೆ ತಲೆಯನೊಲೆದು ಕೈಮುಗಿದು ಮುಂ ತೆರಳ್ದಂ ಗಡ!

ಇಂತು ಮಱೆಗೊರ್ಮೆಯಾದೊಡಂ ಗೋವನೆಬ್ಬಿಟ್ಟಿದ ಜನಕ ರಾಜಂಗಂ ನರಕದರ್ಶನಮಾದುದೆಂಬೆಡೆಯೊಳ್‌– ಆಕಳಂ ಕೊಲ್ವ ನೋಯಿಸುವ ಕೀಳಿರ್ಗೆನಾವ ಬಾಳ್ಕೆಯೊ? ಮೇಣ್ ಭಕ್ತಿಯಿಂ ಧೇನುವಂ ಸೇವಿಪ ಭಾವಿಪ ಮಾನವರ್ಗೆ ಮನೋರಥಂ ಸಿದ್ಧಿಪ್ಪದೇಂ ದೊಡ್ಡಿತೊ? ಮನುಕುಲದ ಮುನ್ನಿನ ರಾಯರ್ ಗೋಪೂಜಾಪ್ರಭಾವದತ್ತಣಿಂ ಪುತ್ರರಂ ಪಡೆದುದುಂಟು. ನೀಂ ಕವಲ್ಮನಮನುಳಿದು ಗೋವಂ ಪೂಜಿಸೆಂದು ವಿಧಿಯನೇರ್ಪಡಿಸಿ ಜಾಬಾಲಿ ತಾಂ ಬೀಳ್ಕೊಂಡಂ.

ಶತ್ರುಘ್ನ! ಇಂತು ಜಾಬಾಲಿಯೊಂದುಪದೇಶಮಂ ಗುರೂಪದೇಶಮೆಂದೇ ಬಗೆದು ಋತಂಭರಂ ದೈವನ್ಯಸ್ತನಿಜಭಕ್ತಿಭರಂ ಸುಲಕ್ಷಣಲಕ್ಷಿತಮಾದ ಆವನಾಗಳುಂ ಸೇವಿಸುತುಮಿರ್ದಂ. ಕಟ್ಟಕಡೆಯೊಳ್ ಸಲ್ಗೆಯ ಸುರಭಿ ರಾಯನ ಭಕ್ತಿಗೊಲ್ದು "ಪುತ್ರವಾನ್ ಭವ" ಎಂದು ದೇವವಾಣಿಯಿಂ ಪರಸಿ ತನ್ನ ಧೇನುಲೋಕಮಂ ಸಾರ್ದುದು.

ಮತ್ತಮಾರಾಯುಂ ತನ್ನಂ ಪರಸಿದ ಧೇನುವಿನೊಲ್ಮೆಯಂ ನೆನೆನೆನೆಯುತಿದಿರ್ನಂಬಿಯುಂ ಕೆಲವಾನುಂ ದಿನಕ್ಕೆ ತನ್ನರಸಿಯೊಳ್ ಸತ್ಯವಂತನೆಂಬೊರ್ವ ಮಗನಂ ಪಡೆದು ಕೃತಕೃತ್ಯನಾದಾರಾಯುಂ ಪೊಸಜವ್ವನದ ಮುಪ್ಪುಗುವರನೊಳ್ ರಾಜ್ಯಭರಮನೊಪ್ಪಿಸಿ ತಾಂ ತಪಸ್ಸಾಮ್ರಾಜ್ಯಮಂ ಸೂಱೆಗೊಂಡಾಳುತುಮಿರ್ದಂ.

ಎಳನೇಸಱ ಪೊಸವೆಳಗಿಂಗೆ ಸೊಂಪೇಱಿ ಸಳನಳಿಪ ತಾವರೆಯಂತೆ, ಕಡುಸುಗ್ಗಿಯ ಭರಕೆ ಕೈನಂದು ಕೊನೆವೆರ್ಚುವ ಮಾಮರನಂತೆ, ತಕ್ಕಿನ ಸೋನೆಯ ಮೆಲ್ನೀರಿಗೆ ಸುಱಿಪಿಟ್ಟು ಚಳಚಳಿಪ ಪೊಂಬಾಳೆಯಂತೆ, ಕುವರಂ ನವಯೌವನದೊದವಿಂಗೆ ನೆಱೆವೆಱೆಯಂತಿರೆ ತುಂಬಿ ತೀರಿದೊಂದು ಮೆಯ್ಸಿರಿಯಿಂ ಸೊಗಯಿಸಿದನಪ್ಪುದುಂ; ಚೆನ್ನಿಗರಾಯುನಂದದ ಸಿಂಗರದ ಗಾಡಿಗೆ ಸೋಲ್ತು ಬೀರಸಿರಿ ತಾಂ ತೋಳನೇಱಿದಂದಳ್. ಇಂತಿರೆ ಸತ್ಯವಂತಂ ತನ್ನ ಪೆಸರಂ ಪೋಲ್ವಂತು ಸತ್ಯಧರ್ಮದಾಂಕೆಯೊಳ್ ನಿಂದು ಶೇಷನ ತಲೆವೊಱೆಯು ತಿಣ್ಣದ ತಿರೆಯನೊಂ

ಟೆ ಪೆಗಲೊಳಾಂತು ಗೆಲ್ಲವೆಣ್ಣಂ ಬಾಳ ಮೊನೆಯೊಳಿಱಿಸಿ ತನ್ನೊಂದೇ ಅಱಂಜಸನ ಪೆರ್ಚುಗೆಯ ಬೆಳ್ವಳಗಿಂ ಬಾಂಬಟ್ಟೆಯ ತುಂಬುವೆಱೆಯುಂ ಕಂದಿಸಿ ಕುಂದಿಸಿದಂ.

ಎಲೆ ಅರಸ! ಈಮಹಾತ್ಮೆಯಿನೊಪ್ಪುವ ತೇಜಃಪುರದ ರಾಜನಾಗಳುಂ ಶ್ರೀರಾಮನನಾದಿದೈವಮೆಂದೇ ಬಗೆದು ಸೀತಾನಾಯಕನನೆ ಭಕ್ತಿಯಿಂ ಭಜಿಸಿ, ರಘುವರನ ಲೀಲೆಯನೆ ಕೇಳ್ದು, ರಾವಣಾಂತಕನಂ ಕಣ್ಣಾಱೆ ನೋೞ್ಪೊಂದು ಬಯಕೆಯೊಳೆ ಇರ್ದಂ. ಇಂತಿವು ಗೋಪೂಜೆಯ ಮಾಹಾತ್ಮ್ಯಮನತ್ತಣಿನೊದವಿ ಬಂದ ಭಾಗ್ಯಂ.

ಕಾಂತೆ! ಅಂತು ತಂತಮ್ಮೊಳ್ ನುಡಿಯುತಿರ್ಪುದುಂ; ಮುಂದೆಸೆಯೊಳ್ ನಡೆವ ಹಯಮೂರ ಕೇರಿಯ ಜನಂ ಬೆಱಗುವಡೆ ನೆಟ್ಟನೆ ಪುರಮಂ ಪುಗುತಂದುದು. ಆಗಳ್ ಪೊೞಲ ಕಾಪಿನಾಳ್ಗಳ್ ಪೊಱನಾಡ ಕುದುರೆಯಂ ಪಿಡಿದು ತಮ್ಮಾಣ್ಮಂಗೊಪ್ಪಿಸಿದರ್. ಅಂತಾಗೆ ಸತ್ಯವಂತಂ ಬಂದು ಬಂದಿಯ ತುರಂಗಮದ ಪಣೆಯ ಪತ್ರದೊಳ್ ಬರೆದ "ರಾಮ" ಎಂಬೆರಡಕ್ಷರಂಗಳನೋದಿಯುಂ ಸಂತಸದ ನವಿರ್ ಗುಡಿಗಟ್ಟೆ ಹಯದ ಬೆಂಬೞಿಯೊಳ್ ಬಂದ ಶತ್ರುಘ್ನನಂ ಕಾಣ್ಬೊಂದು ತವಕದಿಂ ತನ್ನ ಪರ್ವೆರಸಿ ಚಾವಡಿಯಿಂ ಪೊಱಮಟ್ಟು ಇದಿರ್ಗೊಳಲ್ಕೆಂದು ನಡೆತಂದಂ. ಇಂತು ಪಗಲ ಕೈದೀವಿಗೆಯ, ಮಕರತೋರಣದ, ಟೆಕ್ಕೆಯದ, ಬೆಳ್ಗೊಡೆಯ, ಪೊಂಗಟ್ಟಿಗೆಯ, ಪುಲಿಮೊಗದ, ಚೌರಿಯ, ಬಿಜ್ಜಣಿಗೆಯ, ಪಡಪದ, ಜವಳಿಮದ್ದಳೆಯ, ಕಾಳೆಯ, ಪಂಚವಾದ್ಯದ, ಬಿರುದಿನ ಬಾವುಲಿಯ ಸಡಗರದಿಂ ಬಂದು ಶತ್ರುಘ್ನಂ ಮುಂತಪ್ಪರ್ಗೆ ಕಾಣಿಸಿಕೊಂಡು ಮೆಲ್ನುಡಿಯಿನುಪಚರಿಸಿ ಬಿಡದೆ ಅವರಂ ತನ್ನರಮನೆಗೆ ನಡೆಯಿಸಿ ಸಮ್ಮಾನಿಸಿ ಮತ್ತಮಡಿಗಡಿಗೆ ಶ್ರೀರಾಮಕಥಾವಿನೋದಂಗಳಂ ಕೇಳ್ದು ತನ್ನ ನಾಡಂ ರಾಘವಂಗೊಪ್ಪಿಸಿ ಸರ್ವಗರ್ವಮುಡುಗೊಱೆಯನಿತ್ತು ತನ್ನ ಪಡೆವೆರಸು ಹಯರಕ್ಷಣಾರ್ಥಂ ಶತ್ರುಹಂಗೆ ನೆರವಾಗಿ ತೆರಳ್ದಂ.

ಇಂತಪ್ಪುದುಂ ಲವಣಾಂತಕಂ ರಾಯಗುವರನ ಭಕ್ತಿಗಂ ಬಗೆಗಂ ಬಗೆಮಿಗೆ ಮೆಚ್ಚಿ ನಾಡೊಡೆತನಮನಾತನ ಪುತ್ರಂ ರುಕ್ಮನೊಳ್

ತ್ತು ಕಾಣ್ಕೆಯುಂ ಕೈಕೊಂಡು ಸಸೈನ್ಯಂ ಸಮಹಿತವೈಭವಂ ಪೊಱಮಟ್ಟಂ.

ಎಂಬಲ್ಲಿಗೆ

ತೇಜಃಪುರವರ್ಣನಂ ದ್ವಾದಶಾಶ್ವಾಸಂ

ಸಂಪೂರ್ಣಂ.

---

## ತ್ರಯೋದಶಾಶ್ವಾಸಂ.

ಎಲೆ ಎನ್ನ ಮೋಹದ ಗಿಳಿಯೆ! ಅಲ್ಲಿಗಲ್ಲಿಗೆ ಅಡಿಗಡಿಗೆ ಬಂದಿಱಗುವಱಕೆಯ ಬಲ್ಲಾಳ ಸಾಮಂತರಾಯರ ಮುಂಗಲೆ ಸುಚ್ಚಪೊನ್ನ ಪೊಚ್ಚಪೊಸ ಬಾಸಿಗದ ಮುತ್ತಿನ ಗೊಂಡೆಯ ತುಱುಗುವೆಳಗಿಂ ಪೊರೆಯೇಱಿವ ತನ್ನಡಿದಾವರೆಯ ಮೆಲ್ಪೊಗರಿನವರವರರವೆಂಡಿರ್ಕೈಬೆದಾೞಿಯುಂ ಬಣ್ಣವೆರ್ಚಿಸುತುಂ, ತನ್ನೊಳ್ಕೆ ಕೇಣಿಗೊಂಡ ಗೆಲ್ಲವೆಣ್ಗೆ ಪೆರುಡಿಂ ಮೀಱಿಪ್ಪೋಪ ಜಸಮ್ಮೋಸಜವ್ವನೆಯ ಪಾಱುಗೆಯ್ತಿರವಂ ತೋಱುತುಂ, ಬರ್ಪ ಶತ್ರುಘನ ಮುಂಬೆಸೆಯೊಳ್ ನಡೆವ ಪೊನ್ನ ಜಾಳಿಗೆಯ, ರನ್ನದ ಬೊಕ್ಕಸದ, ಸಾಯಿರಸಾಯಿರ ಲೆಕ್ಕದ ಪೇಱೂಟದಾನೆಗಳೊಟ್ಟೆಗಳೆತ್ತುಗಳ ಸಾಲ ಮುಂಗುಡಿಯೊಳ್ ತಂತಮ್ಮ ಸೇನೆವೆರಸೈದಿ ಮರ್ಪ ನಾಡನಾಡ ರಾಯರನೊಡಗೂಡಿ ಪುಷ್ಕಲಾದಿಸುಭಟರ್ ಕುದುರೆಯ ಬೆಂಬಳಿಗೊಂಡು ನಡೆಯುತಿರಲೊಡಮಾಗಳ್—

ನೀಲಮೇಘಂ ಸುರಿವಂಜನವೃಷ್ಟಿಯೊಬ್ಬುಳಿಯೋ, ಅಂದಂದು ದೇವರ್ಕಳೊಳಿದಿರ್ಚಿ ಮಣ್ಮುಱಿಪ್ಪೋದ ರಕ್ಕಸರೊಳವಗೆಯ ಪಾಪದ ಮೊತ್ತಮೋ ಎನೆ ತಾಂ ತನಗೊಮ್ಮೊದಲೊಳೆತ್ತಂ ಪರ್ವಿ ಕರ್ಗತ್ತಲೆ ಮುಸುಂಕಿದತ್ತು. ನಡೆಗೆಟ್ಟುವು ಕರಿ, ಬಟ್ಟೆಗೆಟ್ಟುವು ಹಯಂ; ಮುಂದುಗೆಟ್ಟುದು ಪದಾತಿಗಳ್; ದೆಸೆಗೆಟ್ಟುವು ರಥಂಗಳ್; ಕಣ್ಗೆಟ್ಟುವು ಜಾಣೆಯ ರಾಯುದಱಿಂ; ಮತಿಗೆಟ್ಟರ್ ಪಡೆವಳ್ಳರೆಲ್ಲರ್.

ಅಸಿತಪೊಳೆ ಕವಡುಗಲ್ತಲೆ ಮಾಸಲೊಡಂ ಮುಸುಂಕಿದ ಲೋಕವ ಮರುಳ್ಗೆ ಮೊಯಡಂಗಿದ ಜೋಗಿಯ ಮನದ ಸಿಮ್ಮ್ರಳಿಕೆಯಂತಿರೆ ದೆಸೆಯೆತ್ತಂ ನಿರ್ಮಲಮಾದುದು. ಆಗಳ್ ಸಿದ್ರ್ಯಿನೆಚ್ಚಿಱದಂತು ಕಣ್ಗಟ್ಟಂ ಪೆಱಗಸ್ಸ್ರದುಂ, ಪ್ರಾಲಂಬುಗಟ್ಟು ಕಣ್ಬಟ್ಟು ಬೆಬ್ಬಳೆವ್ರೋಗಿ ತಂತಮ್ಮ್ರೊಳ್ ಮಾಯೆಯ ಮಾಟಮಂ ಮಾತುಗುಡುತೆ ಜನ್ನಗುದುರೆಯಂ ಕಾಣದಿರೆ, ಬಿಸವಂದಂದಾಳ್ದು ಮತ್ತಂ ಪಜ್ಜೆಪಜ್ಜೆಗೆ ತಕ್ಕಱದು ಬಗೆಗುಂದಿ ಕಂಡರಂ ಬೆಸಗೊಳುತುಮಂಡಲೆದು ದೆಸೆದಿರಿಯುತುಮಿರ್ಕೆಲನೊಳಱಸುತುಂ, ಸಂದಿನೊಳ್ ಪ್ರಡುಕುತ್ತುಂ, ಗೊಂದಿನೊಳ್ ನೋಡುತುಂ, ಪಱುವಂ ಪ್ರಗುತುಂ, ಕೊಳನಂ ಕದಡುತುಂ, ಕಂಡುಂ ಕಾಣಿಸದಿರೆ ಕರಂ ಕನಲ್ದು ಶತ್ರುಹಂ ಶ್ರೀರಘುಕುಲವಾರ್ಧಿಪೂರ್ಣಶಶಾಂಕನ ಶ್ರೀರಾಮಚಂದ್ರಮನ ಯಜ್ಞೀಯತುರಂಗಮಂ ಕಳ್ದುಯ್ದವನಾವನಾತನಸೀಗಳೆ ಅಜನರಮನೆಯಂಗಣಕ್ಕೆ ಮೆಂಟೆಯನಾಗಿಸುವೆನೆನುತೆ ಹೂಂಕರಿಸುತೆ ಬಿಲ್ಗೊಂಡು ಬೀದಿವರಿಯುತೆ ಪ್ರಱಮಟ್ಟಂ. ಅಸಿತಜೊಳೇಲವಣಾಂತಕನ ಪೆಂಪಿನ ಕೆಂಪಿನ ಬೀರದ ಜವ್ವಗೆಂದೆ ಕಾಣ್ಗೆಟ್ಟು ಅಂಬರದತ್ತಣ್ಗೆ ಸಂದ ಪ್ರಸಿಯ ಕಳವಿನ ಬಲ್ಪಡೆಯೆನೆ ತೋರ್ಪ ಮಾಯಾವಿಡಂಬನದಿಂ ಕುದುರೆಯಂ ಕಳ್ದುಯ್ವ ವಿದ್ಯುನ್ಮಾಲಿವೆಸರ ರಕ್ಕಸನ ಪೆರ್ಗಡೆತುಬ್ಬಿದತ್ತು. ಇಂತಾಗಲೊಡಂ ಬಲ್ಪಿನ ತೋಳ್ ತೋಟಿಯ ಪಡೆವಳರೆಲ್ಲರ್ ತಂತಮಗೆ ಹೂಂಕರಿಸಿಯುಂ, ಬೊಪ್ಪರಿಸಿಯುಂ, ನಸೆಮಾಡಮನಡರ್ಮ ಹಯಮನುಯ್ವ ಮರ್ಬಗನಂ ತಱುಬಿ ಅಱುವಡೆಯುಂ ಬಱಿಕೆಯ್ವ ಪವಣಾರಾಯನ ಕಟ್ಟಾಣತಿಯಂ ಪಾಱುತಿರ್ಪುದುಂ; ಮಧುಪ್ರತ್ರಶತ್ರು, ತನ್ನವರಂ ಕಂಡು, ಎಮ್ಮವರೊಳಿಂತಪ್ಪ ಮಾಯೆಗಾಱನಿಂ ಮೇಗ್ ಕುದುರೆಯಂ ಮಗುಳ್ಚುವ ಮೊಯ್ಗಲಿಯಾವನೆನ್ನಿದಿರ್ಗೆ ಬರ್ಕೆ! ಎಂದು ಕೇಳಿಸಿದಂ.

ಆಗಳವರೊಳೊರ್ವಂ ಮೇಲಱಿಕೆಯ ಕೈದುಕಾಱರ ಬೀರಂ ಪುಷ್ಕಲಂ ಶತ್ರುಹಂಗೆ-ಬೊಪ್ಪ! ತಪ್ಪದರಿನಿಶಾಟನಂ ಸಮಂತು ಚುಕ್ಕಿಯ ಕವಡುಮಾಯೆಯ ಪ್ರೌಲನ ರಕ್ಕಸವಶೆಯನಿದಿರ್ಚಿ ಬಾರಿಸದೆ ಬೆಂಗೊಟ್ಟೆನಾದೊಡೆ ಪಱೆವಾತಂ ಪಱುವ ಕೂಬಿನೊಂದು ಗತಿ ತನ್ನೊಳಕ್ಕೆ.

ಎಂದು ಪೂಣ್ದಂ. ಅನಿತಱೊಳ್ ಸಿಂಗನೆರ್ದೆ*ಯ ಸಂಗರರಂಗದ ಪ್ರತಾಪಾಗ್ರ್ಯಂ-ಅಯ್ಯೊ ಮಾರಾಯ! ಇಂದು ಬಂದು ಸಂಧಿಸಿದ ದಾನವನೊಳ್ ಪೊಣರ್ವರ್ ಜಡಿದು ಸೊಪ್ಪುಸೊವಡಪ್ಪಿನೆಗಂ ಬಡಿಬೆಟ್ಬಿಟ್ಟದೆ ಮಾಣ್ದನಾದೊಡೆ ಕಳ್ವ, ಕಳ್ಗಡಿವ, ಸಟೆವಟಮಟಿಸಿ ಪೆಱರೊಡವೆಯುಂ ಕವರ್ವ ಪಾತಕಿಯೊಂದು ನಿಟ್ಟುರದ ಕಟ್ಟುಬ್ಬಸದ ಬವಣೆ ತನಗಕ್ಕೆ, ಎಂದು ಸೂರುಳ್ದಂ. ಮತ್ತಮಾಗಳ್ ನೆಲನಗಲದಗಲದ ಚಲದ ಚಲದ ಬಲದ ಬಲದ ಗಂಡುಗಲಿ ಲಕ್ಷ್ಮೀನಿಧಿ- ಭಾವ ಪುಷ್ಕಲನಿರ್ಕೆ, ಪ್ರತಾಪಾಗ್ರ್ಯನಿರ್ಕೆ; ಭೂಭುಜಂ ಸುಭುಜನಿರ್ಕೆ; ಮಿಕ್ಕಿನ ತಕ್ಕಿನ ಕೂರ್ವರ್ಗಳ ಪಟುಭಟರಿರ್ಕೆ, ಈಸೂಬಿ ಪೊರ್ದುಗೆಯ ಗುರ್ದಿನಾಟದೊಳುರ್ವ ಕೊರ್ವಿನ ಕೇಡಾಳಿಯುಂ ಕೆಡಪದೊಡಾತನ ಸೇನೆಯುಂ ಕೇೞು ತುಸ್ಪೞಿಂ ತೂೞದೊಡೆ ಮತ್ತಂ ಹಯಮುಂ ಪೊರಲ್ಚದೊಡೆ ಎಮ್ಮಾ ಜನಕಂ ಜನಕಂ ಜನಕಂ ಮುನಿಜನಕಂ ಸಮಂತು ನಡೆದ ತೋಱಿದ ಸಜ್ಜನಿಕೆಯುಂ ಕೊಱಚಾಡುವಣಕದ ದುರ್ಜನದ ಬಾರ್ತೆಗೆಟ್ಟ ಬಾಳ್ಕೆ ತನಗಕ್ಕೆ! ಎಂದು ಕೆಯ್ವೊಯ್ದಂ. ಆಪ್ರೇೞಿತ್ತಂಗೆ ಬಲ್ಮೆಯ ಸಾಸಿಕೆಯ ಕಡುಗಲಿಯಣುಮಂ ಕೈಮುಗಿದು ಕೊನೆವಾಲಮನಲುಗಿಸುತೆ ಮೆಯ್ವೆರ್ಚೆ ರಾಮನನೆಂಗುಂ:– ಜೀಯ! ರಕ್ಕಸರ್ಗಮೆಮಗಮೆಣ್ಣಿಸಿಂಗೆ. ನೀಮಲ್ತು, ದೇವರ್ಕಳಲ್ತು, ನಾಗರಲ್ತು. ಇಂದಿನೀವಿಸಸನದೊಳಾೞಿಯ ಜತ್ತುಕದ ನಿಶಾಟನುಬ್ಬಿನದ ಬಲಮಂ ಗೋಣ್ಮಾೞಿದು ಗುಟ್ಟಿಗಟ್ಟುವ್ರೇಡಾನೆ ಸಾಲ್ವೆಂ. ಕಾಡೊಳ್ ಬಳೆದ ನೀಳ್ಪನ ಕೆಯ್ಯ ಸಿಡುಗೋಡ ಪೇರಾನೆಯ ಕುಂಬತಳಮಂ ತನ್ನೊಂದೆ ಕೈಯ ಪೊಯ್ಲಿಂ ಸೀಳ್ವ ಪೋಟ್ವ ಪಂಚಾನನಂಗಮೆನಗಂ ಪೆಱರ ಕೆಲಚಕ್ಕುಮೆ? ಮಾತೇಂ, ಸುತ್ತೇಂ? ನೋಡೆಪ್ಪೊಡಿಂದಿನ ಮುಂದಿನ ಖಿಲನ ಪ್ರೇಟಿಕು ಪೆಟಿಕಪ್ಪಿನೆಗಂ, ತುರಿಪದೆ ಕಾದಿ ಗೆಲ್ದು ಹಯಮುಂ ತಾರದುಱದೆನಾದೊಡೆ, ಶ್ರೀರಾಮರಂ ಮೊಕ್ಕಳಂ ತನ್ನೊಂದು ಹಂಪದ ಱವಗ್ಗಿನ ಜೆಸಗೆಯ್ಮೆಯಿಂ ತೆಗಲ್ವ ಕೀೞಿನ ದುರ್ಗತಿಗಿೞಿವೆಂ.

ಇಂತಿರಣುಮನ ಬಲಕಂ, ಜನಕಜನ ಚಲಕಂ, ಪ್ರತಾಪಾಗ್ರ್ಯನ ಬೀರಕಂ, ಪುಷ್ಕಲನ ಗಂಡುಗಲಿತನಕಂ, ಮಿಕ್ಕುೞಿದ ರಾಯರ ಪೂ

ಘ್ನಗಂ, ಜೋದರುಬ್ಬಟಿಗಂ ಮನವೊಲ್ದು ಶತ್ರುಘ್ನನವರವರನುಚಿ
ತೋಕ್ತಿಯಿಂ ಮನ್ನಿಸಿ, ಅನಿಬರ್ಗಮೊಂದಾಗಿ ವೀಳಯವನಿತ್ತು ರಕ್ಕ
ಸನನಿದಿರ್ಚುವೆಂದು ಬೆಸನದೊಳ್ ಕಳಿಪಿದಂ. ಅನಂತರಮಾಅಱಿಕೆ
ಯ ಕಟ್ಟಂಕದ ತೋಳ್ಬಲನ ಸಾಸಿಗಳೆಲ್ಲರ್ ತಂತಮ್ಮ ಸೇನೆವೆರಸು ತ
ಳರ್ದು ಮಿಕ್ಕುಮಿಱು ಪೋಪ ತೇರಂ ಸುತ್ತುಂ ಮುತ್ತಿ ಕೋಲ್ಮ
ಟೆಯುಂ ಸುರಿವುದುಂ; ರಕ್ಕಸವಡೆ ಕಣ್ಗೆಟ್ಟು ಕಣ್ಮಾಯಮಾಗಲೊಡಂ
ತಡೆಗೊಂಡ ನಡೆನಾಡದೊಳ್-ಪಲ್ಗಳೆಡೆಯೆಡೆಯ ಕಲ್ಗಳಾಗೆ, ಸೋಱು
ವ ಜೊಲ್ಲೊಸರಬಿರಿಯ ಮೊಪಲಾಗೆ, ಱೊಬ್ಬೆಯ ನೀಟದ ತಳನಾರ್
ಲಗೆ ಕೀಱಿಲಾಗೆ, ಕಿಸುವೆಟ್ಟಿನ ಗವಿಯನನುಕರಿಪ ಬಾಯುಂ ತೆಱೆ
ದು ಕೆಮ್ಮೀಸೆಯ ಪೊದದಲೆಯ ಬಟ್ಟಜ್ಜೆಯ ಕಟ್ಟುಱಿದ ಡಗೆಯ
ಪೇರೊಡಲ ಗೋರರೂಪಿನ ದಾನವಂ, ದಿಗ್ಭಿತ್ತಿಗಳ್ ಬಿರಿಪಿನಂ, ದಿಗ್ಗ
ಜಂಗಳಳ್ಕುವಿನಂ, ದಿಗಧೀಶರ್ ಬೆರ್ಚುವಿನಂ, ಬೊಬ್ಬಿಱಿದು ಮೈಮು
ರಿದು ಪರಿದು ಸರಿದು ಬಲ್ಗಣೆಗಳಂ ಪೂಡಿಯುಂ ಮಾರ್ಗಣೆಗಳಂ ಕ
ಡಿಗುಂ ಕಟ್ಟಳವಿಯ ಪರಿಬಂ ನುರ್ಗುನೊಂಕಪ್ಪಿನೆಗಂ ತನಗಂ ತೇರ್ಗಂ
ಕಾಪಿಟ್ಟು ಮುಟ್ಟಯಿಪ ಪ್ರತಿಭಟರಂ ತಡೆದು- ಇರಿವಿರಿಂ. ಹರಣಂ
ಜೋಕೆ! ಎನ್ನ ಪೋಗಂ ತಡೆಗಟ್ಟಯುವೆನ್ನಂ ಗೆಲ್ದಂ ಬಾಳ್ವ
ಗಂಡರುಮೊಳರೆ! ಎಂತೆಂತೊ ಜಳ್ಕರಕ್ಕಸರಂ ಗೆಲ್ದೊಂರು ಟಕ್ಕಿನ
ಬಲ್ಮೆಯೆನ್ನೀತೋಳ್ವಲಕೇಂ ಬಾರ್ತೆಯೆ? ನಿಮ್ಮನ್ನರ್ಗೇಕೆ ಛಲಂ,
ಬಲಂ, ದಿಟಂ, ಹಟಂ, ಸಾಸಂ, ಮೋಸಂ, ಬೀರಂ, ಗೀರಂ. ಕೆಲ
ಸಾರಿಂ: ಅಲ್ಲದೊಡೆ ಬಿಡೆನೀಗಳೆ ಕೊಂದು ಪೋಱೂಸಿ ತಾಳಿಸಿ ಗಮ್ಮನೆ
ನಿಮ್ಮನೆಮ್ಮ ಮಾಲಿನಿಯರ್ಗೆ ಬಲಿಗುಡುವೆನಲ್ಲದೊಡಾನೆ ನೆತ್ತರಂ ನಂ
ಜೆ ಕೊಟ್ಟಸಮುನಗಿದು ಕರುಳಂ ನುಂಗಿ ನೆಣಸಂ ಸವಿದು ಮೆದಳನುಂ
ಡು ನಲಿವೆನಂತುಮಲ್ಲದೊಡೆ ಸತ್ತ ಮುತ್ತಯ್ಯನ ಪೈತಿಗೆಯನಿಂದೆ ಸ
ಡ್ಡಿಯಿನಾಗಿಸಿ ಬಂದ ಬೊಮ್ಮರಕ್ಕಸಿಯರ್ಗೆ ನಿಮ್ಮಡಗಿನೆಡೆಗೆಯ್ವೆಂ ಎಂ
ದಂ. ಅವರ್ಕಾರ್ಗಮುಱುವಕ್ಕದ ಜೋವರ್ ಕಿನಿಸಿಂ ಮಾರ್ಕೊಂಡು
ಕೋಲ್ಗಳಂ ಪೂಟ್ದು-ಎಲೆಲೆ ಸಮ್ಮಂಗುಂದಿದ ಪುಚ್ಚಱಿಯ ಬಾಳ್ಸಬ
ಮೆ! ನರಿಯಂತೆ ನಾಯಂತೆ ಊಳ್ದೊಡೆ ಬಗುಳ್ದೊಡಕ್ಕುಮೆ! ಕ

ಲಿಮಂತೆ ಗಂಡರಂತೆ ಕೈಗುಣಮಂ ತೋಱುವೆಡಾ! ಓ ನೀನುಮೇಗು ವಯ್! ಆಱಿಯು ಕೇಱಿಯು ನಿಮ್ಮನ್ನರೀ ಆಳ್ತನಂ ಪ್ರಗುತೆಯಿಕ್ಕುರ್ಗಂ. ಅಂದಿನ ಮಹಿರಾವಣರಾವಣಕುಂಭಕರ್ಣಾದ್ಯರ ಸೊಕ್ಕುರ್ಗಂ ಜೆಕುರ್ಗಂ ನಿಮ್ಮವರ ತರಣದ ನೆಲೆಯಂ ಪೇಱಿವೆ! ಚಿಃ! ಮರುಳೆ! ರಾವಣಂ ಮುಂತಪ್ಪ ದೆಸೆಮುಟ್ಟಿನ ಜಸದ ದೈತ್ಯರಂ ಱೆಪ್ಪಿಸೊಪ್ಪಿ ಸೋವಿದ ಶ್ರೀರಾಮಂ ಬೇಳ್ವ ಜನ್ನದ ಹಸುವಂ ಕಳ್ದುಯ್ಗುಂ ಬಾೞ್ವೆನೆಂದು ಬಗೆವ ನೀನಾವ್ರೊಂ? ಮತ್ತಮಾದಿನದ ಪೆಣ್ಗಳನೇನಾದನೆಂದೀದಿನದ ಹಸುಗ್ಳಂ ನೀಂ ಬಗೆಯಲ್ವೆಡಾ! ಎನುತೆ ಜಱೆದರ್. ಆಗಳಸುರಂ ಕಟ್ಟಾಸುರಂ ಕುಂವದ ಕೋಲ್ಗಳಸುಗೆಯ ಕೈಚಳಕದಿಂ ಪಗೆಗಳಂ ಘಾತಿಸಿ ಭೀತಿಸಿ,— ಆನಱಿಯೆನೆ ಎಮ್ಮ ನಿಮ್ಮ ಸಾಹಸದಿರವಂ! ಗಱಿಪಿದೊಡೇಂ ಬಾೞ್ತೆಯೊ! ಕೊಡಲಿಯು ಕಾವೆ ಕುಲಕ್ಕೆ ಕೇಡಾದುದಲ್ಲದೆ ಜಗವಱಿಕೆಯ ಗಂಡನಂ ರಾವಣನಂ ಗೆಲ್ವ ಕೊಲ್ವ ಮಾನವರುಂಟೇ? ಏಂ! ಕಿಱುದಂಗೆ ಶೂರ್ಪಣಖಿ ದೂದವಿಯೊಂದು ಪಿಸುಣಾಡಿ ಕೊಂದಳಲ್ಲದನುಜವಿಭೀಷಣಂ ಚಿದ್ರದಿಂ ತಾನೆ ಕೊಂದನಲ್ಲಪುಂಡೊಱಗನುಱುಗಿ ಸೋಂಬಿಂದಿರದೆ ಕೊಂದನಲ್ಲದಾ ತನ್ನ ನೊಸಲಕ್ಕರದೋದೆ ರಾವಣನಂ ಕೊಂದುದಲ್ಲದೆ, ಪೋ: ರಾಮಂ ಕೊಂದನೆ! ನೊಱೇಂ. ಗಾಡಿಯ ಮೋಡಿಯ ಕವಡುವಲೆಯನೊಡ್ಡಿ ಮಿಡುಕಿನ ಸೆಡಕುಗಾತಿರ್ ಜಾವಳೆ ಸೀತೆ ತಾನೆ ತನಗೊಲ್ದ ನೀಱನಂ ರಾವಣನಂ ಕೆಯ್ಯಾಱೆ ಕೊಂದು ಕುಡಿದಳಲ್ಲದೀಕುಱಿಮಾನಸರೀಮುದಮಂಕಡರೀಬಾನ ಬನ್ನದ ಕುನ್ನಿ ಮೂಱಿರ್ ಬೋಱಿರ್! ಆಃ! ಚಿಃ! ಕೊಂದರೆ! ಅಂತಿರೆಯುಂ ತಾಂ ತಾನೆ ಪೊಂದಿದ ರಾವಣನಂ ಕೊಂದೆವೆಂದೆ ಬಗೆವಮಾತನ ಬರ್ದುಗೆಯ ಶಾಂತಿಗೆಂದಾತಗೆ ಮಾಳ್ಪುವೆನೆ ನೀಂ ಮಾಱ್ಪ ಜನ್ನದ ಹಸುವಂ ಪಿಡಿದೊಡೆ ನಿಮಗೆ ಮುನಿಸಾಯ್ತೆ! ಬೇಡ! ಮಾಣಿರೆ! ಇನಿತುಂ ಬನಣಿಯೇಕೆ! ಅಂತುಬೊಸವಿದ ದೋಸಕ್ಕೆ ನಿಮ್ಮನೆ ಕೊಂದು ಕೊಲೆಗೆ ಕೂಱಿಕ್ಕುವೆಂ. ಎನ್ನ ಕೆಳೆಯನಂ ಕೊಂದ ನಿಮ್ಮವರಂ ಬಿಡುವೆನೆ! ಎಂದಾರ್ಭಟಿಸಿದಂ. ಮತ್ತಮಸಿತಱೊಳಾತನಂ ಪ್ರತಿಘಟಿಸಿ ಪುಷ್ಕಲಾದ್ಯರ್ ಬಾಯ್ಗೊವಿರ್ಗನಸೊ

ರ್ಕಿನ ದಾನವಂಗೆ- ಎಲೆ ವೈಗಳ್ರ! ನಿನ್ನ ಕೆಳೆಯನೆಂತೆಂತೊ ಸತ್ತು ಮಿತ್ತುವಿನೂರ ಚಾಪಡಿಗೆ ಸಂದು ಬಲದೊಳ್ ಗದ್ದುಗೆಗೊಂಡರಸಾಳ್ವನಂತಿರೆ ನೀನಿಃ ಇನ್ನಿ! ಪಾಱೆಟ್ಟ ನಾಡೊಳಿರಲಕ್ಕುಮೆ! ಪೋ, ನಿನ್ನನುಮನಾಪ್ರೋಟಿಲ್ಗೆ ಚಿಕ್ಕರಸುತನಕ್ಕಟ್ಟುವೆವೆಂದಕ್ಷಯಬಾಣಂಗಳಂ ಶರಾಸನದೊಳ್ ತೊಟ್ಟರ್. ಇಂತಾಗಲೊಡಂ ವಿದ್ಯುನ್ಮಾಲಿ ತೇರಿನಿಱಿದು ಮಾಱುಂತ ಮಿತ್ರಭಟರ ಕೋಲ್ಗಳನನಿತುಮಂ ತಾನೊರ್ವನೆ ತಡೆದುಂ ಪಿಡಿದುಂ ಕಡಿದುಂ ಪ್ರಳಯಭೈರವನಂತಿರಾಜಿಯೊಳ್ ಕಡುಕೆಯ್ದು ಅಡಿಗಡಿಗೆ ಗುಡುಗುಡಿಸಿ ಬೀದಿವರಿಯುತೆ ಸುರರ್ ಬೆಕ್ಕಸಂಬಡುವಿನಂ, ಪಾಱಿಯಿಂ ಪರಸೈನ್ಯಮಂ ಕೋಳುಗೊಂಬುದುಂ- ಬರ್ದಿಸೆಯೊಳ್ ಪುಷ್ಕಲನಿಸುಗೆಯ ಕೋಲ ಸೋನೆ, ಮೇಗೊಂದೆಡೆಯ ಲಕ್ಷ್ಮೀನಿಧಿಯ ಪೊಯ್ಯ ಗದೆಯ ಬಿಱುಗಾಳಿ, ಮತ್ತವೊಂದೆಡೆಯೊಳ್ ಪ್ರತಾಪಾಗ್ರ್ಯನ ಬೀಸಿನ ಸುರಗಿಯ ಮಿಂಚು, ಪೆಱತೊಂದೆಡೆಯೊಳಣುವ ನೀಡಿನ ಕಲ್ಗಳ ಕಲ್ಮಳೆ, ಬೞಿಕ್ಕವೊಂದೆಡೆಯೊಳ್ ಸುಭುಜಸುಮದಪ್ರಭೃತಿ ವೀರರಾರ್ಭಟೆಯ ಸಿಂಹನಾದದ ಮೊೞಗು, ಮುಂಗಾರಂ ಕೀೞ್ಮಾಡಲೊಡಂ; ಶತ್ರುಪನ ಬಲದ ಬೀರದ ಜೋದರ್ ಕಳನೊಳ್ ಕಳನೊಳ್ ತಾಗಿದರ್. ಅಂತಿರ್ಕಡೆಯುಂ ಬೆರಸೊಳಗೊಳಗೆ ಪಳಂಚುತಿರೆಯಿರೆ ರಕ್ಕಸನ ಕೈಯ ಕೋಲುಂ, ಮೆಯ್ಯಪ್ರತೆಯುಂ, ತಲೆಯ ಸೀಸಕಮುಂ, ಕಡಿವಡೆದುವು; ಮೊಗದ ಕಳೆ ಪಗಲ ಪೆಱೆಯ ಕಳೆಗೆ ದೊರೆವರೆ, ಬಗೆಯ ಕಾಯ್ಪು ಕಡೆವಗಲ ಮುತ್ತ ನೇಸಱ ಕಾಯ್ಪಿಂಗೆ ಪಾಸಟಿಯಾಗೆ, ತೋಳ ಬಲಂ ಪೆಱನ ತೋಳ ಬಲಕ್ಕೆ ಪೋಲ್ತರೆ, ರಕ್ಕಸಂ ಸೋಲ್ತು ಸುಣ್ಣದೊಳಾದಂ.

ಈತೆಱನೊಳ್ ರಕ್ಕಸನ ದಱಿಸಂ ತಱಿಸಲಾಗೆ ತಱಿಸಂದು ಮನದೆ ಮಾಯೆಯುಂ ಬಗೆದು ಕವಡುಬಿಜ್ಜೆಯನೊಡ್ಡಿ ನಿಲ್ವನುಂ, ಪುಷ್ಕಲಂ ನಾರಾಯಣಾಸ್ತ್ರದಿಂ ಸೇದಿಸುವದುಂ, ಪಡೆಯುಂ ಕಣ್ಮಾಯವಾದತ್ತು. ಆಗಳ್ ರಕ್ಕಸಂ ಬಕ್ಕಂಬಯಲೊಳಾಗೆ ಅಣುವನ ಗುದ್ದೊರ್ಗಂಡು, ಜನಕಜನ ಗದೆಯ ಬಡಿಯುರದು; ಪ್ರತಾಪಾಗ್ರ್ಯನ ಬಾಳ ಕಡಿತಂ ಮೂಱು, ಭಾರತಿಯ ಬಿಱುಗಣೆಯ ಪೊಯ್ ನಾಲ್ಕು, ಮಿಕ್ಕ

ರಾಯರ ರಟ್ಟೆಯ ಕೊಂತದಿಱಿತವ್ವೈದು ಇವಱಿನ್ನೈದಱಿಂ ರಕ್ಕಸಂ ಪಂಚತ್ವಮನೈದಿದಂ. ಸುರದುಂದುಭಿನಿನಾದಂ ದಿಗ್ಗಜಂಗಳ ಬೃಂಹಿತಂ ಸಪ್ತಶರಧಿನಿರ್ಘೋಷಂ ಮೂವಡಿಯಿಂ ಪೆರ್ಚಿದುದು; ಸುರರುಂ ಕಿನ್ನರರುಂ, ನರರುಂ, ವಾನರರುಂ ಪೊಗೞ್ದು ಕಳಿವೆರ್ಚಿದರ್.

ಎನ್ನರೆವೊಡಲ ಮುದ್ದುಮೊಗದ ಸಿಂಗಾರಿ! ಎನ್ನ ಪೊನ್ನಪದಗದ ರನ್ನದಾರದ ಬಚ್ಚಳೆ, ನೀಱೆ! ಇಂತಿನಿತೊಂದು ಮಾತ್ಕೆಯಿಂ ಮಡಿದಾಂಗೊಲಿಗೆಂತಂತು ಪೋೞ್ದ್ ಕರ್ಡಿಮೇಗಿ ರಣದೊಳ್ ಕೆಡೆದ ದಾನವನೊಡಲಂ ಕಾಗೆಗೂಗೆಗಳ್ ನರಿನಾಯ್ಗಳಾರಯ್ಯುತಿರ್ಪುದುಮಿತ್ತಲ್ ಹತಶೇಷರಪ್ಪ ರಕ್ಕಸರ್ ರಣಕ್ಕೆ ಬೆಂಗೊಟ್ಟೋಡಿ ತಮ್ಮೆಡೆಯಂ ಪೊರ್ದಿದರ್.

ಮತ್ತಮಾಗಳ್ ತಮ್ಮನೆ ಬಲ್ದೊಱಲ್ದು ಬೆಂಬಿಡಿದ್ದೈದಿಪರ್ಪ ವಿಜಯಶ್ರೀಯುಂ ತಳ್ಕೈಸಿ ನೋಡಿ ಕೂಡಿ ಹಯಂಬೆರಸು ಜೋದರೆಲ್ಲರ್ ಶತ್ರುಹನೊಂದಾಣತಿಯೊಳನುವಱಿತು ಬಡಗದೆಸೆವಿಡಿದು ನಡೆಯುತುಮಿರ್ದರ್. ಆಕಾಲದೊಳ್—

ಗೊಜ್ಜಿಗೆಗೆಳಜವ್ವನಂ, ಮಲ್ಲಿಗೆಗೆ ಮೊಳೆಜವ್ವನಂ, ಸುರಯಿಗೆ ನೆರೆಜವ್ವನಂ, ಪಡ್ಡಳಿಗೆ ತುಂಬುಜವ್ವನಂ, ಕೋವಳಿಗೆ ಮಿಂಟುಜವ್ವನಂ, ತಾವರೆಗೆ ಪಿಱಂಜವ್ವನಮೊದವಿತ್ತು. ಮತ್ತಂ ಗೋಣಿಗೆ ಪಣ್ಣಂ, ಮಾಮರಕ್ಕೆ ಪೂವಂ, ಬಕ್ಕೆವಲಸಿಂಗೆ ಕಳಿಕೆಯುಂ, ತೆಂಗುಕೌಂಗುಗಳ್ಗೆ ನಿಡುಗೊನೆಯುಂ ಪತ್ತಿಸಿ ತೆತ್ತಿಸಿ ಬೀಸುವ ಪಲಗಾಳಿ ಕಱೆತು ಚಳಿತು ಬೆಂಗುಡುಪಿನೆಗಂ ಸುಗ್ಗಿ ತಳ್ತುಯ್ದು ಪಳಂಚಲೆಸುದು. ತಳ್ತ ಬಡಗಣ ಕುಳಿರ್ಗಾಳಿ ಆಗಳೊತ್ತಿ ನಿಂದ ಕೊಳನ ನೀರ್ಗೆ ಬಿಸುಪ್ಪಂ, ಪೊತ್ತಿಪೊಗೆವ ಕಿಚ್ಚಿನ ಜಾಳೆಗೆ ತಣ್ಪಮೊಪ್ಪೊರ್ದಲೊಳೆ ತಲೆದೋಱಿದತ್ತು. ಮೇಣುಂ ಬಂದು ಬಂದಿಗೊಂಡ ಕಡುಚಳಿ ನಾಡಿಗರಂ ಪಿಡಿದುಂ ಜಡಿದುಮಳ್ಕಿಸಿಯುಂ ನಡುಗಿಸಿಯುಂ ತಲೆವಾಗಿಸಿಯುಂ ಗುರ್ದಿಯುಂ ತಿರ್ದಿಯುಂ ಕೆಡೆಪ್ಪುದುಂ, ಸುಗಿದು ಸುರುಂಟಿ ಮುರುಂಟಿ ಮರವಟ್ಟು ಮೂಗುವಟ್ಟು ಮಿಸುಗ್ಗಿಟ್ಟಿಸಕಳವಲ್ಲರ್. ಪೊಸವರೆಯದ ಜವ್ವನಿಗರ್ ತಂತಮ್ಮ

ಕಾದಲೆಯುರದ ತೋಳ್ ತಳ್ಕೆಯೊಳೆಸೆವರ್; ಮುದುಪರಂದು ಸುಡುಗಿರ್ಚಿನ ಮಱೆಯುಂ ಸಾರ್ದು ಗುಱುಗಮಮ್ಮಸಿದರಿರುಳುಂ ಪಗಲುಂ.

ಅಂತುಮಲ್ಲದೆಯುಮೈಕಿಲ್ಗಂಜಿ ನಂಜುಂಡಂ ಅಸವಸದಿಂ ಪೊತ್ತ ಪೊಱೆಯುಂ ಪೆಱೆಯುಂ ಬಾಗ್ಗಿಟ್ಟು, ನೆತ್ತಿಯ ಗಂಗೆಯುಂ ನೇಕಿಱಿಪಿ ತಾಂ ಪಣೆಯ ನಡುಗಣ್ಣ ಕಿಚ್ಚನುಜ್ಜಳಿಸಿ ಸಜ್ಜಿನ ಬೆಂಬೂದಿಯುಂ ಮೆಯ್ಗೆ ಪೂಸಿವಟ್ಟದೊಲವಂ ಪೊದೆದಗಜೆವೆರಸು ಬೆರೆವೊಡಲೊಳಿರ್ದಂ. ಚಳಿಗಾರದೆ ನಾರಾಯಣನುಂ ಲಕ್ಷ್ಮಿಯ ಬಲ್ಮೊಲೆಗಳ ಬಿನ್ನಗಳೆಡೆಯ ಬಿರಿಕಿನೆಡೆಯೊಳ್ ಬಿನ್ನನಡಂಗಿ ಬೆಳ್ವಟ್ಟೆಯ ಮುಸುಂಕಿನೊಳಿರ್ದಂ. ಪೆರ್ಚುಗೆಯ ಕಡುಹಿಮದ ಕೋಡಿಂಗಗಿದು ಭಾಸ್ಕರಂ ತನ್ನ ನಚ್ಚಿನ ಕಮಲಿನಿಯುಂ ನೀರ್ವಾನಸೆಯುಂ ಬಿಟ್ಟು ಕೈಗೆಟ್ಟು ದೆಸೆಗೆಟ್ಟು ತುರಿಪದಿನೋಡಿ ನೋಡಿ ಪಡುವೆಟ್ಟಿನ ಕೊಂಬಿನ ಗುಹೆಯುಂ ಸಾರ್ದು ಸೇರ್ದು ಸಂಜೆವೆಣ್ಣ ಪೊಸಕೂಟದೊಳ್ ಪಿರಿದುಮಿರ್ದಂ.

ಇಂತು ಬಂದೊದವಿದ ಚಳಿಗಾಲದೊಳ್ ರಾಘವನ ಯಜ್ಞತುರಂಗಮುಂ ಅರಣ್ಯಕನೆಂಬೊರ್ವ ಕಿತ್ತಡಿಯ ಪುಣ್ಯಾಶ್ರಮಮಂ ಪುಗುತರ್ಪುದುಂ; ಕಂಡುಶತ್ರುಘ್ನಾದ್ಯರ್ ಮುನಿಯ ದರ್ಶನಕೆಂದೊಳಪೊಕ್ಕು ಮುನಿಗೆಱಗಿದರ್. ಆಗಳರಣ್ಯಕನಭ್ಯಾಗತರಂ ಮನ್ನಿಸಿ ಸರ್ವರನಾತಿಥ್ಯದಿಂ ಸತ್ಕರಿಸಿ ಶ್ರೀರಾಮಸತ್ಕಥಾವಿನೋದಗೋಷ್ಠಿಯೊಳ್......

ಮನೋರಮೆ-- ಎನ್ನ ಚೆನ್ನಿಗ! ಆತಿಥ್ಯಮೆಂದೊಡೇಂ? ಬಱಿದೆ ಬಾಯುಪಚಾರಮೆ?

ಮುದ್ದಣಂ— ಅಲ್ತು; ಬಾಯ ಉಪಚಾರಮಲ್ತು. ಬಂದರ್ಗೆ ಕೈಗೆ ಕಾಲ್ಗೆ ನೀರಿತ್ತು ಕುಳ್ಳಿರಿಸಿ ಸವಿಗೂೞನಿಕ್ಕಿ ಪೂವಿಂ ಸಿಂಗರಿಸಿ ಬಾವನ್ನದಿಂ ಸೊಗಸುಗೆಯ್ದು ಬಡಸಿರ್ದು ನುಡಿದು ನಲಿದು ಮನ್ನಿಪುದು.

ಮನೋ-- ಅಂತಿರ್ಪುದುಂ, ಶತ್ರುಘ್ನನ ಸಾಯಿರ ಸಾಯಿರ ಲೆಕ್ಕದಿನಿವಿರಿದು ಪಡೆಗರಣ್ಯಕಂ ಕೂೞ್ನೀರಿತ್ತು ಸನ್ಮಾನಿಸಿದನೆ?

ಮುದ್ದ—ಅಪ್ಪುದಪ್ಪುದು. ಅನಿಬರುಮಂ ಯಥೇಚ್ಛಂ ಮೃಷ್ಟಾನ್ನಭೋಜನದಿಂ ತಣಿಪಿದಂ.

ಮನೋ- ಎನಗಿವಚ್ಚರಿ. ಎಂತುಟೂರ್ತಂ?

ಮುದ್ದ- ಏಂ ಮುನಿಗಳೊಂದು ಜಪದ ತಪದ ಮಂತ್ರದ ಬಲ್ಮೆಯೇಂ ಕಿಱಿದೆ? ಬೇಡಿದ ಪುರುಳನುಱದಿಂ ತಂದೀಗುಂ.

ಮನೋ- ಅಂತುಟೇಂ ಗನಂ! ಆವುದೊ ಮಂತ್ರಂ?

ಮುದ್ದ- ಆವುದೇಂ! ಏಕಾಕ್ಷರಿ, ದ್ವ್ಯಕ್ಷರಿ, ತ್ರ್ಯಕ್ಷರಿ, ಚತುರಾಕ್ಷರಿ, ಪಂಚಾಕ್ಷರಿ, ಷಡಕ್ಷರಿ, ಮುಂತಪ್ಪ ಪ್ರಸಿದ್ಧಮಂತ್ರಂಗಳೊಳವಲ್ತೆ.

ಮನೋ- ಇವಱಂ ಜಪಿಸಿದೊಡೇನಕ್ಕುಂ?

ಮುದ್ದ- ಈಮಂತ್ರಂಗಳಂ ಬಿಡದೆ ಜಪಿಸಿ ಸಿದ್ಧಿವಡೆದೊಡೆ ತತ್ತದಭಿಮಾನಿದೇವತೆಗಳ್ ಮೆಯ್ದೋಱಿಯುಮೆಳಸಿದರ್ಥಮನಿತ್ತುಂ ಪೋಕುಂ.

ಮನೋ- ಓ! ಇನಿತೊಂದು ಜಪದ ಬಲ್ಮೆ ನೆರವಿರ್ಪನಂ ಪೆಱತೊಂದಱ ಗೊಡವೆಯಿಲ್ಲದಿರ್ಕುಂ ತಾಪಸರ್.

ಮುದ್ದ- ಅಪ್ಪುದಪ್ಪುದು; ತಪ್ಪೇಂ?

ಮನೋ- ಅಂತದಿರ್ಕೆ. ನಿನ್ನನ್ನರಪ್ಪ ಕಬ್ಬಿಗರ್ ಮನೆವಾೞ್ತೆಯೊಳಿನಿಸೊಂದುಂ ಗೊಡವೆಗೊಳ್ಳದೆ ಕೆಮ್ಮಕೆಮ್ಮನೆ ಪಾೞ್ಗತೆಯ ಕಬ್ಬದೊಳೆಪ್ಪೊೞ್ತುಂ ಬೆಮೆಗೊಂಡಿರ್ಪರಲೇ. ಅವರ್ಗೇಂ ಬಟ್ಟೆಯೊ? ಉಣಲೇಂ, ತಿನಲೇಂ? ಅಂತಿರೊಂದು ಜಪನುಂ ಪಿರಿಯದವಸಿಗಳತ್ತಣಿನುಪದೇಶಂಗೊಂಡೊಡಾಗದೆ!

ಮುದ್ದ- (ಮುಗುಳ್ನಗೆಯಿಂ) ಏಂ ಎಮ್ಮವರೊಂದಿರವಿಗೆ ನಗುವಾ? ಆಃ! ಎಮ್ಮನ್ನರಪ್ಪ ಕಬ್ಬಿಗರ್ಗೇಂ ಕೊಱತೆಯೊ! ತಾನೆ ಬಯಸಿದೊಡಮೆಯುನಾಗಳೆ ತಂದೀವ ಮಂತ್ರದ ಜಪದೊಂದು ನೆರಂ ತಮ್ಮೊಳೊಂದಿರಬೊಡಲ್ತೆ ಕಾಡ ಜೋಗಿಗಳತ್ತಣಿನುಪದೇಶಂ. ನಾಡಂ ಕಾಡಂ, ಕಾಡಂ ಬೀಡಂಗೆಯ್ವೊಂದು ಪೆರ್ಮೆಯ ಬಲ್ಮೆಯ ಕಬ್ಬಿಗರೇಂ ಕಕ್ಕುಲಿತೆಯ ಮುದುದವಸಿಗಳತ್ತಣಿಂ ಪಿರಿಯರಾಗರೆ! ನುಡಿವರೇನದುವೆ ಪುರುಳ್, ಪಿಡಿವರೇನದುವೆ ತಿರುಳ್! ಪಲವೇಂ, ಕೆಲವೇಂ? ತಮ್ಮೊಂದೆ ನುಡಿಯ ಬಲ್ಪಿಂ ಮೂಜಗಮುಮನಱಯಿಸುವ ಪೆರ್ಗಬ್ಬ ಕೊಳ್ವಾಳ್ವ

ತಾಳ್ವ ತೂಳ್ವ ಸೂಱ್ವ ಪೇೞ್ವ ಬಾೞ್ವ ಸಿಂಗರದ ಬಣ್ಣಗಬ್ಬಿಗರೆಮ್ಮ ತೆಱನನಿನ್ನುಂ ನೀನಱಿಯಯೆ.

ಮನೋ- (ಬಿಸವಂದಂಗೊಂಡು) ನಿಮ್ಮವರ್ಗಮಂತಿರೆ ಮಂತ್ರಂ ಸಿದ್ಧಿವರ್ಕುಮೆ ?

ಮುದ್ದ- ತಡೆಯೇನಕ್ಕುಂ !

ಮನೋ- ನಿನ್ನೊಳಮೊಳವೆ ?

ಮುದ್ದ- ಎನ್ನೊಳಂತಿದು ಪಾಸುವೊಕ್ಕು.

ಮನೋ- ಆಃ! ನೀನುಂ ಬಲ್ಮೆಯಮಗಾಱಂ. ನಿನಗಾರತ್ತಣಿಂದುಪದೇಶಮಾಯ್ತು ?

ಮು- ಗುರುವತ್ತಣಿಂದೆಳವೆಯೊಳ್.

ಮನೋ- ಎನ್ನಱಿಯ ! ಅದಾವುದೊ ಮಂತ್ರಮೆನ್ನೊಳುಸಿರ ?

ಮುದ್ದ- ಆಃ! ಆಃ! ಬಳ್ಳಿತೊಳ್ಳಿತು !! ಮಂತ್ರಂಗಡ! ತನಗೊರೆವುದು ಗಡ ! ಛಃ! ಛೀ! ಪೆಣ್ಗಳ್ಗೀಮಂತ್ರೋಪದೇಶಂ ಸಲ್ವುದೆ?

ಮನೋ- ಅನಱಿಯೆನೆ ! ನಿನ್ನತ್ತಣಿನುಪದೇಶಂಬೇಡುವೆನೆ! ನೀನಾಗಳೆಂದ ಮಂತ್ರಂಗಳೊಳಾವುದದಱ ಪೆಸರೇನೆಂದೆ ಕೇಳ್ದಂ.

ಮುದ್ದ- ಆಗಳೆಂಪ ಮುನಿಗಳ ಮಂತ್ರಂಗಳೊಳಲ್ತು. ಎಮ್ಮ ಮಂತ್ರಂಗಳ ಬಗೆ ಬೇಱೆ, ಮೂಱೆಡಕ್ಕರದ ಮಂತ್ರಂಗಳ್ಮಂಗಕ್ಕುಮೆ! ಎಮ್ಮ ತಂತು ಕಿಱಿದಲ್ತು ಬಲ್ಪಿರಿದು. ಒಂದಕ್ಕರಮಲ್ತೆರಡಲ್ತು ಮೂಱಲ್ತು, ನಾಲ್ಕೈದಲ್ತು, ಆಱುಮಲ್ತು. ಏೞಕ್ಕರದ ಬೀಜಮಂತ್ರಂ. ಅಂತದಱಿಂ ಸರ್ವಮಂತ್ರಂಗಳ್ಗೆ ತಲೆಯೊಳಿರ್ದು ಮೇಲೆನಿಪ್ಪ ಸಪ್ತಾಕ್ಷರೀಮಂತ್ರಮೆಂಬುದು ಪೆಸರ್.

ಮನೋ- ಹಾಹಾ! ಆಮಂತ್ರಕ್ಕಭಿಮಾನಿದೇವತೆಯಾವುದು? ಮುನ್ನಮಾರಿದಂ ಜಪಿಸಿ ಸಿದ್ಧಿಗಂಡರ್ ?

ಮುದ್ದ- ಪೋಪೋ! ಇಂತಿವಱಿಂ ಕೊಂಡೇಂ ಕಜ್ಜಂ?

ಮನೋ- ಇರ್ಕೆ, ಕೇಳ್ವೆಂ.

ಮುದ್ಧ— ಅಂತಾದೊಡೆ ಕೇಳ್ ಪೇೞ್ವೆಂ. ಇಂತೇರ್ಪಟ್ಟ ಮಂತ್ರದಧಿದೇವತೆ ಜೇಷ್ಠೆ. ಮುನ್ನಮೀಶ್ವರಂ ತನ್ನೊಂದು ಲೀಲೆಯೊಳ್ ಜಪಿಸಿ ಸಿದ್ಧಿಗೊಂಡನಂತವಱನಾತನೆ ಋಷಿ.

ಮನೋ— ಓಓ! ಇಂತುಟೆ ಮಂತ್ರದೊಂದು ಮೈಮೆ! ಎಲೆ ರಮಣ! ನಿನ್ನಡಿಗಳ್ಗೆಱಗುವೆಂ. ಎನ್ನತಿನಿತೊಂದು ಬಿನ್ನಪಂ. ಅಂತು ಸಂದ ಸಿದ್ಧಿಯ ಮಂತ್ರಮಾವುದೊ ಕೂರ್ಮೆಯಿಂ ತಿಳಿಯೆ ಪೇೞ್.

ಮು— ಆಗಳೆ ಪೇೞ್ದೆನಲ್ತೆ ಸಪ್ತಾಕ್ಷರೀಮಂತ್ರಮೆಂದು.

ಮನೋ— ಅಂತು ಪೆಸರನಲ್ತು. ಮೂಲಮನೆ ಕುಱಿತೆನ್ನೊಳಾಡಿ ತೋಱು.

ಮುದ್ಧ— ಅಬ್ಬಾ! ಪೆಣ್ಣೀಂ ಗಡುಸುಗಾರ್ತಿಯೊ! ಆಗಳ್ ಪೆಸರೇನೆಂದಳ್; ಈಗಳ್ ಮೂಲಮುಂ ಕೇಳ್ವಳ್. ಇನ್ನೇವಳೊ? ಮೂಱೆಯ ಜನ್ನದಾರದಾಣೆ! ಉತ್ತರಿಗೆಯಾಣೆ! ಆಗದಾಗದು. ಕೇಳ್ವುದರ್ಕೆ ಪೇೞ್ವುದರ್ಕೆ ನಿಮಗಧಿಕಾರಮಿರದು. ಕಣ್ಗೆ ಕಾಲ್ಗೆ ಕೇಡು!

ಮನೋ— ಕಿವಿಯಿಂ ಕೇಳ್ವುದಱೊಳೇಂ ದೋಸಂ? ಅಂತೇರ್ಪಟ್ಟ ವೇದಮನಾದೊಡಮೋದುವೆಡೆಯೊಳ್ ಕೇಳದೆ ಪೆಣ್? ನಿನ್ನೊಳಮೇಂ ಜಂಬಮೊ!

ಮುದ್ಧ— ವೇದಮಂತ್ರದ ಬಗೆ ಬೇಱೆ. ಇದಱ ಪರಿ ಬೇಱೆ. ಅಜಗಜಾಂತರಂ. ಅದಱೊಳಂ "ಗೂಢಾದ್ಗೂಢತರಂ ಮಂತ್ರಂ" ಎಂದು ಪೇೞ್ದುದುಂಟು. ಅದುಕಾರಣಂ ನಾಂ ಪೇೞಲಾಗದು; ನೀಂ ಕೇಳಲುಮಾಗದು. ಮುಂತಣ ಕತೆಯುಂ ಕೇಳ್. ಮತ್ತಮರಣ್ಯಕಂ ಶತ್ರುಘ್ನಾದ್ಯರೊಳ್......

ಮನೋ— ತೆಗೆ ತೆಗೆ! ನಿನ್ನ ಮುಂಗತೆಯುಂ ವಿತೆಯುಂ. ಅದೇಂ ಮಂತ್ರಮೊ ಕೇಳ್ವೆಂ. ಕೊರಲಾಣೆ, ಉಂಗುರದಾಣೆ, ಪೇೞ್ದಲ್ಲದೆ ಬಿಡೆಂ— ಎಂದು ಮುಯ್ಯಿಕ್ಕುವಳ್.

ಮುದ್ಧ— ಏಂ ಚಲಮೊ ಚಪಳೆಗೆ! ಪೇೞ್ವೆನೆಂದೊಡೆ, ಕೇಳ್ ಕೇಳ್. ಅಃ! ಪೆಣ್ಣೊಳೊರೆದ ವಿದ್ಯಾಬೀಜಮಂತ್ರಮನೆಂತು ಪೊಱಗಿಡುವೆನೊ! ಎಳ

ವೆಂಡಿರ ಕೈಯೊಳಿರ್ಪ ಕಬ್ಬಿಗರ ಬಾೞ್ಕೆಯೆ ದೂಷ್ಯಂ. (ಎಂದು ನೀಡುಂ ಭಾವಿಸಿ) ಎಲೆ ಪೆಣ್ಣೆ! ನೀನಾರೊಳಮೆಂದೆಂದಿಂಗಮುಸಿರಲ್ಬಾರದು. ಜೋಕೆ!

ಮನೋ- ಎಂದುಮೆಂತುಮುಸಿರೆನಾಡೆಂ.

ಮು- ಅಂತಾದೊಡಿಂತಿದು, ಕೇಳ್. ಭ...ವ... ಪೆಱರೊಳಾಡೆನೆಂಬ ನಂಬುಗೈಯುಂ ಪೊಯ್.

ಮನೋ- ಇದೆ, ಪಿಡಿ ನಂಬುಗೈಯುಂ, ನಿನ್ನಾಣೆ, ಕುಲದೈವದಾಣೆ. ಎಂದುಂ ಪೆಱವರೊಳೊರೆಯೆಂ.

ಮುದ್ದ- ಉಂ! ಭವ...ತಿ ..ಭಿ... ಪೆಣ್ಗಳಂ ನಂಬಲಾಗದೆಂಬರ್ ಬಲ್ಲರ್. ನೀನೆಂತೊ ಮಱವೆಯೊಳ್ ಪೆಱರೊಡನುಸಿರ್ದು ಗುಟ್ಟಂ ಬಿಟ್ಟೊಡೆಮ್ಮನ್ನರ ಬಾೞ್ ಪಾೞಕ್ಕುಂ.

ಮನೋ- ಆನೇಂ ಮೋಡಿಯೆ! ಪೋ! ತನ್ನಾಣೆ, ಕಣ್ಣಾಣೆ. ಕೇಳ್ವೆಂ.

ಮುದ್ದ- (ಏಕ್ಕಟಿಯೊಳ್) "ಭವತಿ ಭಿಕ್ಷಾಂ ದೇಹಿ" ಎಂಬುದಿದುವೆ ಕಬ್ಬಿಗರ್ಗೆ ಸಿದ್ಧಿಸಿದ ಪೆರ್ಮೆಯ ಸಪ್ತಾಕ್ಷರೀಮಂತ್ರಂ. ಆರೊಳಾನುಮುಸಿರದಿರ್.

ಮನೋ- (ಅರೆಮುನಿಸಿಂ) ಪೋ ಮಾಣೆಲೆ ರಮಣ! ನಿನ್ನ ನುಡಿಯುಂ ಸಾಜಂ ನಿಕ್ಕುವಮೆಂದೇ ಬಗೆವೆಂ. ಈತೆಱನ ಮಾಟಗ ಕವಡುನುಡಿಯ ಕೋಂಕೆಂಬುದನಱಿಯದಾಬೆಂ. ನೀಂ ಕಬ್ಬಿಗನೊ, ಸಬ್ಬವಕಾಱನೊ? ನಿನ್ನೀಕಬ್ಬದ ಸೊಗಸನೆಮ್ಮನ್ನರಪ್ಪ ಜಾಣೆಲಿವೆಣ್ಗಳ್ ಕೊಂಡಾಡುವರಲ್ಲದೆ ಬಲ್ಲರೇನೊಲ್ವರೆ?

ಮುದ್ದ- ಸಾಲ್ಗುಮೀಪರಿಹಾಸಂ. ಮುಂಗತೆಯುಂ ಕೇಳ್. ಇಂತೀ ಮಾೞ್ಕೆಯಿನರಣ್ಯಕಂ ಶತ್ರುಘ್ನಾದಿವೀರರನುಪಚರಿಸಿ ಕುಳ್ಳಿರಿಸಿ ಮತ್ತಂ ಶ್ರೀರಾಮಗುಣಾನುವಾದದೊಳ್- ಏನೆಂಬ ಮಾಟದಾಟಮೊ! ತಾನೆ ಯಜ್ಞಪುರುಷನಿರೆ ಬೇಳ್ವ ಜನ್ನಮೇವುದೊ! ಜಗನ ಯೆಮಾಗಿಂ

ತಿಪಂ ತೋಱುವನಕ್ಕುಂ. ರಕ್ಕಸಗೊಲೆಯತ್ತಣಿಂ ತನಗೊಂದು ಪಾತಕಂ ಗಡ! ಶಾಂತಿ ಗಡ! ಕುದುರೆ ಗಡ! ಕಾಣ್ಕೆ ಕಪ್ಪಂ ಗಡ! ಬಡರಾಯರೊಳ್ ಪೋರ್ಕೆ ಗಡ! ನಾಡ ಮಾನಸರ ಪಾಂಗಿನೊಂದು ನಡೆವಳಿಯು ರಾಮನಿರವಿಗೇನೆಂಬೆನೊ! ಏನಾನಱಿಯೆನೆ, ಮುನಿ ಪೇೞೆನೆ, ಜಗದ ದೈವಮೆಂಬುದನೆಂದಂ. ಇಂತೆಂಬ ಮುನಿಯ ನುಡಿಗೆ ಸಂತಸುಗೊಂಡು ಶತ್ರುಘ್ನಾದ್ಯರ್- ಆವಂ ಮುನಿ, ಏವಗೆಯೊಳೆಂದನೆಂದು ಬೆಸಗೊಳಲೊಡಮರಣ್ಯಕನಿಂತು ಕತೆಗೆ ಮೊದಲ್ಗೆಯ್ದನದೆಂತೆಂಬೊಡೆ:—

ಜಗದ ಜಂಜಡದ ಕವಡುಮಾಯೆಯ ಬಿಗುಗಟ್ಟಂ ಕಟ್ಟುವಡೆದಾಂ ಮುನ್ನಮಾಗಳಾಗಳ್ ಪಱಿದಿನದ ಪಿರಿಯ ಮುತ್ತಜ್ಜಾಣ್ಮೆಯ ಬಲ್ಲಿದರ ನೆರೆಯ ಮಱೆಯ ನೆರವಂ ಪಾರುತುಮಿರ್ಪೊಡಾಬೆಂ. ಅಂತವರೊಳಜ್ಜಂ ಲೋಮಶನೊರ್ವನಪೂರ್ವಂ ಗುರುವ್ರೈಲ್ದಿರ್ಕುಂ. ಇಂತಿರ್ಪುದುಮಾತನ ಸನಿಯದೊಳೆ ಕೇಳ್ದುಂ ಬಾೞ್ದುಮಿರೆಯಿರೆ ದೈವದತ್ತಣೊಂದು ಜಾಣ್ಮೆ ದಿನದಿನಕೆ ಮನಗೆ ನಲ್ಪಾಗಲೊಡಮಾತನಂ ಬಗೆಮಿಗೆ ಮತ್ತಂ ಮತ್ತಂ ಜಗದ ದೈವದಿರವಂ ಬೆಸಗೊಳುತುಮಿರ್ದೆಂ. ಆಗಳ್ ಕೂರ್ಮೆಯಿನೆನಗೆ ಬಿತ್ತರಿಸಿದನಿಂತು. ಕೇಳೆಲೆ, ಶಿಷ್ಯೋತ್ತಮ! ಆದಿಮಧ್ಯಾಂತಂಗಳಿಲ್ಲದ ಮಾಯೆಗೆ ಮರುಳಾಗದ ಪರಮಾತ್ಮಂ ದೈವಮಕ್ಕುಂ. ತನ್ನೊಂದಾಣತಿಯೊಳೆ ಜಗಮಂ ಪುಟ್ಟಿಕುಂ ಪಾಲಿಕುಂ ಸುಡುಗುಂ. ಇಂತುಮಾತನಯ ಲೀಲೆ. ಈಮಾಟ್ಕೆಯಿನಾಗಳುಂ ಬಗೆವಗೆಯ ತನ್ನೊಂದು ಲೀಲೆಯೊಳ್ ಬಿನದಿಪಂ. ಆತನೆ ನಾರಾಯಣಂ ಈಗಳಿದೆ ರಾಮವೆಸರಿಂ ತಿರೆಯೊಳ್ ಪುಟ್ಟಿರ್ಪನೆಂದಂ. ಅದರ್ಕೆ ಆಂ ಅಂತೇಕೆ ಪುಟ್ಟಿದನೆಂಬುದುಂ ಸವಿಸ್ತರಂ ಸೊಗಯಿಪಂತಿರೆನಗೊರೆದನದೆಂತೆನೆ:—

ಎಲೆ ಮಗನೆ! ಆದಿನಾರಾಯಣನ ಪರಬೊಮ್ಮನ ಪರಮೇಶನ ಗೞಿಗೆಗೞಿಗೆಯ ಪೊಸತೆನಿಪ್ಪ ಲೀಲೆ ಎಮ್ಮನ್ನರ್ಗೆ ದುಜ್ಞೇಯಮಂ, ಅಂತಿರೆಯುಂ ಬಲ್ಲಂತೊರೆವೆಂ ಕೇಳ್. ಮುಮ್ಮೆಯ್ಯಾ ದೋಸದೆಸಕದು ಪಟಳದ ತಾಮಸರ್ ಲೋಕಕಂಟಕರಾಗೆ ರಕ್ಕಸರೆಸಿಸಿ ಮುಱುಮೆಯ್ಯೊಳೊಗೆದು ಪನ್ಯಕಮ್ವಂಗಳ್ಗಡರ್ಗೆಯ್ದು ಬಡವುಬಱಮಾನಿಸರಂ ಕೊಂದು

ತಿಂದು ಬಿರ್ಕುೞಿಸಿ ಪೆರ್ಕೞಿಸಿ ತಿರೆಗೆ ಪೊಱೆಯಾದರ್. ಇಂತು ಬಂದಿಗಾಱರತ್ತಣಿನೊಂದು ಪಾಟಿಗ್ರೈಮೆ ಕೇಡಂ ಸೈರಿಸದೆ ಸುರರೆಲ್ಲರ್ ನಾರಾಯಣಂಗೆ ದೂಱಲೊಡಮಾತಂ ಶರಣ್ಬೊಕ್ಕ ದೇವರ್ಕಳಂ ಸೈತಿಟ್ಟು, ತಾಂ ತಿರೆಯೊಳವತರಿಸಿ ಕೂಱಿರ ಕುತ್ತಮಂ ಪತ್ತುವಿಡಿಸಿ ಕಾವೆನೆಂದು ನಂಬಿಸಿ ಕಳುಪಿದಂ. ಮತ್ತಂ ತನ್ನೊಳ್ ತಱಿಸಂದು ಪೊಡವಿಗಿೞಿತಂದು ಅಯೋಧ್ಯೆಯೊಳ್ ದಶರಥಂಗೆ ರಾಮನೆಸರಿಂ ಮೆಯ್ವೆತ್ತು ಪುಟ್ಟಿ ಮುನಿಯ ಯಾಗಮಂ ಕಾವ್ದೊಂದು ಬಗೆಯಿನೆಳಮೆಯೊಳೆ ಪೊಱಮಟ್ಟು, ಕಾಟದ ತಾಟಕೆಯುಂ ಕೊಂದು, ಮಾರೀಚನಂ ಮಾರಿಗೆ ತುತ್ತಿಸಿ, ಮತ್ತಿನ ಪರಿಣಯದೊಳ್ ಸೀತೆಯುಂ ಮದುವೆನಿಲ್ತು, ತನ್ನ ಮಡದಿಯ ಕತದಿಂ ರಾವಣಕುಂಭಕರ್ಣಾದಿರಾಕ್ಷಸರಂ ಮಡಿಪಿ ಸುರರ್ಗಂ ನರರ್ಗಂ ನಿಚ್ಚಸೊಗಮನಾಗಿಸಿ ಮೋಱೆಗಳಯೋಧ್ಯೆಯೊಳ್ ಸೋದರರ್ವೆರಸು, ಪೊಡವಿಯನಾಳ್ಗುಂ. ಕೆಲವಾನುಂ ದಿನಕಶ್ವಮೇಧಮೊಂದು ನೆವದಿಂ ತೆರಳ್ದು, ನಾಡಂ ದಾಱಿಟ್ಟು, ಬಳ್ಳಿದರಂ ಪೊರೆದು, ಕೂಱಿರಂ ತತ್ತಱಿದುೞಿಸುಂ, ಬರ್ಕುವಮಾತನಡಿಯಾಣತಿಯೊಳೆ ಸೇನೆ. ಆಗಳ್ ನೀನವರಂ ಕಂಡು ಮನ್ನಿಸಿ, ಬೞಿಯುಂ ಸತ್ಯಾವತಿಗೆ ಪೋಗಿ, ರಾಮನಂ ಕಂಡು, ನಿನ್ನೀಸಂಸೃತಿಯ ಬಲ್ಪೊಱೆಯನಾತನೊಳೆಱಪ್ಪಿಸೆಂದು ಮುನಿ ನುಡಿದಂ. ಇಂತಿದು ಪೂರ್ವವೃತ್ತಾಂತಂ. ಅಂತದುಕಾರಣದಿಂ ನಿಮ್ಮವರಂ ಕಂಡು ಪೊಂಪುೞಿವೋದೆಂ. ಇನ್ನೆಮ್ಮ ನಿಮ್ಮ ಪೆಂಪಿನ ಕೂಟಮಯೋಧ್ಯೆಯೊಳಕ್ಕೆ! ಎಂದು ಶತ್ರುಘ್ನರಂ ಮನ್ನಿಸಿ, ಮುಂತಣ ಪಯಣಮಂ ಬೞಿಯಿಸಿ, ತಾನಯೋಧ್ಯೆಯತ್ತಲ್ ಮನೋವೇಗದಿಂ ನಡೆದಂ.

ಎಂಬಲ್ಲಿಗೆ

ಶ್ರೀರಾಮಾಶ್ವಮೇಧದೊಳ್

ಅರಣ್ಯಕಮುನಿದರ್ಶನಂ ತ್ರಯೋದಶಾಶ್ವಾಸಂ

ಸಂಪೂರ್ಣಂ.

## ಚತುರ್ದಶಾಶ್ವಾಸಂ.

ಬೆಳ್ತಿಗೆಗಣ್ಣ ಪೆಣ್ಣೆ! ನನೆಯೊಂಬಿನ ಕೊಂಬಿನ ನಾಣೆ! ನಾಣೆ ನಿಕ್ಕುಳಿಸಿದ ಕೈಯ ಮೆಯ್ಯ ನಱುಗಂಪಿನ ಸೊಂಪಿನ ಚೆಲ್ಲಗಾರ್ತಿ! ಕೇಳ್.

ಮತ್ತಮಾಗಳ್ ಶತ್ರುಘ್ನಪುಷ್ಕಲಲಕ್ಷ್ಮೀನಿಧಿಸುಗ್ರೀವಪ್ರಭೃತಿವೀರಾಗ್ರಗಣ್ಯರ್ ಅರಣ್ಯಕನನಯೋಧ್ಯೆಯತ್ತಣ್ಗೆ ಬೀೞ್ಕೊಟ್ಟು ತಾಂ ಮುಂದೈದಿವರ್ಪುದುಂ; ಹಯಂ ತಾಂ ತನಗೆ ತೋಱಿದ ಕೂರ್ಪಿನ ಪೆರ್ಮೆಯಿಂ ಸೊಮ್ಮುವೆರ್ಚಿ ದೊಮ್ಮಳಿಸಿ ಕಿಚಿಕಿಲ್ದು ಬಿಮ್ಮನೆ ನಡೆದು ಬೞಿಯ ಪ್ರೀತಿಯುಂ ಮಿಕ್ಕು ಪೊಕ್ಕು ದಿಕ್ಕುಗೆಟ್ಟು ಮುೞುಂಗಿ ಕಣ್ಮಾಯಮಾಯ್ತು. ಅನಿತಱೊಳಾಹಯದ ಬೆಂಬೞಿಯ ಕಾಪಿನಾಳ್ಗಳುಂ ತಪ್ಪ ಕಣ್ಗೆಟ್ಟನಿರವಂ ಕಂಡಡಿಗಡಿಗಂಡಲೆದು ಕಂಗೆಟ್ಟು ಬೆದಱಿ ತಳಮಳಂಗೊಂಡು– ಜೀಯ! ಬಿನ್ನಪಂ ಬಿನ್ನಪಂ. ನೀವ್ಪೊರ್ಕ್ಕ ಕುದುರೆಯುತ್ತವೇನಾದುದೋ, ಕಾಣೆವು. ನೋಡೆಪ್ಪಡಿಂತೀಪ್ರೋಚ್ಚವುರಿಗುಱೆಯನೊಳಕೊಂಡ ಕಡಲ ಗುಣ್ಪಿಂದೆಸೆಗುಂ. ಪುಗಲೆಮಗಂ ಬಸಮಲ್ತು. ನೀಮೆ ನಡೆತರ್ಪುದೆಂದು– ದಾಶರಥಿಗೆ ತಿಳಿಸಲೊಡಂ; ಪಗೆಗಳ ಪಗೆಯುಂ ಕಟ್ಟೆಚ್ಚರಿಯಿಂ ಟೆಬ್ಬರಿಸಿದ ಮನದಿಂ ವಾಜಿ ಸೀರೊಳಾಯ್ತು! ಹಾ! ಕೆಟ್ಟುದು ಕೆಟ್ಟುದು ಸಜ್ಜನ ಕಜ್ಜಂ. ರಾಘವನ ಜನ್ನಕ್ಕೆಡರಿಂದಿಂಗೆ ಬಂದುದೇ, ಮುಂತೇಂ ಬಟ್ಟೆ, ದೈವಮೇ! ಎಂದು ಸುಮತಿಯುಂ ಮಂತ್ರಣಂಗೇಳ್ವುದುಂ; ಸಚಿವನಿಂತೇಂ ಕಳವಳಂ! ಜಗದ ದೈವದ ಜನ್ನದ ಬನ್ನದ ಮಾತುಂಟೆ! ಪೋಗದು ಪೋಗದು ಸಾಜಂ ವಾಜಿ! ಏಂ ಪ್ರೋಚ್ಚವೆಣ್ ತಾನೆ ಬೈತಿಟ್ಟುದೋ? ಅಲ್ಲದೊಡೇಂ? ಕಿನ್ನೆಲದ ನಾಗರೇಂ ಕೊಂಡುಯ್ದು ಕಟ್ಟಿದರೋ? ಅಂತದುಕಾರಣಂ ತಳ್ವದೆ ನೀನುಂ ಭಾರತಿಯುಂ ಮಾರುತಿಯುಂ ತೊಱೆಯ ಬಸಿಱಿಂ ಪ್ರೊಕ್ಕಱಿಸಿಂ. ನಿಮಗಿದು ಸಾಧ್ಯಮೊಂದಱಿಪದಂ. ಅನಂತರಂ ಸುಮತಿಯೆಂದುದನೊಪ್ಪಗೊಂಡು ಶ್ರೀರಘುವರನ ಪದಯುಗಮಂ ಜಾನಿಸಿ ಜಲದೇವತೆಯುಂ ಭಾವಿಸಿ ತಾಂ ಮೂವರುಂ ಮುಮ್ಮಿಕ್ಕಿ

ಮಡುವಿನ ನಡುವಣ ತಡಂಗುಂಡಿಯು ತೞಮಂ ಸಾರ್ದರ್. ಇಂತಿಱಿತಂದೆತ್ತಂ ನೋೞ್ಪುದುಂ; ನೀರೊಳೊಳಗೊಳಗೆ ಪೊಸತೆಸೆಪ್ಪ ನಾಡ ಗೋಪುರಂ ಕಣ್ಗೊಳಿಸಲೊಡಮಚ್ಚರಿಯಿಂ ನಟ್ಟಾಲಿಯಿಂ ದಿಟ್ಟಿಸಿತುಂ ಪೊಱಲ ಬಾಗಿಲೆಡೆಗೆಯ್ತಂದರ್. ಅಲ್ಲಿ ಪಡಿಗೆಡೆಯ ಪಡಿಯಱತಿಯರ್ ತುಂಬಿಗುರುಳ ಬಿಂಬಾಧರದ ಕಂಬುಕಂಧರದಂಬುಜನೇತ್ರೆಯರ್ ಕೆಯ್ಯ ಕಂಬಿಯೊಳ್- ಮಾಣ್ ಮಾಣೆಮೆಂದು ಗದಱಲೊಡಮಾಂಜನೇಯಂ ಕಿನಿಸಿಂ- ಇಂತುಮೊಂದು ಪಡಿಬಂದಮೇಂ? ಕೇರಿಯ ಮುಂಬೆಯ ಪಂದಿಯಂ ಜವಿರ್ದ ತಡೆಸಂತಿರೆಮ್ಮಂ ಜಡಿದು ಮಾಣಿಪ ಕೀೞ್ನಾಡ ಪೆಣ್ಗಳ್, ನಿಮಗೆ ಮೂಜಿರ್ದ*ವೇಡಾ! ಪೋ! ರಘುರಾಮನ ಬಂಟರಂ ತಾಂಟಲ್ ಬಗೆವ ದಿಟ್ಟೆಯರಂ ಪುಟ್ಟಿಸಿದ ಗಾಂಪಿನ ಬಿದಿಯೆ ತಲೆವ್ರೋಕಂ ಎಂದಂ. ಆಗಳಾೞಗವೆಣ್ಗಳೊಳೊರ್ವಳೊಳಪೊಕ್ಕು ತಮ್ಮೊಡತಿಗೀಪರಿಯಂ ವಿವರಿಪುದುಂ; ಜೋಗಿಣಿ ಬರವೇೞ್ಕೆಂಬುದುಂ; ಬೀಡಂ ಬೀರರ್ ಪುಗುತರ್ಪುದುಮೊರ್ವೊರ್ದಲೊಳಾಯ್ತು. ಇಂತು ಬಂದೆಱಗಿ ತಮ್ಮಿರವಂ ಕೇಳಿಸಿದ ಮೂಜಗದ ಮುಂದಾಳ್ಗಳಂ ಮನ್ನಿಸಿ ನರೆತ ನವಿರ ಬಱತ ಮೊಯ್ಯ ತವಸಿಣಿ-ನಿಮ್ಮಾಬಲ್ಮೆಯ ಜಂಕಣೆಗಂ ಕಣೆಗಂ ಚಳಿತು ಮೆಯ್ಗುಡುವರಾಗರೀನಾಡ ಪೆಣ್ಗಳ್. ದೇವಿಯೊಂದು ನೆರವಿಂತುಟು. ಆದೊಡಂ ನೀಂ ಕೋದಂಡದೀಕ್ಷಾಗುರುಗೆ ಬಂಟರಪ್ಪಿನಂ ನಿಮ್ಮೊಳೆಮಗೆ ಮುನಂ ಬಾರದು. ಇದೆ ಬಂದ ಹಯದ ಬಂದಿಗಳವರ್. ಅಂತದುಕಾರಣಂ ನಿಮ್ಮಾಕುಮರೆವೆರಸು ಮರಲ್ದು ತಿರೆಯತ್ತಲ್ ಪೋಗಿಂ. ಶ್ರೀರಘುವರಂಗೆಮ್ಮ ಬಿಕುತಿಯಂ ಪೇೞಿಮೆಂದು ಜೇಂಕರಿಸಿ ನುಡಿವುದುಂ- ಶತ್ರುಘ್ನಂ ಮುಂತಪ್ಪ ಬಲ್ಪಿನ ಜಗಜಟ್ಟಿಗಳ್ ದೈನ್ಯಮಂ ತೋಱಿ- ಮುತ್ತಜ್ಜಿ ಜೋಗಿಣಿ! ಇಂತೇಪರ್ಟ್ಟ ನಿನ್ನ ಮೈಮೆಯುಂ ಬಗೆಯಪೞಿವುಗೇಡಿಂ ನಾತೆ ನಿಮ್ಮವರಂ ಚಾಳಿಸಿದೆವು. ಎಂತುಂ ಮನ್ನಿಸಿ ಕಾವುದೆಂದು- ಮೋಣಂ ತಲೆವಾಗಿ ನಿಂದಿರ್ದರ್. ಅದಕಾರ್ದಜಕ್ಕಿಣಿ ಲಾಲಿಸಿ, ಮಾಲಿಸಿ-- ನಿಮ್ಮೊಳೆನಸುಂ ತಪ್ಪಿಲ್ಲ. ಮೈವಳಗಿದು ಸಾಜಂ, ಎಂದು ಸೈತಿಟ್ಟು ಬಗೆವಗೆಯ ಕೋಲ್ಗಳಂ ಬೇಱೆವೇಱೆ ಮೆಚ್ಚನಿತ್ತು ಕಳಿಪಿದಳ್. ಮತ್ತಮಾಬೀರರ್ ಹಸಾದಮೆಂದು ಪಟಿ ಮು

ಸುಪಿನ ಜೋಗಿಣಿಯುಂ ಬೞಿವಂದು ಬಲಂಗೊಂಡು ದೇವಿಯ ಪೆರ್ಮೆಯುಂ ಭಾವಿಸುತುಂ ಪಯದೊಡಗೂಡಿ ಮುನ್ನಿನೆಡೆಗೈತಂದು ಸರ್ವರ್ಗಮೀಕತೆಯುಂ ಬಣ್ಣಿಸಿ ಪೇೞ್ದು ಸಂತಸದಿಂ ಮುಂತೆಮುಂತೆ ನಿಚ್ಚವಯಣದಿಂ ಪಯಣಂಬೋದರ್.

ಇಂತೆತ್ತಿ ನಡೆವ ಪಡೆಗೆ ಮುಂದೆಸೆಯೊಳೊಂದು ಪೊೞಲ್, ಪೊೞಲರಸಿಂಗೆ ಪೊಸಕಲಿಲೆಂಬಂತಿರೊಪ್ಪುವ ಪುೞಿಲೊಟ್ಟಿಲಿಂ ಬೞಿವಿಡಿದ ತಣ್ಣೀರ್ಗೊಳದಿಂ, ಬಿಡುಜಡೆಯೆನೆ ಪರಿವ ಕಾಲ್ವೆಯಿಂ ಪುರರಮೆಯ ಪಸುರುಡೆಯ ಮಾೞ್ಕೆಯಿಂ ರಾಜಿಪಾರವೆಯಿಂ ನಿಡುಮೊಲೆಗಳೆನೆ ತೋರ್ಪ ಮಾಡುವೆಟ್ಟಂಗಳಂ ಕಣ್ಗೆವಂದು, ಬಿಂಜದ ನಿಗರಂ ಮುಂಜಿನ ಬೆಳ್ಪು ನಂಜುಂಡನ ಭೂತಿ ರಂಜಿಸಲೊಡಮೆಸೆವ ಪರ್ವ್ಯಂಗಳಂ ಚೆಲ್ವಾಯ್ತು. ಇಂತು ದೇವಪುರಂಬೋಲ್ ಪೆರ್ಮೆವೆತ್ತ ದೇವಪುರಮುಂ ವೀರಮಣಿವೆಸರ ವೀರಮಣಿಯೊರ್ವನರಸಾಳ್ಗುಂ. ಈತಂಗೆ ರುಕ್ಮಾಂಗದನೆಂತಂತು ಹರಿಭಕ್ತಿಗಿಂಬಾಗಿ ಸೊಬಗುಸಿರಿಯ ನಳಿದೋಳ್ಗ ರುಕ್ಮಾಂಗದಮೆನೆ ಸಲ್ವ ರುಕ್ಮಾಂಗದನೆಂಬ ಸೀಮಂತಪುತ್ರನುಂಟು. ಇತ್ತಲಾಗಳೀತನಂತಪುರದ ಸೊರ್ಕುಂಜವ್ವನದ ಕನ್ನೆವೆಣ್ಗಳೊಡವೆರೆದು ವನವಿಹಾರದೊಳಿರ್ದಂ.

ಆಗಳ್ ಬಡನಡುವಿನ ಪಿಡಿನಡೆಯ ಕಾಂತೆಯರ್ ಬಿಡುಜಡೆಯ ನಿಡುಬಾಸೆಯ ಜೋಸೆಯರ್ ನಳಿದೋಳ ಸುೞಿವೊಕ್ಕುೞ ಚೆಲ್ವೆಯರ್ ರಂಗುನುಡಿಯ ಬಿಂಗಗೆಕ್ಕೆಯ ಜಾಣೆಯರ್ ಬಟ್ಟಮೊಗದ ಅಗಸೆಗಿವಿಯ ಸೊಗಸುನುಡಿಯಂಗನೆಯರ್ ಮೆಲ್ಲಡಿಯ ಚೆಲ್ಗಂಗಳ ಚೆಲ್ಲಗಾತ್ರಿಯರ್ ಸಂಕುಗೊರಲ ಕೊಂಕುಗುರುಳ ನೀಱೆಯರ್ ತಳಿರ್ಗೈಯ ಬೆಳರ್ಮೆಯ್ಯ ಬಾಲೆಯರ್ ಸೆಂಡುಮೊಲೆಯ ದಿಂಡುದೊಡೆಯ ಮಿಂಡಿಯರ್ ಬಂಡುಣಿವೆರೆಯನ ದಂಡಾಳ್ಗಳೆನೆ ಪಿಂಡೆೞ್ದಲ್ಲಿಗಲ್ಲಿಗೆ ಸಂಚರಿಸಿ ಮೆಲ್ಲಡಿಯೊದೆಯಿಂ ಚೆನ್ನಸುಗೆಯುಂ ತಳಿರ್ಚೆಯುಂ, ಮುದ್ದುಮೊಗದ ಬೆಳ್ನಗೆಯ ಪರ್ಬುಗೆಯಿನರೆಮುಗುಳನಲರ್ಚೆಯುಂ ಚಂಚಳಿಪ ಕಡೆಗಣ್ನೋಟದ ಕೂರ್ಪಿಂ ನನೆಗೆ ಕೊನೆಗೆ ಮೊನೆವೆರ್ಚಿಸಿಯುಮೋರೊಂದೆಸೆಯ ಚೆಂದಳಿರಂ ಚಿವುಡಿಯುಂ, ಬಿರಿಮಲರ ಗೊಂಚಲಂ

ಮುರಿಗೊಟ್ಟಿಯುಂ, ನೆಲನೊಳುದಿರ್ದ ಕಱಿಪ್ರೂವನಾಯ್ದು ನೆಱೆಯನೊಡಗೂಡಿ ತಿರಿದರ್.

ಇಂತು ನಸ್ಮೆ ಮಿಗೆ ಬಿನದಿಪ ಕಾಮಿನಿಯರ್ಗೆ ಕಂಜೊಡರೆನಸುಂ ತಾಱೆ ಮೊಗಂ ಬಾಡೆ ನೊಸಲೊಳ್ ಬೆಮರ್ ಪನಿಯೆ ತೆಳ್ಗದಂಪು ಕೆಂಪಡರೆ ಎರ್ದೆ* ದಡದಡಿಸೆ ಸುಯ್ ಪೆರ್ಚೆ ನಡೆ ತಡೆವಡೆ ಬಿಸಿಲ ಜಳಕಂ ನೆಲಕಂ ಬೞಿಕ್ಕೆ ತಲೆದೋಱಲೊಡಂ ಮುಂತೆಸೆವ ತಿಳಿಗೊಳನಂ ಕಂಡು ನೀರಾಟಕ್ಕೆಳಸಿದರ್. ಅನಂತರಮಾಕಾಂತೆಯರ್ ಸರಸ್ಸಿಗೆಯ್ತಂದು ಪಾಸಿನೊಸಗೆರ್ಗೆಲ್ಲ ಮೇಲೆ ತ್ರಿಱಿತಂದ ಪೂಗಳಂ ಬೈತಿಟ್ಟು ಚೆಂದಱಿರಂ ಮುಚ್ಚಿ ನಿಚ್ಚದಲ್ಲದ ರನ್ನವಚ್ಚವಂ ತೆಗೆದಿಟ್ಟು ಮಿಱುಮಿಱುಗುವ ಪಟ್ಟುಡೆಯಂ ಸಡಿಲ್ಚಿ ಸಾಜದ ರಂಗುಸೀರೆಯನುಟ್ಟು ಜಲಕೇಳಿಗೆ ಮೇಳವಿಸಿದರ್. ಅವರೊಳೊರ್ವಳ್ ಲಿಕುಚಕುಚದ ನಸೆಗಾತ್ರಿ ಕಣ್ಮಿಮಿರೆ ಕನ್ನವುರಂ ಸೂಸೆ ಕೈವಳೆಯುಲಿಯೆ ಕೌಂಕುಳ ಮೊದಲ್ ತೆಱಂಬೊಳೆಯೆ, ತನ್ನೊಂದು ಬೆಡಂಗಿನ ಬಾಮದಿಂ ಬಳ್ಕಬಾಗಿ ಕುಪ್ಪಸಮಂ ಸಡಿಲ್ಚಿದಳ್. ಮತ್ತಮೊರ್ವಳಟ್ಟಸದ ಜಗದಿಟ್ಟೆ ಸೋರ್ಮುಡಿಯಂ ತುಱುಬಿ ಕಟಿಲಂ ಕಟಿಚ್ಚಿ ಮುತ್ತಿನೆಕ್ಕಸರಮಂ ಕೆಲಕಿಟ್ಟು ಮೇಲುದುಮಂ ನಡುವಿನೊಳ್ ಬಿಗಿದು ದಿಮ್ಮನೆ ನೀರಸಿಱಿದಳ್. ಪೆಱಳೊರ್ವಳ್ ಗಾಡಿಯ ಸಿಂಗಾಡಿಯ ಪುಬ್ಬಿನ ಗರುವೆ ಮೊಲ್ಲೆಯ ಚೆಲ್ಲೆಯನಂ ನೀಡಾಡಿ, ಹಿಣಿಲಂ ಬಿಡಿಬೆರ್ ಕಿಱುವೆರಲ ಪರಲುಂಗುರಮಂ ತೆಗೆದಿಟ್ಟು ಉಡೆಯಂ ಬಿಟ್ಟು ಚಲ್ಲಣಮನುಟ್ಟು ಮೆಯ್ಗೊಟ್ಟು ಕೊಳನಂ ಪುಗುತಂದಳ್. ಅಗಳ್ ರುಕ್ಮಾಂಗದಂ ಬಾಸಿಗಮಂ ತೋಳ ಬಂದಿಯಂ ಕೊರಲ ಪದಗಮಂ ನೇವಳಮುಮನೆತ್ತಿಟ್ಟು ದೇಸಿಯ ಗಂಡುಡಿಗೆಯನುೞಿದು ಲೇಸಿನುಡೆಯನಳವಡಿಸಿ ತೊಟ್ಟನೆ ಕೆಳದಿಯರೊಡಗೂಡಿ ನೀರೊಳಾಟಂಬೊಕ್ಕಂ. ಸೀರ್ವನಿ ಸಿಡಿಯೆ ತೆರೆ ಮುಸೆಗೆ ಕೊಳಂ ತಳಮಳವಾಗೆ ಮೀಂಗಳ್ ಮೆಯ್ಗರೆಯೆ ದಱಿಂಬೞಿನೆ ಕೈಕಾಲ್ಗಳೊಳೀಸುವ ಕಾವನ ಪಟ್ಟದಾನೆಗಳಂಬೋಲಾಡಿದರ್ ಬಾಲೆಯರ್. ದುಮ್ಮಿಕ್ಕುವ ಮುೞುಂಕುವೆೞ್ದು ಪೋಗೆವ ನೆಗೆವಾಟಮೆ ನೀರೊಳಳುಂಬಂ. ಮತ್ತಮೊರ್ವರ್ಗೊರ್ವರ್ ನೀರಂ ಸೂಸಿಯುಂ ಪೂಸಿಯುಂ

ಮುಕ್ಕುಳಿಸಿಯುಂ ಜಕ್ಕುಳಿಸಿಯುಮೊರ್ವರನೊರ್ವರ್ ಪಿಡಿದುಮೆತ್ತಿಯುಂ ನೂಂಕಿಯುಮಡರ್ದುಂ ಪೊಯ್ದುಮೊಯ್ದುಂ ಬಯ್ದುಂ ಕೊಳನೊಳಾಡಿದರ್.

ಇಂತು ಕಾಂತೆಯರ್ ನಡುಕಂ ತಲೆದೋಱೆ ಮೆಯ್ ಬೆಳ್ಪೇಱೆ ತುಟಿ ಬಣ್ಣಂಗುಂದೆ ಕಣ್ಗಳ್ ರಾಗಮನೊಂದೆ ಮೊಗಂ ಕಳೆವೆರ್ಚೆ ಮನಂ ದಣಿಯೆ ಚೊಕ್ಕಳದಿಂ ನೀರೊಳಾಡಿ ಮಿಂದು ಬಂದು ತಡಿಯನಡರ್ದು ನನೆಗಪ್ಪಡಮನುೞಿದು ಪೊಸಸೀರೆಯುಂ ನಿಱಿವಿಡಿದಿಟ್ಟು ಕಂಚುಕಮಂ ಬಿಗಿದು ಬೈತಲೆಯುಂ ತಿರ್ದಿ ಮುಡಿಯಂ ಗುಗ್ಗುಳದಿಂ ಪೊಗೆದಾಱಿಸಿ ಪೂವಂ ಸೂಡಿ ಪಣೆಗೆ ಪುಲಿವಜ್ಜೆಯ ಬೊಟ್ಟನಿಟ್ಟು ಕಣ್ಗೆ ಕಜ್ಜಳಮಂ ತೀಡಿದು ಕಪೋಲದೊಳ್ ಮಗರಿಗೆಯುಂ ಬರೆದು ಮೆಯ್ಗೆ ಬಾವನ್ನಮಂ ಪೂಸಿ ಅಡಿಗಲತ್ತಿಗೆಯಂ ಲೆಪ್ಪಂಬೞಿದು ಬಗೆವಗೆಯ ಪೊಂದೊಡವುಗಳಂ ಪಸದನಂಗೊಂಡು ಮೀಂಬಲಿಯಿಗೆಯನ ಕುಲದೇವಿಯರೆನೆ ಕಣ್ಗೆಂಬಾದರ್. ರಾಯುಗುವರನುಂ ಸಡಗರದಿಂ ಜಳಕಂಬೊಕ್ಕು ಪೊಱವಂದು ಕೈಗುಣದ ಕಾಮಿನಿಯರಿಂ ಸಿಂಗರಂಗೊಂಡು ಕಪ್ಪುರವೀಳೆಯುಮಂ ಸವಿದು ಬಳ್ಳಿವನೆಯ ಚೆಂದಳಿರ ನಲ್ಪಾಸಿನೊಳ್ ಪೆಣ್ಬಡೆವೆರಸು ತೆಂಗಾಳಿಗೆ ಮೆಯ್ಯನೊಡ್ಡಿ ಗಾಡಿಯಿಂ ಕುಳ್ಳಿರ್ದಂ. ಎಲೆ ಸುಭಗೆ! ಆಪ್ರೊತ್ತಿಂಗೆ ಸೀತಾರಮಣನ ಯಜ್ಞತುರಂಗಮುಂ ಪಲನಾಡುಗಳಂ ತೊೞಿತೊೞಿಬ್ದವನಮನೆ ಪುಲ್ಗೆಳಸಿ ಪೊಕ್ಕುವಂದುದು. ಆಗಳಂತಮಂ ಕಂಡೊಡನೆ ಚಟುಲನಯನದ ಕುಟಿಲಕುಂತಳೆ ತಮ್ಮಾಳ್ಗಂಗೀವಿವರಮನಱಿಕೆಗೆಯ್ವುದುಂ ಚಿತ್ರಾಂಗದನಜ್ಜರಿದಾಳ್ದ ಮಾಹಮಂ ಬರಿಸಿ ನೊಸಲೊಳೆಸೆವ ಓಲೆಯಿರೆ ಕೊಂಡಿಂತು ವಾಚಿಸಿದನದೆಂತೆನೆ:—



ಲೇಸಿನ ನೇಸಱ ಬಳಿಯೊಳೊಗೆಯೆ ಪೆರ್ಚಿದ ಕಾಯ್ಪಿಂ ಮೇಱಿಸಿಪ್ಪ ಮನುಕುಲದ ರಾಜರ ಪಟ್ಟವಣೆಯನೇಱಿ ಬಳಿಸಂದಱಿವುಂ ತನ್ನೊಳೊಪ್ಪೆ ದಶರಥರಾಮಂ ತನ್ನಂ ಸಿಬ್ಬಮೋಲ್ಪೈಪ ಸಕಲಸಾಮಂತಸಂದೋಹಕ್ಕೆ ತನ್ನಯ ಕೂರ್ಮೆಗಡಲೆಡೆಯೆಡೆಯೊಳ್ ಮಱೆಗೊಟ್ಟು ಸಾಕೇತಪುರಮನಾಳ್ಗುಂ. ರಾವಣಕುಂಭಕರ್ಣರ್ ಮುಂತಪ್ಪ ಬೊಮ್ಮರ

ಕ್ಷಸರಂ ಕೊಂದು ಬಂದೊಂದು ಬೊಮ್ಮೆತಿಯ ಶಾಂತಿಗೆಂದು ಮುನಿ ಯಾಜ್ಞೆಯಿಂ ಜನ್ನಮಂ ಕೈಕೊಂಡು ತಾಂ ದೀಕ್ಷೆಯೊಳಿರ್ದು ಸೋದರನ ಲವಣಾಂತಕನ ಕಾಪಿನೊಳ್ ಹಸುವಂ ತಿರೆಗೆ ಬಿಟ್ಟಿರ್ಕುಂ. ಎತ್ತಾನುಂ ಪೆರ್ಕಳಿಕೆಯ ಗಂಡರಿರೆ ಕಟ್ಟುವುದು ಕಾದುವುದು. ಮೊನೆಯೊಳ್ ಶತ್ರುಪಂ ಗೆಲ್ಗುಂ ಕೊಳ್ಗುಂ. ಕಟ್ಟಲಾಱದ ಬಣಗುಗಳ್ ಕಾಣ್ಕೆಗೊಟ್ಟೆಮ್ಮವರಂ ಕಂಡು ಬಾೞ್ವುದು.

ಕಮಲನೇತ್ರೆ! ಕಮನೀಯಗಾತ್ರೆ! ಇಂತು ಬರೆದೊಕ್ಕಣೆಯಂ ವಾಚಿಸಿ ಬೆರಲಮೂಗಿನೊಳ್ ತಲೆದೂಗಿ ಶೌರ್ಯಾಟೋಪದಿಂ ರುಕ್ಮಾಂಗದಂ ಮೇಳದ ಪೆಣ್ಬಡೆಯಂ ದಿಟ್ಟಿಸಿ— ಆಃ! ಮನುವಿನ ಮಾರ್ಗಂ, ಭಾನುವಿನ ತೇಜಂ, ತಕ್ಕುಱಿಯದೆ ಬಱಿಸಲ್ವಿನನಿಸಿತೊಂದು ಪೆರ್ಮೆಗಣಪೊರ್ದನಕ್ಕುಂ ರಾಮಂ. ಏಂ ದೆಸೆದೆಸೆಯ ಬಾಳ್ಗೆಟ್ಟ ಕೀೞರಸುಗಳ್ ಬೋಡಿಗಳಾಗರೆ? ತಾನೊರ್ವನೆ ಜಗಕ್ಕೆ ಗಂಡಂ, ಮಿಕ್ಕುೞಿದರಸುಗಳೆಲ್ಲರ್ ಬಾಂಬರೆಂದೆ ಬಗೆವಂ ರಾಮಂ; ಅಲ್ಲದೊಡೇಂ ಕೊಬ್ಬಿರ್? ಏಂ ಪನ್ನತಿಕೆಯೊ? ಏಂ ಜಂಬವೊ? ತಾಂ ಗಡ! ರಕ್ಷಸನಗೆಯಂ ಗಡ! ಪಾತಕಂ ಗಡ! ಯಜ್ಞಂ ಗಡ! ಇಂತೊಂದು ನೆಪದಿಂ ಪಣದಾಸೆಗೆ ಈಪಸುವನಾಡಿಸಿ ಬೇಡಿಸಿ ಕೂಡಿಸುವ ಗಾರುಡಿಗತನಮಂ ಕಂಡೋರೆದ ಜೋಗಿಯ ಜಾಣಂ. ಅಕ್ಕೆ, ಮೊನೆಯೊಳ್ ಗೆಲ್ವ ಬೀರರ್ ಬರ್ಕೆ. ಅನ್ನೆವರಮೆಮ್ಮ ಸಾಲೆಯೊಳ್ ಕಿಱುಕುಳದ ಬಡವ್ರಕುಮರೆಗಳ ಸಾಲೆಯೊಳ್ ಕಟ್ಟುವೆನೆಂಬ ನಿಶ್ಚಯದಿಂ ಪಿಡಿದು ಸ್ತ್ರೀಜನಂಬೆರಸು ಪುರಕೆ ನಡೆತಂದಯ್ಯನೊಳೀಪವಣನನುಸಿರ್ದಂ.

ಆಗಳ್ ವೀರಮಣಿನೃಪವರಂ ಕುವರನಾಡಿದ ಪೊಸಪರಿಯುಗ್ಗಡದ ಕಾಳೆಗದ ಕಟ್ಟೆಸಕದ ಮಾತಂ ಕೇಳ್ದು ತನ್ನೊಳಾಲೋಚಿಸಿ ತನಗೆ ಮನೆಯಳಿಯನೆನಿಪ್ಪ ಮಹಾದೇವನೊಳೀಪವಣಂ ಮಂತ್ರಣಂಗೊಂಡಂ.

ಮನೋರಮೆ— ಎಲೆ ಜಾಣ! ಅಂತೇಂ! ಮಹಾದೇವಂ ರಾಯಂಗಂ ತಳಿಯನಾದಂ?

ಮುನ್ನಣಂ— ಕೇಳಾರಾಯಂಗೆ ಇಕ್ಷುಮತಿವೆಸರೊಳೊರ್ವ ಮ

ಗಳುಂಟು. ಈಪೆಣ್ಮಣಿಯುಳವೆಯೊಳ್ ಪರಮೇಶ್ವರನ ಮೈಮೆಯಂ ಕೇಳ್ದು ತನಗಾತನೆ ರಮಣನಾಗಲ್ವೇಳ್ಕುಮೆಂದು ಬಗೆದು ನಿಚ್ಚಂ ಶಿವನಂ ಜಪಿಸುತಿರ್ದಳ್. ಇಂತಿರ್ಪುದುಮೊಂದುದಿನಂ ಬಾಲೆಯ ಬಾಲಭಕ್ತಿಗೊಲ್ದು ಕಪರ್ದಿ ಕನಸಿನೊಳ್ ಬಂದು ನಾಳಿನ ಪಗಲೊಳ್ ತಾನೆ ವಿಪ್ರವೇಷದಿಂ ಬಂದು ನಿನ್ನಂ ವರಿಪೆನೆಂದೊರೆದಂತರ್ಹಿತನಾದಂ. ಇಂತೀವಿವರಮನಯ್ಯಂಗಱಿಪುವುದುಂ ಮಱುದಿನಂ ಕನಸಿನೊಳಂತಿರ್ದೊರ್ವನುರಿಗಣ್ಣ ಪಾರ್ವಂ ರಾಯನೋಲಗಕ್ಕೈತಂದು ಕನ್ಯಾರ್ಥಿ ತಾನೆಂದಂ. ಅಗಳರಸನೀತನೆ ಸಾಕ್ಷಾದೀಶ್ವರನೆಂದು ಬಗೆದು ಮಗಳಂ ಮದುವೆಯೊಳ್ ಕೊಟ್ಟಂ. ಇಂತು ಮದುವೆನಿಲ್ವುದುಂ ಶಿವಂ ರಾಯನ ದೃಢಕ್ಕೆ ಮೆಚ್ಚಿ ತಾಂ ಮೆಯ್ದೋಱಿ ವರಮಂ ಬೇಡೆಂದನದರ್ಕೆ ರಾಯಂ ನೀನೊಲ್ದೆಯಪ್ಪೊಡೆ ಮನೆಯಳಿಯನಾಗಿರ್ದು ಎಮ್ಮ ನಾಡಂ ಬಿಡದೆ ಕಾಪುದೆಂದು ಬಿನ್ನಯಿಸಲೊಡಂ, ಶಿವಂ "ತಥಾಸ್ತು" ಎಂದು ತನಗೆರಡನೆಯ ಕೈಲಾಸಮೆನೆ ದೇವಪುರದೊಳ್ ನೆಲೆಗೊಂಡಂ.

ಮನೋ– ಓ! ವೀರಮಣಿಯುಂತುಟೊಂದು ಸೈಪಿಗಡರ್ಪದನೆ!

ಮುದ್ದ– ಸಾಜಂ, ರಾಜಂ ಸಕುಟುಂಬಂ ಮುಕ್ಕಣ್ಣನ ಮಱೆಯೊಳಂದಿಂದಿಂಗುಂ ಪದುಳಂ ಬಾಳ್ವಂ.

ಮನೋ– ಮುಂತೇಂ ಮುಂತೇಂ?

ಮುದ್ದ– ಇಂತು ನೃಪಂ ಕಟ್ಟುಬ್ಬರದ ಹರಿಬಮಂ ಬೆಸಗೊಳ್ವುದುಮೀಶನಿನಿಸುಂಬೆರ್ಚು ಜಾಸಿಸಿ ರಾಯಂಗೆ– ಆಃ! ಲೇಸಿನ ಮಂತ್ರಮಂ ನೆನೆದಯ್! ಪರಕೆ ಪರಸೆನಿಪ ದೈವದೊಡನಿಂದು ಪಗೆಗಟ್ಟಿದನೆ! ಹಯಮಂ ಕಟ್ಟಿದನೆ! ಯುದ್ಧಕ್ಕೆಡರ್ ಬಂದನೆ! ಏನೆಂಬೆ ಸೀತರುಣಲಿತನದ ನಿಮ್ಮ ನುಡಿಗಂ ನಡೆಗಂ. ಶ್ರೀರಾಮಂಗಂ ನಿಮಗಂ ಚಲಮೆ! ಪ್ರತಿಸ್ಪರ್ಧದ ತನ್ನಿಂದು ಬಾಣದಿಸುಗೆಯಿಂ ರಾವಣಕುಂಭಕರ್ಣಮಾರೀಚಸುಬಾಹುಪ್ರಭೃತಿದಾನವರಂ ತತ್ತಱಿದಱಿದ ರಾಮನೇಂ ಗಾವಿಲನೇ? ಈಗಳಾತನ ಸೇನೆಯುಸಿದಿಬ್ಬುವನಾವನೊ? ಉಃ! ಪ್ರೇಕ, ಎಂತಾನುಮಪರೆಗಳ ಸಂಧಿಗೊಡಂಬಟ್ಟು ಹಯಮಂ ಬಿಟು

ಕಾಣ್ಕೆಗೊಟ್ಟವರಂ ಕಟ್ಟುವುದೊಳ್ಳಿತಯ್. ಕುವರನುರವಣೆಗೆ ಮರುಳ್ಗೊಂಡು ನಿರ್ನೆರಂ ಸತ್ತು ಮಿತ್ತುವಿಗೆ ತುತ್ತಾಗದಿರ್, ಸಾಱಿದೆನೆಂದಂ. ಆನುಡಿಗೆ ರಾಯಂ– ಎಲೆ ದೇವ ! ಇಂತುಮೆಂಬರೆ! ಕಟ್ಟಿದ ಕುವರೆಯಂ ಕೊಟ್ಟು ಮಱೆವೊಕ್ಕೆ ಬಾಹುಜರೊಳರೆ ? ಇಂದಕ್ಕೆ ಸಾವು, ಮೇಣಿನ್ನೆಂದಾದೊಡಮಕ್ಕೆ! ತನ್ನ ಕುಲಕಂ ಛಲಕಂ ಮುಂಬಿಟ್ಟು ಕುಂದನೊಂದಿದ ಪಂದುಗದೊಳ್ ಕೂಂಟೆ ನಡೆವ ಕಲಿಯುಂ ಕಲಿಯೇ! ರಾಮನಕ್ಕೆ! ಸೋಮನಕ್ಕೆ! ಸಾಮವನೊಲ್ಲೆಂ. ಅವಱಿಂ ನಿನ್ನೊಲ್ಮೆಯೊಂದಿರೆ ಮೊನೆಯೊಳೆಮ್ಮ ಛಲಮುಂ ಬಲಮುಂ ತೋಱಿ ಕಾದುವೆವು ದಿಟಂ. ಇದಱೊಳ್ ನೀನಳ್ಕದೆ ಕೈದೋಱುವುದೆಂದು ವಿನಯದೊಳೆಂದಂ.

ಅದರ್ಕಾಧೂರ್ಜಟಿ- ನೀಂ ಕ್ಷತ್ರಿಯರುಂಟು. ನಿಮಗಕ್ಕುಮೀ ಬೆಸನಂ. ಎನಗೆ ಬಡಗೂರವಂಗೇಕೆಯೊ ಕಾದಾಳ್ತನಂ. ಅಂತುಮಲ್ಲದೆಯುಂ ಎನ್ನ ಕುಲದೈವದೊಳ್ ಪಗೆಗೊಂಡಿರಲಕ್ಕುಮೆ! ಬಾರೆನಾಱೆನೀಹರಿಬಕೆ, ದೂಱದಿರೆನ್ನನೆಂಬುದುಂ; ನೃಪತಿಲಕಂ ಫಣಿಭೂಷಣನಂ– ಎಲೆ ಮಾದೇವ, ನೀನೆ ಗತಿಯೆಂದಿನ್ನೆಬರಂ ನಂಬಿದರನೀ ಪ್ರೊಟ್ಟಂಗಿಂತು ಪೊಱಜನೂಂಕಲಕ್ಕುಮೆ! ಏಂ ಗೊತ್ತಾಟಮೊ! ಎಮ್ಮೊಳ್ ವಾತ್ಸಲ್ಯಮೇಂ ಪೋಯ್ತು ! ಬಾಂಜೊಟಿಲಂ ಗೆಲ್ಪಗಟಂಪೆತ್ತಮೋದುದೋ! ಇನ್ನೆಮಗಾರೊಳರ್? ಕಾವರಾರ್? ಎಮಗಮೀವಿಧಿಯಾಯ್ತೇ! ಏವೆಂ? ಅಟ್ಟೆಯೊಳುಸಿರುಳ್ಳನ್ನೆಬರಂ ಮೊನೆಯೊಳ್ ಕಾದಿ ಮೋದಿ ಸಾವೆನಲ್ಲದೆ ಪಗೆಗಳ್ಕಿ ಕಟ್ಟಿದ ಕುದುರೆಯಂ ಬಿಡೆಂ, ಕುಡೆಂ, ನಿಕ್ಕುವಮೆಂದು ದಿಟ್ಟನಾದಂ. ಆನುಡಿಗೆ ಗಂಗೋತ್ತಮಾಂಗಂ ಮನನೊಲ್ದು- ಅಂಜದಿರೆಲೆ ನೃಪತಿ, ನಿನ್ನೊಂದು ಬಗೆಯ ಬಗೆಯುಂ ಕಂಡೆನಲ್ಲದೆ ಕೊಳುಗುಳಕಳ್ಕಿ ಬಳ್ಕಿ ನುಡಿದೆನಲ್ತು. ರಾಘವಂ ತಾನೆ ಮೈದೋಱುವನ್ನೆಬರಮುಣುವಗಿಣುವರಂ ಗೆಲ್ದು ಮೋಹರಮಂ ಪೆಸಗಿಡಿಪೆನೆಂದು ಬೋಳಯಿಸಿದಂ.

ಆಗಳ್ ಕಾಳಗವಱೆಗಳ್ ಸೂಳಯಿಸಿ ಸಾಱಿದುವು. ಪಡೆವಳ್ಳರೊಂದಾಣತಿಗೆ ಕಾಲಾಳ್ಗಳ್ ಮೇಲಾಳ್ಗಳುರವಣಿಸಿ ಯುದ್ಧಸನ್ನದ್ಧಮಾ

ಯಿತ್ತು. ಗಜಂಗಳ ವಾಱುವಂಗಳ ರಥಂಗಳ ಮೇಪರಂ ಗಜಬಜಿಸಿದತ್ತು. ಅಂತಿರ್ಪುದುಮತ್ತಲ್ ಕಾಪಿನಾಳ್ಗಳ್ಗೆ ಹಯಮುಂ ಕಣ್ಮಱೆಯಾಗೆ ನಾಲ್ದೆಸೆಯೊಳಮರಸಿಯುಂ, ರಾಘವಾನುಜನೊಳೀಬಗೆಯಂ ಕಥಿಸಿದರ್. ಅನಂತರಂ ಚಿಂತಿಸಿ ಶತ್ರುಘ್ನಂ ಸುಮತಿಯೊಳ್- ಅಯ್ಯ ಮುತ್ತದಿನದ ಸಚಿವ! ಐವತ್ತಾಱಱೊಳಂ ನೀಂ ನೋಡದ ನಾಡಿಲ್ಲಕ್ಕುಂ. ಪಲವುಂ ಸೂಱೆಯ್ದಿನ ಜನ್ನಗುದುರೆಯಂ ಬೞಿಗೊಂಡು ಬಂದೊಡೀ ಅಱಿವು ನಿನ್ನೊಳಾಯ್ತು. ಸಾಜಂ. ಮಂತುಗಳಿಂತಿರವೇಡಾ! ಲೇಸು ಲೇಸು. ಆಳ್ದನ ಕಜ್ಜಕ್ಕೆನಿತ್ತೊ ನೆರಂ. ಕೇಳಾದೊಡಾತೋರ್ಪ ಪೊೞಲನೆಮ್ಮ ಕುದುರೆ ಪೊಕ್ಕುದೆಂದು ಚರರ ನುಡಿಯಿಂದಱಿವೆನಾನಾಡಾವುದಯ್? ಒಡೆಯನಾವಂ? ಹಯಮಂ ಕಟ್ಟುವನೆ? ಪೇೞೆಂಬುದುಂ; ಸುಮತಿ- ರಾಯಂಗೆ ಇದೆ ಇದೆ ದೇವಪುರಂ. ವೀರಮಣಿ ಆಳ್ವಂ. ಬಲ್ಪುಳ್ಳ ಕಡುಸಾಸಿ. ಅವನಂ ಮುಕ್ಕಣ್ಣನಳಿಯನಿರ್ದು ಪಾಲಿಸುವಂ. ಎಮಗೆ ಸಂಗರಂ ಕಡಿದಕ್ಕುಮಂತದುಕಾರಣಂ ತಳ್ವದೆ ಪಡೆಯನೆಬ್ಬಿಱಿಸಿ ಪುರಮಂ ಮುತ್ತಿ ಕೋಳುಗೊಂಬುದುಚಿತಮೆಂದು- ತಿಳಿಪುವುದುಂ; ಕಲಿಗಳೆಲ್ಲರ್ ಮೆಯ್ವೆರ್ಚಿ ತಾಂ ಮುನ್ನಮಾಂ ಮುನ್ನಮೆಂಬೊಂದಹಮಹಮಿಕೆಯಿನೆತ್ತಿ ನಡೆದು ಪುರಮಂ ಮುತ್ತಿ ಬೊಬ್ಬಿಱಿದು ಸನ್ನಿವಱಿಗಳಿಂ ಕಾಳೆಗಕರಿರಾಜರಂ ಕರೆದರ್.

ಇಂತು ನಾಡ ಕೋಂಟೆಯಂ ಬಾಗಿಲ್ಗಟ್ಟಿ ಮುಂಬರಿವ ಪಡಿಬಲದಿರವನಱಿತಾಗಳೆಣಿಯಿರ್ದ ರಾಯಮೋಹರಂ ಮುಂದೊತ್ತಿ ತಾಗಿ ಕೋಲ್ಮಿಡೆಗಱಿದು ದೆಸೆಗಿಡುವಿನಂ ಕಾದುವುದುಂ, ಗಾಸುಗೆಟ್ಟು ತರಹರಿಸ ತಮ್ಮವರಂ ನಂಬಿಸಿ ನಿಗುಂಬಿಸಿ ಪುಷ್ಕಲಂ ಶರಧಿಯೊಳ್ ಪೆರ್ಚಿ ಮೇಲ್ವರಿವಂಬಿನ ಸೀಸರವೆನೆ ಕೋಲ್ಗಳಂ ಮೊಗೆಮೊಗೆದಿಸುತ್ತೆ ನುಗ್ಗಿವಂದಂ. ಆಗಳ್, ರುಕ್ಮಾಂಗದಂ ತೆಕ್ಕನೆ ಸೂಟಿಯಿಂ ತನ್ನ ಪೊಂದೇರಂ ನೂಂಕಿ ಪಗೆಯುಂ ತಾಗಿ ಹೂಂಕರಿಸಿ ಮೂಂಕರಿಸಿ- ಎಲೆ ಬಣಗು! ತೊಲಗು! ಇಂದಿಂಗೆ ಬಱಿದಾಯ್ತು ನಿನ್ನಾಳ್ಮಂ ಬಾಳಿಂ; ಕಾಳಾಯ್ತು ಗಂಡಗರ್ವಂ, ಪಾೞಾಯ್ತು ಜಸಂ. ಇನ್ನೆಬರಂ ತಮಗೆ ಜಗಂ ತೊೞ್ತಾಗದೆಂದು ಸೊರ್ಕಿನುರ್ಕಿಂ ಬೞಿಗೊಂಡೆ ಪಂ

ನೆರಾಯುರಂಕಾಡಿ ಬೇಡಿ ಕೂಡಿದ ಜಾಳಿಗೆಪ್ರಸ್ನಂ ಕೋಳುಗೊಂಬೆನಲ್ಲದೊಡೆ-ಎಂದಂ.

ಆನುಡಿಗೆ ಪುಷ್ಕಲಂ ಕಡೆಗಾಲದ ಮುಕ್ಕಣ್ಣನೊಂದು ಪೋಡರ್ಪಿಂ ಕೆಂಗಣ್ಣನಾಗಿ ಪೊತ್ತಮೊದಲ್ ಕೋಲ ಸೋನೆಯಿಂ ಕಱಿದು ಬಱಿಬಱಿಕಂ ಜಂಕಿಸಿ ಕೊಂಕಿಸಿ- ಆಃ! ಪುಂಕು! ಅಂಕವದಸುಗಳೆಂಬ ಸಂಕೆಯಿಲ್ಲದೆ ಬಿಂಕದಿನೆಮ್ಮ ಕುದುರೆಯಂ ಕಳ್ವರೆಂತಾತು ಕೊಂಡುಯ್ದ ಕೂಸೆ! ಎಮ್ಮನಣಕಿಪ್ಪಂದು ಬಲ್ಪಾಯ್ತು! ಎಲೆ ಮರುಳೆ! ನೀಂ ಗಾಂಪಂ ನಿಕ್ಕುವಂ. ಪೋ! ಜಗದ ಬೀರರ ಪಸುನಂ ಕಟ್ಟಿಯುಂ ಸೆಣಸಿಯುಂ ಬಾಳ್ವೆನೆಂಬ ನೀಂ ಜಾಣನೆ? ಕಾಣೆನೆ ನಿಮ್ಮನ್ನರಂ ದಟಿಪ್ಟಿದ ಕೊಳುಗುಳದೊಳಟ್ಟಿದ ಪೆಸೆಗೆ ಬೆಬ್ಬರಿ ರಾಯುರಂ! ಎಲೆ ಪಸುಳೆ! ನಿನ್ನೊಳ್ ಕಾದಿ ಗೆಲ್ದೊಡನಗೆ ಗೆಲ್ಲಮಲ್ಲಂ; ಸೋಲ್ದುಂ ಸೋಲಮಲ್ಲಂ. ನೀನಱಿಯಯ್. ನಿನ್ನಯ್ಯನೊಳಂತಿವಂ ಕೇಳ್ದುಂ ಪೇಳ್ದುಂ ರಣಕಟ್ಟಲ್ಲದೊಡೀಗಳೆ ನಿನ್ನಂ ತಲೆಗಡಿದು ಬಿಸಿನೆಲಗೆಡಹುವೆಂ, ನೋಡೆನ್ನ ಕೈಗುಣಮನೆಂದಂ. ಅಗಳ್ದ ರುಕ್ಮಾಂಗದಂ ಪಗೆಯಂಬಂ ಕಡಿದು ಪಡಿಸರಲನಾಡಿಚ್ಚು- ಎಲೆಲೆ! ಮೊನೆಯೊಳೊತ್ತಿ ನಿಂದುಂ ಪಯಮಂ ಬೇಡುವ ನೀನಾವ ನಾಡ ಗಂಡುಗಲಿಯೊ? ಆರ್ಪೊಡೆ ಕಡುಕೆಯ್ದು ಗೆಲ್ವುದು. ಅಲ್ಲದೊಡೆ ಪಯದ ಪಂಬಲನುೞಿದು ಕೆಮ್ಮನೆ ಪೋಪುದು. ಪಸುಳೆಗಿಸುಳೆಯೆಂದು ತೆಗಳ್ವ ನೀಂ ಮೋಡಾವ ಮುದಿಗೂಗೆಯೊ! ಪಸುಳೆತನಂ ಕೋಲ್ಗೊಳವೆ? ಅಯ್ಯನಂ ಬರಿಪ್ಪುದು ಗಡ! ನಿನ್ನುಂ ಬಾರಿಸಿ ಕೈಮಿಸಿಗೆ ಸೇರಿಸಿದಿಂಬೞಿಕ್ಕಂ-ಎಂದಾಡಿದಂ.

ಅನಿತಱೊಳ್ ಭಾರತಿ ಮುನಿಸಿಂ ರುಕ್ಮಾಂಗದನ ಸರಿಸದೊಳೊತ್ತಿ ಪತ್ತಂಬುಗಳಿಂ ಹಯಮನೇೞಿಂಬಿಂ ಸಾರಥಿಯನೈನಂಬುಗಳಿಂ ರಥಮನೆರಡಱಿಂ ಧ್ವಜಮಂ ಮುಱಿದು ಬೊಬ್ಬಿಱಿದು ಕೂರಂಬಿನಾತನಯೆ ಬಿಲ್ಲಂ ಮುಕ್ಕಡಿಗೆಯ್ದಂ. ಅನಂತರಮಮರಮಗಂ ಪಡಿಬೀರನೇಱಿಯುಂ ಪೊಸಂಬಿನಂ ತೇರಾಳನೇರ್ಪಡಿಸಿಯುಂ ಪೊಸತೆನಿಪ್ಪ ಬಿಲ್ಲಂ ಕೊಂಡಳವಟ್ಟು ಜೇವಡೆದು ಮಾಕೊರ್ಂಡು ಕನಲ್ದೆಲೆಲೆ ಮೂಢ! ಅಂತುಟೇಂ ನೊಕರ್! ತೇರುಂ ಮಾವುನಮುಂ ಪೋದೊಡೇಂ ಬಿಲ್ಮುಱಿದೊಡೇಂ,

ಪಡಿವೇರಿರದೆ! ಸಾರಥಿ ಬಾರನೆ! ನಿನ್ನಂತಿರಾಂ ಬೇಸಿಗನೆ! ತೋಳ ಬಲ್ಪಿಂಗೇವೆಯೊ ?– ಎಂದು ಕಿಡಿಗೆದಱುವ ಪ್ರೇಂಗಱೆಯ ಕೋಲ್ಗಳಂ ಪಗೆಗೆಚ್ಚಂ. ಇಂತೆಚ್ಚಂಬುಗಳಂ ಕೊಚ್ಚಿ ಪ್ರಷ್ಕಲಂ ಮೋಣೌರ್ಮಿಯುಂ ವರೂಥಮುಂ ಮುಱಿದು ಸಾರಥಿಯುಂ ತಱಿದಂ. ಅಂತಪ್ಪುದುಮಿಂತೇರೇವುದೆಂದು ನೆಲಕಿೞಿತಂದು ಬೇರಿಗನನಪ್ಪಳಿಸುವೆನೆಂದೆ ಕೋಲ್ಗಳಂ ತಿರುವಾಯ್ಗೆ ಪೂಡಿ ಕಾದಿದಂ. ಆಗಳ್ ಪ್ರಷ್ಕಲಂ ತಾನುಂ ತೇರನುೞಿದು ಧರೆಗೆ ನುಮ್ಮಿಕ್ಕಿ ಮಾಱಾಂತ ಕೈದುಗಾಱನೊಳ್ ಪೋಣರ್ದಂ.

ಇಂತಿಂತೋರೊಂದು ಪಗಲುಮಿರುಳುಮುಗಿಬಗಿಯಾಗೆ ಕಣೆಗಳನಿರ್ದರುಂ ಕಾದುತಿರ್ಪುದುಂ ಕಾಳಗಂ ಕಡಿದಾಯ್ತು. ಇಂತಿರಲೊಡಂ ರುಕ್ಮಾಂಗದಂ ದೊಣೆಯುಂ ಕಣೆಯುಂ ಕೞಿದು ಗದೆಗೊಂಡು ಮೋದುವುದುಂ, ಮಱುವಕ್ಕದ ಬೀರಂ ಪೆಜದೆಗೆದೆಡಕಂ ಬಲಕಂ ತಿರಿಗಿ ತನ್ನೊಂಡು ಪೊಸಮಸೆಯ ಬಾಣದಿಂ ಕಡಿದಂ. ಮತ್ತಂ ಗಜೆ ಮುಱಿಯೆ ಕೂರಸಿಯುಂ ಕತ್ತರಿಸಲಾಟಿಸ ರಾಯುಗುವರನಂ ನೋಯಿಸಿದಂ. ಅರಸುಗನಿಂತೊಂದು ಮಾತ್ಕೆಯಿಂ ನೊಂದು ಗಾಱುಗೆಟ್ಟು ಜೊಂಪಿಸಿ ಮೈಮಱೆವುದುಂ ಬೆಂಬೞಿಯ ಸೇನೆ ಬೆಂಗುಡುವುದುಂ, ಆನೆಕುದುರೆಗಳ್ ದೆಸೆಗೆಟ್ಟು ಚಿವರಿದುವು. ಹಾಹಾರವಮೆತ್ತಂ ಮಾರ್ಬಲನೊಳ್ ಮೊಱದಸಿಗೊಂಡುದು. ಈಯೆಡೆಯೊಳೀವಿವರಮಂ ಚರರ್ ವೀರಮಣಿಗಱಿಕೆಗೆಯ್ಯುಮಂ ಪಾಪಡರ್ದಂತೆ ಸಿಡಿಲೆಱಗಿದಂತೆ ನಂಜೇಱಿದಂತೆ ಸಂಜೆ ಕಾವೞಿಸಿದಂತೆ ರಾಯಂ ಮುಂದುಗೆಟ್ಟು ಕಂಗೆಟ್ಟು ಬಗೆಗೆಟ್ಟು ಬಟ್ಟೆಗೆಟ್ಟು ಬಸಗೆಟ್ಟು ನಸೆಗೆಟ್ಟು–ಎನ್ನರಗಿಳಿಗೇನಾಯ್ತು! ಎನ್ನ ಪಲ್ಲಮಾಱಿಗೇನಾಯ್ತು! ಎನ್ನ ಚಿಂತಾಮಣಿಗೇನಾಯ್ತು! ಎನ್ನ ಬಗ್ಗಿನ ಬಿತ್ತಿಗೇನಾಯ್ತು! ಎನ್ನ ಐಸಿರಿಯ ಸಿರಿಗೇನಾಯ್ತು! ಎನ್ನ ಬಾಳ್ಬೆಳಕೇನಾಯ್ತು! ಎನ್ನ ಸಂತಸದ ಸುಗ್ಗಿಯ ಮಱುಗೋಗಿಲೆಗೇನಾಯ್ತು! ಎನ್ನ ಮುದ್ದಿನ ಕಣಿಗೇನಾಯ್ತು! ಎನ್ನ ಪ್ರಟ್ಟಗುವರಗೇನೆಡರಾಯ್ತು! ಎಂದು ಕಡುದುಗುಡದಿಂ ತಾನೊರ್ವನೆ ಪೊಱಮಟ್ಟು ರಣಕ್ಕೈದಿವಂದಂ. ಅರೆಮುಗಿದ ಕಣ್ಣಾಪರೆಯ ಕಂದಿದ ಪೆಱೆಮೊಗದ ಮುದ್ದುಗುವರನಂ ತೋಳ್ದಿಂಬಿನೊಳ್ ಕಂಡು ತಾನುಂ ಪಮ್ಮನಂಬೋಗಿ ಕದಂಪಿನತ್ತಣೆಸಿಱಿತಪ್ಪ ಕ

ಣ್ಣೀರ ತಣ್ಪಿನಿಂದೆಂತಾನುಂ ಚೇತರಿಸಿ ಸನಿಯಮಂ ಸಾರ್ದು ತಳದಿನೆತ್ತಿ ತೊಡೆಯೊಳೊತ್ತಿ ಪಣೆಗೆ ಪಣೆಗೊಟ್ಟು ಮಱುಮಱುಗಿ ಗುಣಮಂ ನೆನೆನೆನೆದು— ಹಾ! ಎನ್ನ ಕಂದ! ಸೊಗದ ಪೆರ್ಚುಗೆಂಬಗೆಯದುಕ್ಕಂದ! ಈಬಗೆಯೊಳಿನ್ನನುಱುವ ಬಗೆ ನಿನಗಾಯ್ತೇ! ನಿನ್ನೊಂದು ಪೆಂಪಿನ ಬೀರದತ್ತಣಿನಿಸಿಬರುಂ ಸಾಮಂತರ್ ಅಳವಿನ ಪಿಡಿಯೊಳಡೆಗೊಂಡು ಕಪ್ಪವನೀಗುಂ ಮಱೆವಾಱಿಗ್ಗಂ ನೆರವಕ್ಕಂ. ಇನ್ನೆನಗಾರೊಳರ್! ಇನ್ನೆಮಗೇವುದೊ ಚಲವೇವುದೊ ಬಲವೇವುದೊ ಪ್ರಾಣ್ಕೆಯೇವುದೊ ಮೊನೆಯೇವುದೊ ಪನ್ನತಿಕೆಯೇವುದೊ ಐಸಿರಿಯೇವುದೊ ಸಾಜೇವುದೊ ಪಾಡು, ನೋಡಿರೆ ಚೆಲ್ವಾ! ಜಸಮುಂಟು, ಸಕಲಸೌಭಾಗ್ಯಮುಂಟು, ಸಂತಸದುಕ್ಕೆವಮುಂಟು, ಕಡುಪ್ಪುಂಟು, ಮಾನ್ಯಮುಂಟು, ಹೊನ್ನಮುಂಟು, ಪಣಮುಂಟು, ಗುಣಮುಂಟು, ನೀನುಳ್ಳೊಡುಂಟು ಪೆಱರುಳ್ಳೊಡುಂಟೆ ಪೇಳೆಲೆ ಮಗನೆ! ಜಗದರಾಯರೆನ್ನಂ ಪುಲ್ಗೆ ಲೆಕ್ಕಿಸರೆ! ಚೂಣಿಯ ಜೋದರಿರೆ ಕಟ್ಟಂಕದ ಸಾದಿಗಳಿರೆ ರಥಿಕರಿರೆ ಬಾಹತ್ತರದ ಗೋಱಾಯ್ಲರಿರೆ ಬೆಂಬಲಮಿರೆ ನಿನ್ನನೊರ್ವನನೆ ಮಿಱುತ್ತಿವಾಯ್ದಳೆ ಕುವರಾ! ಹಾಹಾ! ಇನ್ನೀ ನಿನ್ನ ಪೆಂಡಿರ್ಗೇಂ ಬಟ್ಟೆಯೊ! ಪೆತ್ತಬ್ಬೆಯೆಂತೊಡಲ್ವಿಡಿದಿರ್ಪಳೊ! ಎನಗೇಂ ಗತಿಯೋ ಪೇೞ ಬಾಳ! ಅಕ್ಕಟ! ಪಗೆಗಳ್ ನಲಿವಂತು, ಬಳಗಮುಬ್ಬಸಂಬಡುವಂತು, ಸಾಮಂತರ್ ಸೊರ್ಕುವಂತು ಅನಬಿಲ್ವಂತು ವಱಿಂ ಕಣ್ಗಿಡುವಂತು ಮಾಡಿ ಪೋದಯ್ ಮಗನೇ! ಎಂತು ತಾಳ್ವೆನೊ! ಎಂತು ಬಾೞ್ವೆನೊ! ಎಂತು ಕಾದುವೆನೊ! ಎಂತು ಗೆಲ್ವೆನೊ! ಎಂದು ಕುವರಂ ಮಡಿದನೆಂದೇ ಭ್ರಾಂತಿಯಿಂ ಪಲವಗೆಯೊಳೞಲುತುಮಿರ್ಪುದುಮತ್ತಲ್ ಪುಷ್ಕಲನೊಡ್ಡಿ ಬಂದು ನಿಂದು ರಾಯನೊಳ್— ಎಲೆ ಮರುಳೆ! ಕಾದುವೊಂದು ಬೆಸನದಿಂ ಬಂದೀಗಳೀ ಪೆಣನಂ ಕಂಡು ಮಱುಗುವ ಗಂಡಂ ಷಂಡಂ. ಛೀ! ಪೋ! ಬಿಲ್ಗೊಂಡೆನ್ನೊಳ್ ಕಾದು. ಅಂತಾಱದೆಯುಪ್ಪೊಡೆ ಕುಮರೆಯುಂ ಬಿಟ್ಟೆಮ್ಮಂ ನಂಬಿ ಬಾೞೆಂದು ಜಱೆವುದುಂ ಪೊತ್ತಿದಗ್ಗಿಯೊಳ್ ನೆಯ್ಯನೆಱೆದಂತುಂ ಕತ್ತಿದ ಕಡಿಯೊಳುಪ್ಪಂ ಲೆಪ್ಪಿಸಿದಂತುಮುರಿವ ಕಣ್ಣೊಳ್ ಸುಣ್ಣಮನಿಟ್ಟಂತುಮಾಗಿ ಕೋಪಶಿಖಿ ದಳ್ಳಿಸೆ ಕಿಡಿಕಿಡಿವೋಗಿ

ಉರಿನು ಮುಕುದಿದರ್ ಪಗೆಯೊಳ್ ಮಾಱಾಂತು ತಱಿಬಿ ಕಱುಬಿ ಮಾ ಱಂಬುಗಳನೆಚ್ಚು ಕಾದಿದಂ. ಆಗಳ್ ಬೆಟ್ಟು ಜರಿವಂತೆ ಕಾರೊಡಲ ಪೇರಾನೆಗಳುರುಳ್ದುವು. ಗಾಳಿಗೆ ಬಾಳೆದಿಂಡುಗೆಡೆವಂತೆ ಕಾಲಾಳ್ಗಳ್ ಕೆಡೆ ದುವು. ಬಲ್ಲಾನೆಯ ಮೆಟ್ಟಿನಡಿಯ ತೆಂಗಿನ ಕಾಯಂತೆ ರಥಂಗಳ್ ಜಜ್ಜರಿ ವೋದುವು. ಪಡಿವಱಿದೊಳ್ ಇಂತಪ್ಪುದುಂ ಪಗೆಯತ್ತಣಿಂ ಗಾಱುಗೆ ಟ್ಟು ತಮ್ಮವರ್ಗೆ ಕೈದೋಱಿ ತಾಂ ನುಗ್ಗೆ ಕಿಸಿಸಿಂ ಪುಷ್ಕಳಂ ಪು ಷ್ಕಳಂ ಶರದಿನೇಸಾಡಿ ಪಗೆಯೊಳ್ ಬೀರದಿಂ ಪೊಣರ್ದಂ. ಇಂತೀ ಮಾಳ್ಕೆಯಿನೇೞಿರುಳುಂ ಪಗಲುಂ ಕಡುಕೆಯ್ದು ಕಡೆಯೊಳ್ ವೀರಮಣಿ ಯ ಬಾಣಹತಿಗೆ ಮುಚ್ಚೆವೋಗಿ ಪೊಡವಿಯೊಳಿಡೆಗೆಡೆದಂ. ಆಗಳ್ ಶ ತ್ರುಹನ ಸೇನೆಯೊಳ್ ಹಾಹಾಕಾರಂ ಪರಬಲದೊಳ್ ಭಾಂಕಾರಮುಱೆ ಪೆರ್ಚಲೊಡಂ ತಾಂ ತನುಗೆ ಬೆಕ್ಕಸಂಗೊಂಡು ಸುಬಾಹು ಮುಂತಪ್ಪ ವೀ ರರ್ ನಡೆದರ್. ಶತ್ರುಘ್ನಾದ್ಯರುಂ ಕೈದುಗೊಂಡು ಮುಂಬರಿದು ವೀರ ಮಣಿಯುಂ ತಾಗಿದರ್.

ಆವೇಳೆಯೊಳತ್ತಲೀಶ್ವರಂ ಭಕ್ತನಂ ಕಾವ್ರೊಂದು ಬಗೆಯಿಂ ಪೊಱಮಟ್ಟು ತನ್ನ ಪ್ರಮಥಗಣಂಬೆರಸು ರಣಕೆ ಪೋಪವಸರದೊಳ್ ತಱಿಮಿಂಡಿಯಪ್ಪ ತನ್ನಯ ಮಡದಿಯನಿಕ್ಷುಮತಿಯುಂ ಕಂಡು ನೇಹದಿಂ-- ಎಲೆಗೆ ಜಾಣೆಯುರರಸಿ! ಕೇಳ್ ಇದೆಕೊಳಿಂದು ನಿಮ್ಮಯ್ಯಂಗೆ ಕಡು ಪಿನ ಪಗೆರಾಯರೊಳ್ ಕುದುರೆಯೊಂದು ನೆವದಿಂ ಸಂಗರಂ ನೇರಿಟ್ಟು ದು. ಅಂತದುಕಾರಣಮಾತಂಗೆ ಮಾವಂಗೆ ಬೆಂಬಲಮಾಗಿ ಪೋದಪೆನೀಗ ಳೆ. ನೀನಬಲದಿರ್. ಸೊಗದೊಳರಿಗಳಂ ಬೆಸೆಗಿಡಿಸಿ ಬರ್ಪೆನೆಂದಂ. ಆ ನುಡಿಗೆ ಬೆಕ್ಕಸಂಗೊಂಡು ಅಂತಪ್ಪೊಡೆ ತಳ್ವದೆ ನೀಂ ಪೋಗಿ ಕಾದಿ ಕಾದೀವುದೆಮ್ಮಯ್ಯನನಣ್ಣನನೆಮ್ಮ ಬಳಗಮನೆಮ್ಮ ಪಱಿಮನೆಮ್ಮನೆಲ್ಲರನೆಂ ದು ತಡಂಬಡನಯ್ಯನ ನೇಹದಿಂ ತಾಂ ಮಱುಗದೆ ಬಗೆಗುಂದದೆ ಕಾಂ ತನಂ ರಣಕೆ ಬೀಳ್ಕೊಟ್ಟಳ್. ವೀರಪತ್ನಿಯರ್ಗಿದು ಸಾಜಂ. ಇಂತಾ ಪೊಸಮುಗಾತಿ ಬಾಂಗುರುಳನ ಮುಂಗುರುಳನೊಪ್ಪದಿಂ ಸೈತು ನೇವ ರಿಸಿ, ಮುಡಿಜಡೆಯನ ಕಣ್ಣನುಂ ಜೊಕ್ಕಳಂ ತುಱುಬಿ, ಪೆಱೆಸೂಡಿ ದನ ನಡುನೆತ್ತಿಯ ಬಿಱಿಲ್ಮಡಿಗೆ ಬಂದಾಗೆಯ ಪೂಸರಮುಂ ಸ್ಯೂಡಿಸಿ;

ತೊಱೆವಳೆಯನ ಮುಂದಲೆಗೆ ಸೀಸಕವನಳವಡಿಸಿ, ಫಣಿಕುಂಡಲನ ಕರ್ಣಕ್ಕೆ ಮಕರಕುಂಡಲಮನಿಟ್ಟು, ಕಂದುಗೊರಲನ ಬೆಳ್ಗೊರಲೊಳ್ ಜಾಗವರಲ ಮಲಕನಮರ್ಚಿ, ಪಂದಲೆವಜ್ಜಂಗಜ್ಜ ಸರಮಂ ತುಡಿಸಿ, ಬಗ್ಗದೊವಲುಡೆಯಂಗೆ ಪಟ್ಟಣಿಗೆಯನುಡಿಸಿ, ಬೂದಿಬಡಿಕನ ಮೆಯ್ಗೆ ಬಾವನ್ನಮಂ ತಿಮಿರ್ದು, ಬೆಳ್ಳಡಿಯ ಬೆಳ್ಳಡಿಗೆ ಮಿಸುನಿವಾವುಗೆಯನೊಪ್ಪಿಸಿ, ತಿಸುಳಿಯ ಕೈಗೆ ಬಲ್ಗಣೆಗಳನಿತ್ತು, ನೊಸಲ ಕಣ್ಣ ಮಹಾದೇವನ ಮಿಸುಪ ನೊಸಲೊಳ್ ಬೀರಸೇಸೆಯನಿಟ್ಟು, ಐವೊಗನ ಮೊಗಸಿರಿಯಂ ಕಂಡೊಂದಲಂಪಿಂ ತಾನೆ ಮುದ್ದಿಟ್ಟು ಕಳಿಪುವುದುಮೆಲರುಣಿವೆಡೆಯಂ ಬೀರಂ, ಬಿಗುರ್ವರಿಜಂ, ಪಳಿಗಂ, ಕೊಂಡಂ, ಗುಳಿಕಂ, ಮುಂತಪ್ಪ ಭೂತವೇತಾಳಂಗಳ ಮರುಳ್ವಡೆವೆರಸು ಅಗ್ಗಿಗೆ, ಬೆಂಗದಿರಂಗೆ, ಮುನ್ನೀರ್ವೆಂಕೆಗೆ, ಸಿಡಿಲ್ಗೆ ನೂರ್ಮಡಿಯಿಂ ಕಾಯ್ದುಂ ಮಹಾಮಸಕಂ ಮಸಗಿ ಕೊಳುಗುಳಕೆ ನೆಱೆತಂದು ಕಡೆಗಾಲಕೆಂತಂತು ಜಡಿದಾರ್ದು ಪಗೆಯೊಳ್ ಕಾದುವ ರಾಯಂಗೆ ಬೆಂಬಲವಾದಂ. ಮತ್ತಮಾಗಣಂಗಳುಂ ಬೊಬ್ಬಿಱಿದು ಮರ್ಕಟಸೇನೆಯಂ ತಱುಬಿದುವು. ತಱುವಾಯಿಂ ಶತ್ರುಘನೊಳ್ ಮೊನೆಗೆ ನಿಂದ ರಾಯನಂ ಪಿಂದೊತ್ತಿ ಪಣೆಗಣ್ಣಂ ತಾನೊಡ್ಡಿ ನಿಲ್ಪುದುಮಣುವಂ ಸಿಡಿಮಿಡಿಗೊಂಡಸವಸದಿಂ ದಪ್ಪಗವಗೆಯನಂ ಕೈಯ ಪೆರ್ಮರನೊಳ್ ಸೆಲೆಯೊಳ್ ಮಲೆಯೊಳ್ ಮಲೆದು ತಾಗಿದಂ. ಸುರರಳ್ಕೆ ದಿಗಿಭಂಗಳ್ ಬಳ್ಕೆ ಕಮಠನ ಕೊರಲ್ ಕುಸಿಯೆ ಭೋಗಿಪನ ಭೋಗಂ ನಸಿಯೆ ದೆಸೆಗೊಡೆಯರ್ ಸರಿಯೆ ಬೆಟ್ಟುಗಳ್ ಜರಿಯೆ ಕಡಲ್ ಮೊಗೆಯೆ ಔತ್ಪಾತಕ ಮೊಗೆಯೆ ಸಬ್ಬನಬ್ಬರಂ ಕಡಿದಾಯ್ತು. ಬೊಮ್ಮಾಂಡದೋಡು ಬಿರಿವಂತು ದೆಸೆಮೂಲೆಗಳ್ ಪಳಂಚಿ ಮಾರ್ದನಿಗುಡುವಂತು ಕಡಲ ಸಬ್ಬದಮಡಂಗುವಂತು ಸಿಡಿಲ ಪೊಡಪುರ್ ತೆಕ್ಕವಂತು ಗುಡುಗುಡಿಸಿ ಗುಡಿಗಿ ಬೊಬ್ಬಿಱಿದಂ ಕಲಿಯಣುವಂ. ಜವನಂ ಜವಗಿಡಿಸಿದ ಮರ್ಬಿಗನಂ ತಱಿಬಿದ ಗಜಾಸುರನಂ ಗೆಲ್ದ ಜಲಂಧರನಂ ಗೋಣ್ಮುಱಿಗೊಂಡ ಬಾಂಬೊಲಿಲ ರಕ್ಕಸರಂ ಗಾಱುಗಿಡಿಸಿದ ತನ್ನೊಂದಘಟೆಂದಣುವನನಿದಿರ್ಚಿದಂ ಫಣಿಭೂಷಂ. ಮುಂಬರಿದ ಸಿಂಬಿಣಿಯನಣೆದುಂ ನೊಣೆದುಂ ಕಟ್ಟಂಕೆಯ ಲಂಕಿಣಿಯಂ ಕೊಂದುಂ ತಿಂದುಂ ಅಕ್ಷಯಕುಮಾರರಂ ತೊಳ್ದುಂ

ಪೋಷ್ಪಿಂ ಮಹಿರಾವಣನಂ ಕಡಿದುಂ ಕುಡಿದುಂ ಕಾಲನೇಮಿಯಂ ಜಡಿದುಂ ಬಡಿದುಂ ಸಂದ ತನ್ನ ಪನ್ನತಿಕೆಯಿಂ ಪೊಣರ್ದಂ ರಾಮಭೃತ್ಯಂ. ಸಸೆಮಸೆಯ ತಿಸುಳಂ ಬೆಳಬೆಳಗೆ ಉರಿಗಣ್ಣ ಜಾಲೆ ದಳ್ಳಿಸೆ ನಿಚ್ಚವಚ್ಚದ ಪಂದಲೆ ತೊಂಗಲಾಡೆ ಸಿರದ ಹುರಂ ಸೀೞಿಂಬುಳಾಡೆ ನೇವಳದ ಪಾವಳವಿಂ ಬುಸುಗುಟ್ಟೆ ಮಾರುತಿಗೈಮೊಗಂ ಮುಮ್ಮೊಗನಾಗಿ ಜಡಿದಂ. ತುಱುಗುಗೊಂದಲ್ ಕೊಕ್ಕರಿಸೆ, ಕೊನೆವಾಲಮಿನಿಸುಂ ನಿಮಿರ್ದು ಸಂಚಳಿಸೆ, ಮೈ ಪೆಟ್ಟುವೆರ್ಚೆ, ನಿಡುಮುಸುಡ ಕಡುಮುಳಿಸು ಪೊಱಪೊಣ್ಮೆ ಮುಂಬರಿವಣ್ಮೆ ಮೇಲ್ವಾಯ್ದು ಕಪರ್ದಿಯೊಳ್ ಕೈದೋಱಿದಂ ಮರುತ್ಸಂಜಾತಂ.

ಎಲೆಗೆ ಸೊಬಗೆ! ಇಂತೊಂದು ಮಾಟ್ಕೆಯಿಂ ಕಾಮಾರಾತಿಯುಂ ಮಾರುತಿಯುಂ ತಂತಮ್ಮೊಳ್ ಪಾಡುಪಂತದಿಂ ನೆಱೆದ ಬಿನ್ನಣದಿಂ ಕಚ್ಚಱಿದ ಕಿನಿಸಿಂ ಸರಿಸಾಟಿಯಿಂ ಪಾಟಿಯಿಂ ಸೂಟಿಯಿಂ ಸೆಣಸುತಿರಲೊಡನುತ್ತಲೋರೊಂದೆಡೆಯೊಳ್ ಶಿವಗಣದ ಕೋಡಗರ ಕಾಳಗಂ ಬಿನ್ಮನಾಯ್ತು. ಜನ್ನವಗೆಯುಂಗೆ ಸುಗ್ರೀವಂ, ಬಿಗುರ್ವರಿಜಂಗಂಗದಂ, ನಂದಿಗೆ ನೀಲಂ ಮಸಗಿ ಮಾಱಾಂತರ್. ಎತ್ತಂ ಬಡಿಯ ಕಡಿಯ ಕುಡಿಯ ಮರನೊಟ್ಟಿಲ್ ಜೆಟ್ಟಾಯ್ತು. ಇಟ್ಟಿಯ ಬಟ್ಟಗೈದಿನ ಕೊಡಲಿಯ ಮುದ್ಗರದ ಸೂಲದ ಕತ್ತಿಯ ಕೂರಂಕುಸದ ಶಿವಗಣರ ಕಡುಗಲಿತನದ ಪೊಣರ್ಕೆ ಚಿತ್ರತಾಯ್ತು. ಇಂತಿರಾರಣಾಂಗಣಂ ಬೊಬ್ಬಿಱಿವ ಗಂಡರಱಚುವ ಶಿವಗಣಂಗಳ ಪರ್ಚುವ ಮಂಕಡರಾರ್ವ ಮಾಲಿನಿಯರ ಊಳ್ವ ಬಳ್ಳುಗಳ ಗೀಱಿಡುವಾನೆಗಳ ಕಿಚಕಿಲ್ವ ಹಯಂಗಳ ಕುಣಿವ ಮರುಳ್ಗಳ ನಲಿವ ಬೇತಾಳಂಗಳ ಕೋಲಾಹಲಂ ಬಿಱುಸಾಗಲೊಡಂ ಮುಱಿವಟ್ಟೆಯ ಸುರಿದ ಕರುಳ ನೆರೆದ ಕನ್ನೀರೆಡೆಯೊಳೆತ್ತಂ ಕಾಳಂ ಘೋಕಂ.

ಮತ್ತಂ ಪೆಱತೊಂದು ತಾಣದಲ್ಲಿ ವೀರಮಣಿಗಂ ಶತ್ರುಹಂಗಂ ತುಮುಲಯುದ್ಧಂ ಸಮುತಳಿಸಲೊಡಂ ಬಳ್ಪೊಱ್ತು ಮೇಱೊಡಲ್ಲ ಎಕ್ಕಲವುಲಿಗಳಂದದಿಂ ಮಸಗಿ ಪೊಣರುತುಮಿರ್ದರ್. ತುತ್ತತುದಿಯೊಳ್ ರಾಘವಾವರಜಂ ತಾಂ ಕೈಸೋಲ್ಪುದುಂ, ಪಡೆ ಬಡಸಪ್ಪುದುಂ, ಮಿಡುಕಿನ ಬೆಂಬಲಂ ಪಜ್ಜೆಗೆಟ್ಟು ಬೆಂಗುಡುವುದುಂ, ಕಟ್ಟುಬ್ಬರದುಬ್ಬಸದಿಂ ಮುಟ್ಟುಮುಱಿ

ದು ದಿಟ್ಟಿಗೆಟ್ಟು ಇಂದಿಂಗೆನಗರಿಯೊಳ್ ಸೋಲಮಾಯ್ತೆಂದು ತಱಿಸಂದು ಬಱಿಕ್ಕಂ ಮುಂಗುಗಾಣದೆ ಶ್ರೀರಾಮಚಂದ್ರನ ಪದಕಮಲಮನೆ ನೆನೆನೆನೆದು ಪಲುಂಬಿದಂ. ಆಗಳಾಗಳಯೋಧ್ಯೆಯೊಳ್ ದೀಕ್ಷೆಯೊಳಿರ್ದ ರಾಮ ದೇವರ ದೇಹಂ ನೋಂದರಂತೆ ಮೆಯ್ದೋಱೆಯುಮನಿತ್ತೊಂದು ಬನ್ನಮಂ ಕೇಳ್ದಂ ತನ್ನವನಂ ಸಂತವಿಟ್ಟುವಿಪ್ರರ್ದುಮಾಗಳ್ ತ್ರ್ಯಂಬಕಂ ತನ್ನೊಡೆಯಂ ತಾನೆ ತಮ್ಮನುಮಂ ಸಮಂತೆಮ್ಮನುಮನುದ್ಧರಿಸಲ್ಕೆಂದು ಬಿಜಯಂಗೆಯ್ದನೆಂದು ಬಗೆದು ಮಾರುತಿಯೊಳ್ ಕದನಮನಿಸಿಸಿಸುಂಜೊಟ್ತು ಮುಱಿದು ರಾಘವನ ದರ್ಶನಕ್ಕೈತಂದಂ. ರಾಮಭೃತ್ಯನುಮೀವಿವರಮನಱಿತು ಪಲವ್ರಂಗಿನದೊಂದಗಲ್ಕೆಯ ಜೇಸಱುಂ ತಿಳಿದು ತಾನುಮೊಡೆಯನೆಡೆಯೊಳ್ ಬಂದು ನಿಂದಂ. ಮತ್ತಮನಿತಱೊಳ್ ಸುಗ್ರೀವಾದಿ ಮರ್ಕಟರುಂ ಸುಭುಜಘೂಜಾನಿಯುಂ ಬಂದೊದವಿದರ್. ವೀರಮಣಿಯುಂ ತನ್ನಳಿಯನ ಬಱಿಯೊಳೆ ಬಂದಂ. ಆವೇಳೆಯೊಳ್ ಪರಮೇಶ್ವರಂ ಜಗದೀಶ್ವರನಂ ಕಂಡೊಡಾಗಿ ಭಕ್ತರಂ ಪೂರ್ವದ ಪೊರ್ಜಯಂ ಪೊಱುವಿನಂ ತಾಂ ತನ್ನೊಡೆಯನನಿದಿರ್ಚಿದ ದೋಷಮಂ ಮಱೆದು ಕಾವುದೆಂದು ಬಿನ್ನಯಿಸಿದಂ. ಆಗಳ್ ರಾಜನುಮುಱಿವುಗೊಂಡು ದೇವರ ಜನ್ನದ ಹಯಮುಮಂ ಕಟ್ಟಿದಪರಾಧಮುಮಂ ಕ್ಷಮಿಪುದೆಂದು ಪ್ರಾರ್ಥಿಸಿದಂ. ರುಕ್ಮಾಂಗದನುಂ ಶ್ರೀರಘುಪ್ರವರನಂ ಮಱೆವೊಕ್ಕಂ. ಬಱಿಕ್ಕಮಾನಾದೇವಂ ತನ್ನವರಿಂ ಹಯಮುಮಂ ಬರಿಸಿ ಕಪ್ಪಮುಂ ತರಿಸಿ ರಾಘವನ ಚರಣಕರ್ಪಿಸಿದಂ. ಮತ್ತಮಿಂತಿರೆ ತನಗಂ ಶಿವಂಗಮಿನಿಸುಂ ಭಿನ್ನಮಿಲ್ಲೆಂಬ ಮಾತ್ಕೆಯಿಂ ರಘುಪ್ರವರನೀಶ್ವರನಂ ನೇಹದಿಂದೊಡಂಬಟ್ಟುಂ, ರಾಜವರ್ಗಮೊಳನಿಬರುಮಂ ಸಂತವಿಟ್ಟುಂ, ತಮ್ಮವರಂ ಸೇನೆಯಂ ಕೂರ್ಮೆಯಿಂ ಸೈತಿಟ್ಟುಂ, ತಾಂ ಪೈಗರೆದು ಮಾಯಮುಮಪ್ಪುದುಂ ಶತ್ರುಘ್ನಾದ್ಯರ್ ವೀರಮಣಿಯೊಂದು ಕೆಳೆತನದಿಂ ಪರನೊಂದು ನಲ್ಮೆಯಿಂ ಸಮಂತೆ ಬಿಜಯಂಗೆಯ್ದರ್.

ಎಂಬಲ್ಲಿಗೆ

ಶ್ರೀರಾಮಾಶ್ವಮೇಧದೊಳ್

ದೇವಪುರವರ್ಣನಂ ಚತುರ್ದಶಾಶ್ವಾಸಂ

ಸಂಪೂರ್ಣಂ.

ಎಲೆಲೆ ಕಾಮಿನಿ! ಕಾಮಕಳಾನಿಧಾನೆ! ಕಾಮಮದಾಂಗಗಂಧ ಸಿಂಧುರಬಂಧುರಯಾನೆ! ಕಾಸುಕಾಳೋರಗಕೇ......

ಮನೋ— ಎನ್ನರನ್ನ! ಇಂದಿನಿತಿಂತೇಂ ಚೆಲ್ವಿನೊಂದು ಚಿತ್ತರದ ಭಂಗಿಯ ಪೊಸ ಬಣ್ಣನೆ ಮಿಣ್ಣನೆ ನಿನ್ನ ನಚ್ಚುಮೆಚ್ಚಿನ ಕಾಮನೊಂದು ಜಾನದೊಳ್ ಬೆರೆತುದು?

ಮುದ್ದಣಂ— ಸಾಜಂ. ಈಗಳಿವಱಲ್ತೆ ಎನ್ನುಮನೊಲ್ದ— (ಓ ತಪ್ಪಿದೆಂ ತಪ್ಪಿದೆಂ.) ನಿನ್ನುಮನೆ ಬಲ್ಪು ಮುಟ್ಟಿನ ಕಾಮನ ಪೇರುಕ್ಕೆವದ ಗಲಬೆಯ ಪಿರಿಯ ದಿವಸಂಗಳ್. ಇದೆ ಇದೆ ಗಾಡಿಯ ನಾಡವೆಣ್ಗಳ ರೂಢಿಸಿದ ಸಂತಸಮುಮ್ಮಹಂ ತಲೆಮೀಱಿ ಬೀದಿವಱಿವುದು. ಅಂತದಱಿನೀಪೊೞ್ತು ಕಾಮನ ನಾಮದೊಂದು ನೆನಪು ತಾಂ ತನಗೆ ಬೇಡವೇಡೆಂದೊಡಂ ಕೊನೆನಾಲಗೆಯನೊತ್ತಂಬದಿನಡರೆ ವರ್ಪುದು. ಇದು ಮೊದಲಾಗೆ ಬಿನ್ನನೆ ನಿನ್ನನೆ ಕರೆವೆಡೆಯೊಳಂ ತಿಂಬ ಪುೞ್ಗಿಯೊಳೊಗ್ಗರಿಸಿದ ಕಡಲೆಯಂತೆಡೆಗೆಡೆಗೆ ಬಾಯ್ಗೇಱುವಂದಪ್ಪುದೈಸೆ.

ಮನೋ— ಎಲೆ ಎಲೆ ರಮಣ! ಲೇಸುಲೇಸಯ್! ನಿನ್ನೀ ಬಣ್ಣದ ಬೆಡಂಗಿನ ಬಿಡುನುಡಿಯೊಂದು ನೆವದಿನೆನ್ನನೊಳ್ವಗೆಯೊಳೆೞ್ಚಱಿಸದಯ್.

ಮುದ್ದ— ಅಂತಿದೇಂ ರಮಣಿ?

ಮನೋ— ನಾಳೆಗಲ್ತೆ ಕಾಮನ ಕಟ್ಟಾಯುವ ಹಬ್ಬಂ.

ಮುದ್ದ— ಓ! ಓ! ಬಂಗಿಯುಂಡಂ ಮುನ್ನುಂಡುದಂ ಮಱೆವಂತಿರಾನುಮಱೆವುಗೆಟ್ಟೆಂ. ಅಪ್ಪುದಪ್ಪುದು. ಆದೊಡೇಂ; ನಾಳೆಗೆ ಪೂರಣಗಡುಬೊ, ಸೆಂಡಿಗೆಯೊ, ಮಂಡಿಗೆಯೊ, ಹೋಳಿಗೆಯೊ, ಸಜ್ಜಿನ ಬಿರ್ದಿನೂಟಕೆ?

ಮನೋ— ನಿನಗೊಂದೆ ಭೀಮಂಗೆಂತಂತು ತಿಂಬ ಬಯಕೆ.

ಮುದ್ದ— ಮತ್ತಮದೇಂ?

ಮನೋ-- ನಾಳೆಗೆನಗೊಂದು ನೋಂಪಿ.

ಮುದ್ದ- ಅಂತಪ್ಪ ಪಿತಾನೋಂಪಿಯಿರವೆಂತು ? ಬಗೆಯೆಂತು ?

ಮನೋ- ಬಿರಿದೇಂ ಸಂಜೆಯೊಳ್ ಮಿಂದು ಮಡಿಯುಟ್ಟು ಕಲ್ಪೋಕ್ತವಾಗೆ ಕಾಮನಂ ಪವಣಿನರ್ಚಿಪ್ಪುದೈಸೆ !

ಮುದ್ದ- ನಿನ್ನೊರ್ವಳಯೆ ?

ಮನೋ- ನೀನುಮಾನುಂ.

ಮುದ್ದ- ಇದಱಿನೇಂ ಗುಣಂ ?

ಮನೋ- ಈಪ್ರಣ್ಣಮೆಯೊಳ್ ಕಾಮನಂ ಕೂರ್ಮೆಯಿಂ ಭಜಿಸಿದೆವಪ್ಪೊಡೆ ಕಾಮೇಶನೆಮಗೊಲ್ವಂ. ಮೇಣೆನ್ನೆಗಮೆಮ್ಮನಗಲದಿರ್ಪಂ.

ಮುದ್ದ- ಅಂತಿರೆ ಮುತ್ತಜ್ಜಿ ಪೆತ್ತಂತಿರೊಂದು ಸಂತಸಮೆನಗೀ ನೋಂಪಿಯೊಳ್

ಮನೋ- (ನಸುನಕ್ಕು) ಆದೊಡಮಿನಿತೊಂದು ನಿಯಮಂ ಪ್ರೊಟ್ಟಿಡೆ ವಿಡಿದು ಬೈಗುವರೆಗಮುಪವಾಸಮಿರಬೇವೇೞ್ಪುದು.

ಮುದ್ದ- (ಬೆಗಡುಗೊಂಡು) ಈಗಳಾಂ ಕತ್ತರಿಯೊಳಾದೆಂ. ಕಲ್ಲೊಳ್ ಕಾಲ್ಪೆಟ್ಟಿದ ರಾಮನ ಪಯಮೆಂತಂತು ಮನಂ ಮುಂಗೆಟ್ಟುನು. ಅಂತಪ್ಪೊಡೀನೋಂಪಿಯನೊಲ್ಲೆಂ.

ಮನೋ- ಅಂತೇಂ ಸದೆವ ಜನ್ನಗುಮುರೆಯೆಂದು ಕಲ್ಲೊಳ್ ಕೀಲಿಸಿದುದು ಪೇೞ !

ಮುದ್ದ- ಅಪ್ಪೊಡಕ್ಕುಂ. ಆದೊಡಿನಿತೊಂದಂ ನಿನ್ನಂ ಬೇೞ್ವೆಂ. ನಾಳೆಗುಪವಾಸಮನುೞಿದ ನೋಂಪಿಯನೇರ್ಪಡಿಸಲೆವೇೞ್ಪುದು.

ಮನೋ- ನೋೞ್ಪಂ. ಮುನ್ನಂ ಕತೆಯಂ ಬಿತ್ತರಿಸು.

ಮುದ್ದ- ಆಯ್ತಾಯ್ತು ಕೇಳ್! ತಱುವಾಯಿಂ ದೇವಪುರದಿಂ ತಳರ್ದು ಭಾರತಾಂತರಕ್ಕೆ ಯ್ದಿ ಪೋಪ ಬೆಡಂಗಿನ ಚೆನ್ನ ಜನ್ನಗುದುರೆ ತನ್ನೊಂದು ಲೀಲೆಯಿಂ ಹೇಮಕೂಟನುಂ ಪ್ರಗುತರ್ಪ್ರದುಮಾಲದ ಬೇಲದೆಕ್ಕೆ

ಯೆ ಬಿಕ್ಕೆಯ ಕಕ್ಕೆಯ ಪೊನ್ನೆಯ ಬನ್ನಿಯ ಬೇವಿನ ಮಾವಿನ ಮಱ್ತಿಯ ಮುಱ್ತುಗದ ನೆಲ್ಲಿಯ ಕಂಕೆಲ್ಲಿಯ ನೇಱಿಲ ನೆಱಿಲಿಂ ಕಱ್ತಿಲಿಸಿದ ಪಱಿವ್ರೊಳೊಂದು ತಪ್ಪಿಲಃ ನುರ್ಗಿ ನೋಳ್ಪ್ದ ಪೊದರಂ ಪಾಯ್ದು ಮುಳ್ಗ ನಡೆಗೆಟ್ಟು ತಡೆವಟ್ಟು ಕೊಱಿಗಂ ಪಱಿಗದ ನೆರೆಯ ಮಱಿಯಱಿಯೊಳ್ ತಾಂಟಿವತ್ತು. ಇಂತಾಗಲೊಡನೊಡನೆಯೆ ಕಾಲ್ ಕೀಲಂ ಬೆಟ್ಟದಂತೆ ನಟ್ಟು ನಾಂಟಿರ್ಪುದುಂ ವಾಜಿಯೊಂದು ನಡೆ ಕಲ್ಲ ಪಾಪೆಯೊಂದು ನಡೆಗೆ ಪಾಸಟಿಯಾಯ್ತು. ಆಪ್ರೊಱ್ತಿಂಗೆ ಪ್ರೊಲಂಬುಗೆಟ್ಟು ಬಸಗೆಟ್ಟು ಮರವಟ್ಟು ಕುದುರೆಯಿರವಂ ಕಂಡ ಕಾಪಿನ ಭಟರ್ ಮಿಡುಕಿಂದಾರ್ದುಂ ಸೋವಿಯುಮೆಱ್ಬಿಸಿಯುಂ ಪತ್ತೆಸಾರ್ದುಂ ಬಾಲಬೊಳೀಱ್ದುಂ ಗೋಣ್ಣೊಳಲುಗಿಯುಂ ಕೊಡಂಕೆಯೊಳೆತ್ತಿಯುಂ ಸುತ್ತಿಯುಂ ಗತಿಯಂ ಕಾಣದೆ ಮತಿವಿಕಳರಾಗೆ ತಮ್ಮಡಂಗಾಯ್ತೆಂಗರ್ಪರಿಯಂ ಕೇಳ್ವುದುಂ ಪಡೆವಳರೆಲ್ಲರ್ ದಿಮ್ಮನೇಱ್ದು ಬಿಮ್ಮನೈತಂದು ತಾವುಂ ಕೈಗೊಟ್ಟು ಕುದುರೆಯಂ ಕೀಲಿಲಾಟಿಸಲೊಡಮೆಳ್ಳನಿತಾದೊಡಂ ಚಲಿಸದಿರ್ದುದು.

ಇಂತೊಂದು ಮಾಚ್ಕೆಯಿಂ ಪೊಱನಲ್ಮೆಯ ಕವಡುಗಾರ್ತಿಯ ಕಲ್ಲೆದೇ*ಯೊಳ್ ನಾಂಟಿದ ನಾಡಾಡಿ ನನ್ನಿಗ ಚೆನ್ನಿಗನ ಮನೋರಥದೊಂದು ಹಯದ ಕಾಲ್ಗಳಂತಿರೆ ಕಲ್ಲೊಳ್ ಕೀಲಿಸಿರ್ಪುದುಂ ಕಂಡು ಮಾಣದೈದಿ ತಮ್ಮಾಣ್ಮಂಗೆ ಬಿತ್ತರಿಸಿದರ್. ಅಗಳ್ ಶತ್ರುಹಂ ವೀರರ್ವರಸು ಕಟ್ಟುಱದಿನಾಬಱಿಗೈದಿ ಹಸುವಂ ಮುಟ್ಟಿ ತಟ್ಟಿ ಮತ್ತೊಂದಾಯತ್ತಿಯಿಂ ದಾವಿಂ ಬಿಗಿದುಮುಗಿಮಾಱದೆ ಬೇಸರ್ವುದುಂ ಮರಂ ಮರವಟ್ಟಂತುಂ ಕಲ್ ಕಲ್ಗಟ್ಟದಂತೆಪ್ರೊಲೊಂದಚ್ಚರಿಯಿನಣುವಂಗೆ ಮುಸುಡು ನಿಡಿದಾಯ್ತು. ಜಾಂಬವಂಗೆ ಮೈ ಜಡವಾಯ್ತು. ಸುಗ್ರೀವಂಗೆ ಕೊನೆವಾಲಂ ಮುರುಂಟಿದತ್ತು. ಇಂತಿರೆ ಪ್ರಸಸುಸಿಲೊಳೆ ತಮ್ಮೊಂದು ಗೆಯ್ತಕ್ಕೆ ಬಸನಱಿಸು ,ಮೊಯ್ಯೋಲ್ತ ಜವ್ವನಿಗರಿರವಂತಿರೆ ಬೀರರಿರವಪ್ಪುದುಂ, ರಾಯನೆಗ್ಗಿಂ ಕುರ್ಗಿ ಬೆಗಡುಗೊಂಡಿರೆ ಬಱಿಯಂ ಬಱಿಯ ಮಂತ್ರಿ ಕೈಯ್ಮುಗಿದು– ರಾಯ ! ಏತಱೊಂದು ಬೆಗಡೊ ? ಅಡಿಮುಡಿಯಂ ಪರಿಕಿಸದೆ ನೀನುಂ ಮಾಟದ ಬೆಲೆವಣ್ಣು ಕೈಮಸಕಕ್ಕುಱವುಗೆಟ್ಟು ಕಳವಳಿಪೆಗ್ಗನೆಂತಂತು ಚಿಂತಿಸುಯ್. ನೆರೆನೊಳೆತ್ತಾನುಂ ಪುಣ್ಯಾಶ್ರಮ

ಮಿಱವೇೞ್ಕುಂ. ಮೋಕ್ಷಾರಿಸಿಗಳತ್ತಣೊಂದು ವೈಮೆಯಿಂ ಗೆಯ್ಮೆಯಿನಿಂ
ತಾಯ್ತಕ್ಕುಮದಱಿನೀ ಯೆಡೆಯುನಱಿಸಿ ಸೋವನನಱಿವುದು ಕರಮೊಳ್ಳಿತೆಂ
ದೆತ್ತಮಾಳ್ಗಳನೇರ್ಪಡಿಸಿ ಕಳಿಸಲೊಡನವರೇಸ್ಮೈಯೊಳಂ ಪುಡು
ಕಿಯುಂ ಕಾಣದೆ ಬಱಿಕ್ಕಮೆನಸುಂ ದೂರದೊಳೊಂದು ತಾಣದೊಳ್—
ತ್ರಾಂ ತವಂಗೋಲಾಡುವ ನೀರ್ವಕ್ಕಿಗಳ ಬಲ್ದನಿಯೊಳೊಡವೆರೆದ
ಪಱಮೆಪಱಿಗಳ ಮೆಲ್ಲುಲಿಗಸಿದು ಕಿಸಿದು ಪಿಸಿದೆಸಳ ತನಿಗಂಪಿಂ ಪೊರೆದ
ಕಿಱುಗಾಳಿಯ ತಿಟ್ಟಕ್ಕೆ ಕವಡುಗೊಂಡ ತಸ್ಗೊಳದೊತ್ತಿನೊಳ್ ಬನರಾ
ಣಿಮ ಮೊಗವ ಮೊಡವಿಗಳೊಂದು ಪೊಂಗಿನಿಂದೊಪ್ಪುವ ಮುಗುಳಿಂ ರಾ
ರಾಜಿಪ ಕಾಡುಮಲ್ಲಿಗೆಯ ಬಲ್ಪೊದಱ ಬಳಸಿನೊಳೊತ್ತಿಡಿದಪವರ್ಗಲ
ಕ್ಷ್ಮಿಗೆ ನೆಲೆವನೆಯೆನೆ ಕರಂ ಸೊಗಯಿಸುವ ಪುಣ್ಯಾಶ್ರಮವೊಂದು ಕಾ
ಣಿಸಲೊಡಂ ಕಂಡುಂ ಮಾಣದೆ ಚೆಚ್ಚಱದಿಂ ಮರಲ್ದು ತಮ್ಮಾಣ್ಮಂಗೀಪರಿ
ಯುಂ ಬಿತ್ತರಿಸಿವರ್. ಆಗಳರಸಂ ಹರಿಸದಿಂ ಹನೂಮಜ್ಜಾಂಬವಪುಷ್ಕ
ಳಾದಿವೀರರ್ವೆರಸು ಬಱಿವಿಡಿದೈದೆವಂದುಟಜಮಂ ಪೊಕ್ಕು ಪಱಿನುಡಿಯ
ತೊಡಂಕನಡಿಗಡಿಗೆಡವದಂತಿರೆ ಸೆವಿಡದೆ ಬಿತ್ತಱಿಸಿ ಶಿಷ್ಯರ್ಗೆ ನಿರವಿಪ ಕು
ಲಪತಿಯಂ ಶೌನಕನಂ ಸಾಗ್ನಿಯುಂ ಬಲವಂದು ಕಟ್ಟಿದಿರೊಳ್ ಮುಗಿದ
ಕೆಯ್ಗಳಿಂ ನಿಂದಿರ್ಪುದುಂ ಕೂರ್ಮೆಯ ಕುಡುನೋಟದಿಂ ಮಾಲಿಸಿ ಬಱಿ
ಯುಂ ಪುಲ್ಲ ನಲ್ವಾಸಿನೊಳ್ ಕುಳ್ಳಿರವೇೞ್ದು ಪದುಳಮಂ ಕೇಳ್ದು ಪಚರಿಸು
ತಿತ್ತಣ್ಗೊಂದು ಬರವಿಂಗೆ ಕಾರಣಮಂ ಬೆಸಗೊಳೆ ರಾಯನಾಯುದಿಂ ಜನ್ನ
ಗುದುರೆಯ ನಸೆಗೇಡಂ ತಮ್ಮ ಬಗೆಗೇಡಂ ಕೇಳಿಸಿದಂ.

ಆಗಳಿಗೆಗೆ ಶೌನಕನಿನಿಸುಂ ಪ್ರೀತಿ ಜಾನಂಬೊಕ್ಕು ಮೋಕ್ಷಾಕ
ಳಿಸಿ ಶತ್ರುಹಂಗೆ ಎಲೆ ರಾಜ ಇದರ್ಕೆ ಮುನ್ನಿನೊಂದಿತಿಹಾಸಮುಂಟೇನೆನೆ–
ಈನಾಡ ತೆಂಕಲ್ಗೆ ನಾಡರಸಿಯ ಜೀವನಾಳವೆನೆ ಪಿರಿದುಮೊಪ್ಪಿ ಪರಿ
ಯುತಿರ್ಪ ಕಾವೇರಿಯೆಂಬೊಂದು ನದಿಯುಂಟು. ಅದಱೊತ್ತಿನೊಳೊಂ
ದು ಕೆಪ್ಪೆಲೊಳೊರ್ವಂ ಸಾತ್ವನವೆಸರ ದ್ವಿಜಂ ದ್ವಿಜರಾಜಧರನನೋ
ರೊಂದು ದಿನಸಂ ನೀರುಂಡುಂ ಗಾಳಿಯುಂಡುಮುಣದೆಯುಂ ತಪಮನಾ
ಚರಿಸುತಿರಲೊಡಂ ಕೆಲವಾನುಂ ದಿನಕ್ಕೆ ತಿಸುಳಿಗೆಯ್ಯಂ ಮೆಯ್ದೋ
ಱಿದಂ. ಇಂತಿರೆ ವಿಪ್ರಂ ಜವನ ಮುಂಬಲ್ಗಳೆಡೆಯೊಳಾವನಪ್ಪನುಂ

ತನ್ನೊಂದು ಸುಕೃತವಿಶೇಷದಿನಂಬರದತ್ತಣಿನಿೞಿತರ್ಪ ವಿಮಾನಮನೊಂದಂ ಕಂಡನಾಗೆ ತಾನವನಡರ್ದು ಬಾಂಗೇಱಿದಂ. ಮತ್ತಮಾಗಳರೆಗೞಿಗೆಯೊಳ್ ತಾಂ ಪೊಂಬೆಟ್ಟಿನ ಕೋಡುಗಲ್ಲ ತುತ್ತತುದಿಯೊಳಿರ್ಪುದುಂ ಕಂಡಂ. ಇಂತು ದೇವಲೋಕಮುಂ ಸಾರ್ದು ದೊರೆಕೊಂಡ ಪೊಸಸೊಗದ ಸುಗ್ಗಿಯ ನುರ್ಗಿನೊಳ್ ಬಿಗಿವಡೆವಗ್ಗದ ಸಗ್ಗದ ಜೋಸೆಯೊರೊಂದು ನೆರವಿಯೊಳ್ ದೇಸಿಯಿಂ ಬೆರೆದಾಗಳುಂ ಬಿನದಿಸುತ್ತೆ ಜಲಕೇಳಿಗದೊರ್ವರ್ ವೊಗಸಿ ಪೆಣ್ಬಡೆವೆರಸು ಜಾಂಬವತೀನದಿಯಂ ಪುಗುತಂದು ಸೊರ್ಕಿನುರ್ಕಿನ ಬಿಡಿಬೇಸಱಿಂ ನೆರೆಯೊಳಘಮರ್ಷಣಬೊಳಿರ್ಪ ಮುನಿಗಳಂ ಲೆಕ್ಕಿಸದೆ ತಕ್ಕಱಿದು ಮುಕ್ಕುಳಿಸಿ ಜಕ್ಕುಳಿಸಿದಂ. ಇಂತೊಂದು ಪೊಲ್ಲದಗೆಯ್ಮೆಯುಂ ಕಂಡು ಮುನಿಗಳಾಂಗುಲಿಗೆಂತಂತು ಮುನಿದು ತಿರೆಯೊಳ್ ರಕ್ಕಸನಾಗಿ ಪುಟ್ಟೆಂದು ಬಯ್ದರ್. ಇಂತೀಬಯ್ಗುಳ್ ಕೊಲೆವಿಡಿದನ ಕಣ್ಣ ಸುಣ್ಣದ ಕಜ್ಜಳಮಪ್ಪುದುಂ, ನೆತ್ತಿಯ ಮುತ್ತಿಱಿದ ಕಳ್ಳುಣಿಗಳಂತಂತಱಿವುಗೊಂಡೊಯ್ಯೊಯ್ಯನಾಮುನಿಗಳೆಡೆಗೆ ಪರಿತಂದಡಿಯೊಳ್ ಪೊರಳ್–ದೇವರೇವುದು ಕಾವುದು. ನಿಮ್ಮಡಿ ಮುನಿವೆಡೆಯೊಳೆಮಗಾವುದೊ ಕಡೆ! ಮುನಿಗಳೆಂದು ಮೈಮೆಯೇನಿಱಿದೆ? ಇಂತಿದನಱಿತುಂ ಇರುಳ್ ಕಂಡ ಬಾವಿಯೊಳ್ ಪಗಲೊಳ್ ಬಿೞ್ದಂತೆ ಪೊಲ್ಲಮೆಯಂ ತೆಗುಳ್ಚಿ ದುರ್ಗತಿಗಿೞಿದೆಂ. ನಿಮಗಂ ದುರ್ಜನನಾದೆಂ. ಪತ್ತೇಂ, ಪಲವೇಂ? ಬಯ್ವುದುಂ ಕೊಲ್ವುದುಂ ನಿಮಗಕ್ಕುಮೆಂದು-ಕಾಲ್ವಿಡಿವುದುಂ ಮುನಿಗಳ್ ಶಾಂತರಾಗಿ- ಆಯತ್ತಾಯ್ತು. ಮೇಣೆಂದಿಂಗೆ ಬಟ್ಟೆವಿಡಿದು ಕಟ್ಟಾಯದಿಂ ಬೞಿವೋಪ ರಾಮನಧ್ವರತುರಂಗಮಂ ತಡೆದು ನಡೆಗಿಡಿಪಯ್, ಮತ್ತಮೆಂದಿಂಗೆ ರಾಮಚಾರಿತ್ರಮಂ ಮನದಣಿಯೆ ಕೇಳ್ವೈ, ಅಂದಿಂಗೆ ನಿನಗೆ ವಿಮೋಚನಮಕ್ಕೆ! ಅನ್ನೆವರಂ ನೀನಾತೋರ್ಪ ಕಾಡೊಳ್ ಮಾಯದ ರಕ್ಕಸನಾಗಿರ್ಪುದೆಂದು ತೋಱಿ ತೊಱೆದರ್. ಸೌಮಿತ್ರಿ! ಇಂತಿರೊಂದು ಬಿಸುನುಡಿಗೆ ಸೊಮ್ಮಳಿದು ಮೆಯ್ಗೆಟ್ಟು ಪಾರ್ವಂ ರಕ್ಕಸದ ಬೊಮ್ಮರಕ್ಕಸನಾಗಿಯುಂ ಮಾಯದೊಂದು ಪಜ್ಜೆವಿಡಿದೀಕಾಡೊಳ್ ಸಂಚರಿಸಿಯುಮೀಗಳೀನಿಮ್ಮ ಕುಮರೆಯಂ ನಡೆಗಿಡಿಸಿದಂ. ನೀಮೀಗಡೆ ಪೋಗಿ ಪಯದ ಬೞಿಯೊಳ್ ನಿಲ್ತು ಶ್ರೀರಾಮಚರಿತಮಂ ಕೇಳಿಸಲೊ

ಡಂ ಬಾಡಬಂಗಂ ಬಾಡಬಕ್ಕಂ ವಿಮೋಚನಮಕ್ಕುಮೆಂದು ಪೇೞ್ವನಂ; ರಾಘವನಣುವಂಗೀಬಗೆಯಂ ಬೆಸಸಿ ಕಳುಪಿದಂ. ಆಗಳ್ ರಾಮಭೃತ್ಯಂ ಕುದುರೆಯೆಡೆಗೈದಿ ಪೋಗಿ ತಾನಱಿತಂತು ರಾಮಕಥೆಯಂ ಬಣ್ಣಿಸಿ ಬಣ್ಣಿಸಿ ಪೇೞ್ವುದುಂ; ತಾಂ ತನಗೆ ಹಯಂ ತಡೆವಿಟ್ಟ ಪಾಪಮೆಂತಂತು ನಡೆವಟ್ಟು ತನ್ನಿಚ್ಚೆಯಿಂ ಪೋಗೆ ಕಂಡು ಸಾಲಿಗಂ ಮೂಲಿಗನಾದೊಂಗು ಸಂತಸದಿನಾಣ್ಮನೆಡೆಗೈದೀವಿವರಮಂ ಬಿನ್ನಯಿಸಿದಂ. ಶತ್ರುಹನಾವಿಸರಮಂ ಮನದೆಗೊಂಡು ಸುಮತಿಯು ಸುಮತಿಗಂ ಮುನಿಯಱಿತಕ್ಕಮಣುವನ ಸಾಹಸಕ್ಕಂ ಹಯದ ಬಗೆಗಂ ಕಟ್ಟಚ್ಚರಿದಾಳ್ದುದುಂ; ಮುನಿ ಭೋಂಕನೆ ಪುಷ್ಪಕಮನೇಱಿ ಪೋಪಾವಿಪ್ರನಂ ನಿಮ್ಮತ್ತಣ ರಾಮಕಥಾಶ್ರವಣದಿಂ ಪಾವನನಾಗಿ ಮುನ್ನಿನ ಪುಣ್ಯಲೋಕಕ್ಕೆ ಪೋಪನಿದೆ ಎಂದು ತೋಱಿದಂ. ಅದರ್ಕಾರಘುಜಾವರಜಂ ನಯದಿಂ-ಎಲೆ ದೇವ! ಜೀವಿಗಾದಿಯೊಳಾಪುಣ್ಯಲೋಕಾವಾಸಮೆಂತೊಡರ್ಚಿದುದು ಪೇೞೆನಲೊಡಂ; ಶೌನಕಂ-ಪಿರಿದೇಂ ಮುಮ್ಮೆಯ್ಯ ಕರ್ಮಫಲಮಂತುಟು. ಅದಱಿನೀತಂಗೀವಿಧಿಯಾಯ್ತು. ಜಗದೆ ಜೀವಿಗೆ ಪೂರ್ವಕರ್ಮವರ್ಮಮೋಃಗೆಯುದ್ದಂ ಸಡಿಲದು; ಸುಖದುಃಖಂಗಳ್ಗದು ತವರ್, ನಿರಯಕ್ಕೆಱೆವೆಟ್ಟು. ಅಡಿಗಡಿಗೆ ಬರ್ಪ ಕುತ್ತಕೆತ್ತಂ ಬಿೞ್ತೀಕರ್ಮಮೆನುತೆ, ಕರ್ಮಿಗಳ್ಗ ನೇರಿಡುವ ಮಱುವುಟ್ಟುಗಳಂ ನರಕಂಗಳರಮಂ ಬಿಯದಿಗಳಂ ಬನ್ನಂಗಳಮಿನಿಸುಱಿಯದಂತು ಸಮಂಸು ನಿರವಿಸಿದಂ. ಶತ್ರುಹಂ ಮುನಿಯನೆಱಗಿ ಬೀೞ್ಕೊಟ್ಟು ಸೇನೆವೆರಸು ಹಯದ ಬಟ್ಟೆಯೊಳ್ ತೆರಳ್ದಂ.

ಎನ್ನ ಕಣ್ಮಣಿಯೆ! ಪೆಣ್ಮಣಿಯೆ! ಮಱುಗೊಂಡ ಕುತ್ತಮಡಂಗಿ ಪದುಳಮಿರ್ಪ ತೋಟಿಯ ತೋಳ್ವಲನ ನರದ ಹಿಂಡಿಗೆಯ ಬಲ್ಪೆಂತಂತೊಂದು ಬಲ್ಪಿಂ ಮೆಯ್ವೆರ್ಚಿ ತನ್ನಿಚ್ಚೆಯಿಂ ಮುಂತೆ ಮುಂತೆ ಪೋಪೋಪ ಕುದುರೆಗೆ ತಿಂಗಳೆಂಟಾಗಲೊಡಂ ಅಂಗವಂಗಾದಿದೇಶಂಗಳ್ ಕಂಗೆಟ್ಟು ಕಪ್ಪಂಗೊಟ್ಟು ಪಿಂಬಟ್ಟೋಲಯಿಸುತ್ತೆ ಬರುತುಮಿರ್ಪುದುಂ; ಮುಂದೆಸೆಯ ಕುಂಡಲಪುರಂ ಮೆಱೆದು ನಿಂದುದು. ಸುತ್ತೇಂ ಸುರ್ಕೇಂ? ಶ್ರೀರಾಮಚಂದ್ರಮನಂ ಕಣ್ಣಾಱೆ ಕಾಣ್ಬೆಂದು ಬಯಕೆ ಬೆಟ್ಟಿತಿರ್ಪನಮಾಗಳುಮಾಲಿ ಪೀಲಿಯಪ್ಪಿನೆಗಂ ಬಿಡದೀಪಂಬಲಿಂ ಬೆಂಡಾಗಿ ಕಂದುವಗೆಯಿಂ ನಂದಿ ಪೊಂದುಗುಂದಿ

ಪರ್ ಪುರದಧಿರಾಜಂ ಸುರಥರಾಜಂ ತಾನೋಲಗದೊಳಿರ್ಪನ್ನೆಗಮೊರ್ವ ರಾಜನೊಂದು ಭಕ್ತಿಯಂ ಪರಿಕಿಸವೇೞ್ಪುದೆಂದು ಜವಂ ಜವದಿಂ ಕಿಱುವರೆಯದೆಳಗವಸಿಯೊಂದು ರೂಪಂದಾಳ್ದು ಬಿಮ್ಮನರಮನೆಗೆಯ್ತಂದಂ. ಅರೆಗೆಂಪಿಡಿವ ಮುಡಿದ ಜಡೆಮುಡಿ ಬಾಂಗೊಂದಲನ ಕಪರ್ದಮಂ ಕೀೞ್ಮಾಡೆ, ಪಲಗೆವಣೆಯ ಬಾಮದ ಕೊಂಕಿನ ಭಸಿತಲೇಖೆ ಬೆಳ್ವಕ್ಕದ ಪಿದಿಗೆಯ ಚಂದವನೊಂದಂದದ ತಿಳಿದ ಕಳೆಯನಿೞ್ಕೆಯ್ಯೆ, ತುಂಬಿ ತುಳ್ಕುವ ಮೊಗದ ಮ್ಮೊಗಂಬಡೆದ ಸೊಬಗು ಪದ್ಮಸದ್ಮನ ಮೊಗಸಿರಿಯನೆಡವ್ರತೆಡಂಮಾಡೆ, ಪೊದೆದ ದುಗುಲಂ ರಣನಿಶಾಟಗಣದಿಶಾಪಟಮಲ್ಲನ ಚೆಲ್ವಿನ ಬೆಳ್ವಟ್ಟೆಯಂ ಪೞಿಯೆ, ನಿಱಿವಿಡಿದುಟ್ಟ ಪಟ್ಟುಡೆಯಂದಿನ ತ್ರಿವಿಕ್ರಮಮೂರ್ತಿಯ ತೆಳ್ಪಿನ ಪೊಗರ ನಿಗರದೊಳ್ಳುಡೆಯಂ ತೞ್ಗಿಸಿ ಕೞ್ಗಿಸಿ ಮುೞ್ಗಿಸೆ, ಕೊರಲೊಳೊಪ್ಪುವಚ್ಚಪೊಚ್ಚಚ್ಚಸರಂ ಮುಕುತಿವೆಣ್ಣ ಸಿರಿಗೊರಲ ಕರ್ಮಣಿಸರಮನಡಿಗೊತ್ತೆ, ತನ್ನೊಂದು ತೇಜಮೋಜೆಯಿನೋಲಗಸಾಲೆಯೊಳ್ ಪಳಂಚಲೆಯೆ ಬಂದ ಕಪಟವಟುಮಂ ವಟುಮಂ ಕಂಡಿರದಿದಿರೆೞ್ದು ಬೞಿಸಾರ್ದು ಕಾಲ್ವಿಡಿದು ಕೆಯ್ವಿಡಿದು ಕರೆದುಯ್ದು ತನ್ನ ಪೊನ್ನಗದ್ದುಗೆಯೊಳ್ ಕುಳ್ಳಿರಿಸಿ ವಿಧಿಯಿಂ ಪೂಜಿಸಿ ಮತ್ತಂ ದೈನ್ಯದಿಂ- ಅಪೂರ್ವಂ ನಿಮ್ಮಡಿ ಬಿಜಯಂಗೆಯ್ದಿರೇಂ ನಿರವಿಪ್ಪುದೆಂದು-ಬೆಸಗೊಳ್ವುದುಂ; ಕವಡುದವಸಿ- ಎಮ್ಮಂದಿಗರೇನೆತ್ತಮಿರ್ಕುಂ ಪೋಕುಂ. ಮನಮೊಲ್ದೆಡೆಗೈದಿ ಸದ್ಧರ್ಮಮಂ ಬೋಧಿಸಿ ಹಿತೋಪದೇಶಮನಱಿಯೆ ಪೇೞ್ವುದೊಂದೆ ನೇಮಮೆಮಗಂತದುಕಾರಣಂ ನೀನೆಮಗೆ ನನ್ನಿಯ ನೇಹಿಗನಿರ್ಪನಂ ನಿನಗಮಂತಿರೆ ಧರ್ಮರಹಸ್ಯಮನೊರೆಪ್ಪೋಡೆಂದಿ ಬಂದೆನೆಂದಂ. ಆನುಡಿಗೆ ಸುರಥಂ- ಏಱಿದರ್ಗಿಂತುಟೊಂದು ಮೈಮೆ ಗಡ! ಏನೆಂಬ ಕೂರ್ಮೆಯೊ! ಲೋಗರೊಳ್ ಅಱಿಮೆ ತಾನಿಂತೊಂದು ಮೆಯ್ವೆತ್ತು ಬಂದುದಾಗದೆ! ಇಂದಿಂಗೆ ವಲಂ ಧನ್ಯರೆಮ್ರು. ಆಬೊಡಮಿಂತಟಮಟಸಿ ನೋಯಿಪ್ಪೊಂದು ಪುಟ್ಟುಱವಱವೆಂಬೀ ಕೋಟಲೆಯಿಂ ಮುಕ್ತನಪ್ಪಂತಿರೆನಗೆ ಬಟ್ಟೆಯಂ ತೋಱ!- ಎನೆ; ಮಾಯದ ಜವನಿಕೆಯ ಜವಂ ಕಿಱುನಗೆಯಿಂ- ಎಲೆ ನಾಡೆಱೆಯ! ಪುಟ್ಟಿದೆ ಪೊಂದದೆ ಸುಖಮೆಂತಿಹಪರಂಗಳೊಳ್ ದೊರೆಕೊಳ್ಗುಂ. ಮುಕ್ತಿಯೊ

ಳೇನುಂಟು. ಲೋಕಮಿಂತೀಬೆಮೆಯುಂ ನಿರ್ಮಿತ್ತಮಗ್ಗದ ಸಗ್ಗದ ಸೊಗಮಂ ಪಾೞ್ಗಿಡಿಸಿ ಕೊಳ್ಳುಮದಱಿಂ ನಿನಗೆ ಪೇೞ್ದ ಧರ್ಮಂ ಕರ್ಮಂ. ಕರ್ಮದಿನೆ ಇಂದಿರಂ ದೇವರ್ಕಳೊಡೆಯನಾದಂ. ಬೊಮ್ಮಂ ಪೂರ್ವಕರ್ಮಜಿನ ಗಂಗಾವರ್ತಸನಾಭಿಯೊಳ್ ನಾಭಿಯೊಳ್ ಪುಟ್ಟಿಯುಂ ಸತ್ಯಲೋಕಕ್ಕೊಡೆಯನಾದಂ. ತಗರ್ದೇರಂ ನೇರ್ಗ್ಲೆಯುಂ ಮುಂತಪ್ಪರ್ ದೆಸೆವಳರಾದರ್. ಪತ್ತೇಂ, ಪಲವೇಂ? ಸರ್ವರುಂ ತಂತಮ್ಮ ಸತ್ಕರ್ಮದಿಂ ಸೊಗಮನುಂಬರ್. ನೀನುಂ ಸಡಗರದಿಂ ಜನ್ನಂಗಳನೆಸಗಿ ಸತ್ಪಾತ್ರದಾನಂಗಳನಿಲ್ಲಿ ದೆಸೆಸುಟ್ಟೆ ಜಸದಿಂ ಪೆರ್ಮೆವಡೆದಲ್ಲಿ ದುರ್ಲಭಸ್ವರ್ಗಸುಖಲಾಭಮಂ ಪಡೆವುದೊಳ್ಳಿತು-ಎಂಬುದುಂ; ರಾಜಂ-ಜೀಯ! ಇಂತಿದೆನ್ನ ಮನಕೆ ಸೇರದು, ಬಾರದು. ಕರ್ಮಂಗಳತ್ತಣಿಂ ದೊರೆಕೊಳ್ವ ಸುಖಂ ಭಂಗುರಮಲ್ತೆ. ಇಂದ್ರಂಗಂ ಕರ್ಮಫಲಾನುಭವಂ ಮುಡಿಯಲೊಡಮೊಡನೆಯೆ ಪತನಮಿರ್ಕುಮಂತಿರೆ ಬೊಮ್ಮಂಗಂ. ಅದಱಿನಿದಾಗದಾಗದು. ಮುಕ್ತಿಯನೆ ಬಯಸುವೆಂ-ಎಂದುಸಿರ್ದಂ, ಅದರ್ಕಾತಾಪಸಂ-ನೀನುಂ ಬಱಿದೆ ಬೆಮೆಗೊಳ್ಳದಿರ್. ಮರುಳರ್ಗಕ್ಕುಮೀಬಗೆಯ ಜಾನಂ. ನಿನ್ನನ್ನರ್ಗೆ ಸತ್ಕರ್ಮಫಲಮೆ ಫಲಂ ವಲಂ. ಮುನ್ನಿನ ರಾಯರ್ ಕರ್ಮಂಗಳಿಂ ನಾಕಮನೇಱಿ ಸುರಪನೊಳ್ ಬಲದೆ ಗದ್ದುಗೆಗೊಂಡು ಸುರವೆಂಡಿರಿಂ ಸೇವಿಸಿಕೊಂಡರುಂಟು. ಅದುಕಾರಣಂ ಕಣ್ಬೆಗಡಿನ ಮುಕುತಿಯ ಯುಕುತಿಯುಂ ಪಾರದೆ ನಿಜದಿಂ ದಾನಧರ್ಮಂಗಳಿಂ ಸಗ್ಗದ ಮುಂಬಾಗಿಲ ಪೇರಗುಳಿಯುಂ ಮುಱಿವಂತುಟಾಗಿಸೆನಲ್ಕೊಡನೆ ಜನಪಂ- ಬಡಬಡೆನೊಡಂಬಡೆಂ. ಈನಿನ್ನ ಕವಡುನುಡಿಗೆ ನೀನೇಮ್ರರ ಕೊನೆಸು ತಿರುಕದವಸಿರ್ದೊ? ಮುನ್ನಿನ ರಾಯರ್ ಕರ್ಮಫಲಾಪ್ತಿಯಿಂ ಸಗ್ಗಮಂ ಪೊಕ್ಕರುಂಟು; ನಿರಯಕಮಿೞಿದರುಂಟು. ಪಾಟ್ಪೇವ ಕರ್ಮದಿನೇಂ? ಶ್ರೀರಾಮನ ಧ್ಯಾನಮೊಂದೆ ಮುಂದುಂ ಪಿಂದುಮೆಂದುಮೆಂದಂ. ಆಗಳ್ ಮುನಿ ತಾಂ ಕಟ್ಟುಜ್ಜರಿಗೊಂಡನಂತೆ -ಆವನೊರ್ಸಂ ರಾಮಂ, ಆತನ ಧ್ಯಾನದಿಂ ಭಕ್ತಿಯಿನೇಂ ಮುಕ್ತಿ? ಮರ್ತ್ಯರ ಧ್ಯಾನದಿಂ ಮರ್ತ್ಯರ್ ಮುಕ್ತರಪ್ಪರೆಂತೊ! ನಿನಗೆಗ್ಗಂಗಿನಿತೊಂದು ಜ್ಞಾನಮಾರ್ಗಮಂ ಬೋಧಿಸಿದ ಮರುಳಂ ಪೆಱನೊರ್ವನಾ

ವನೊ! ಎಲೆ ರಾಯ! ಎನ್ನಂ ಮನ್ನಿಸು! ಎನ್ನುಪದೇಶಮಂ ಲಾಲಿಸು! ಹರಿಯೆಂದುಂ ಹರನೆಂದುಂ ರಾಮನೆಂದುಂ ಕಾಮನೆಂದುಂ ಪುರ್ಚುಗೊಳ್ಳದೆ ನಿನ್ನ ಪೂರ್ವಜರೆಂತಂತು ಸುಖದಿಂ ಬಾೞ್ವುದು ಕರಂ ಮೇಲೆಂಬುದುಂ; ಕಡುಮುನಿಸಿಂ ಕಿಸುಗಣ್ಚಿ— ಎಲೆಲೆ ಧೂರ್ತ! ನೀಂ ಮುನಿಯಲ್ತು. ಎಮಗೀಬಗೆಯೊಂದುಪದೇಶಂಗೆಯಲ್ಬಂದ ನೀನೆಂದಿನ ಕಾಲನೇಮಿಯಕ್ಕುಂ. ಶ್ರೀರಾಮನಂ ಪೞಿವ ನಿನ್ನೀಕೊನೆನಾಲಗೆಯುಂ ಕೂರಸಿಯಿಂ ಪೋೞಲ್ವೇಡಾ! ವಿಭೀಷಣಾದ್ಯರಾವನೊಂದು ಜಾನದಿಂ ನಿಶ್ಚಲಪದವಿಯುಂ ಪಡೆವರೆಂದು ಬಗೆಯುವ ಕಡುಕೂಬಿನಿನವನಂ ನೂಂಕಿ ಕಳೆಯದೇಂ ಪೂಣ್ದಿರೆಂದು ಗುಡಿಗುಡಿಸಿ ಜಡಿದು ತನ್ನಾಳ್ಗಳಂ ನೋಟ್ಪಿದುಂ; ಅಜಂ ತಾನೆ ಮೆಯ್ದೋಱಿ— ಎಲೆ ಜನಪ! ಮೆಚ್ಚಿದೆನೀನಿನ್ನ ದೃಢಭಕ್ತಿಗೆ. ಆಂ ಜವಂ. ಇಂತಿವಱೊಂದು ಪಡಿಸಣದುಜ್ಜುಗದಿನೆ ಬಂದೆಂ. ನಿನ್ನಿನಾವನನ್ಯಂ ಧನ್ಯಂ. ಭವದ ಭಯಂ ಪಿಂಗುವೊಡಿಂತಿದೊಂದೆ ಬಟ್ಟೆ, ಲೇಸು ಲೇಸಯ್. ನಿನಗೇತಱೊಳುಂಟು ಬಸುಕೆ ಪೇೞ್. ಕುಂದದೆ ಸಲಿಪೆಂ—ಎಂಬ ಧರ್ಮರೂಪನಂ ಮೂಱುಂ ಸೂೞ್ ಬಲವಂದಡಿಗೆಱಗಿ ಕೆಯ್ಗಳಂ ಮುಗಿದು—ಜೀಯ! ಗಾವಿಲದವಸಿಗೆತ್ತಿ ನಿರ್ನೆರಂ ನಿಮ್ಮಂ ಬಯ್ದೆಂ. ದೇವರೆಂದಱಿತೆನಿಲ್ಲಂ. ಎನ್ನೊಂದು ಪೊಲ್ಲದ ಗೆಯ್ಮೆಯಂ ಮಱೆವುದು, ಕಾವುದು. ಮೇಣೆನ್ನೊಳ್ ಕೂರ್ತಿರಪ್ಪೊಡೆ ಬರ್ದಿನ ಪೋರ್ದಿನ ಮುನ್ನಮೆ ಶ್ರೀರಘುನಾಯಕನಂ ಕಣ್ಣಾಱೆ ಕಂಡು ಧನ್ಯನಪ್ಪಂತು ವರಮಂ ಕರುಣಿಪುದು— ಎಂದು ಸುರಥಂ ಸೆಱಗನೊಡ್ಡಿ ಬೇಡಿಕೊಂಡಂ. ಈನುಡಿಗೆ ಯಮಂ— ನಿನ್ನಾಣೆ ನಿನ್ನಂ ಪಗೆಯೆಂ. ನೀಂ ನಿಚ್ಚಟದ ರಾಮಭಕ್ತನಿರ್ಪನಂ ಕಿಱಿದಾನುಂ ದಿನಕ್ಕೆ ರಾಘವಂ ತಾನೆ ಬಂದು ಮೆಯ್ದೋಱಿಯುಂ ಬೇಡಿದಿಷ್ಟಾರ್ಥಂಗಳನಿತ್ತುಂ ಪೋಪನಿನಱೊಳ್ ಸಂದೆಯಮಣಮಿಲ್ಲಮೆಂದು ಸಂತಮಿಟ್ಟು ತಾನಂತರ್ಹಿತನಾದಂ ಗಡ. ಇಂತೆಂಬ ಕತೆಯಂ ಸುಮತಿ ತನ್ನಾಣ್ಮಂಗೆ ಬಿತ್ತರಿಸಲೊಡಂ ಶತ್ರುಹಂ ತಲೆದೂಗಿ ಮುಂತಣ ಕಜ್ಜದುಜ್ಜುಗಕೆ ಮಂತಣದೊಳಿರ್ದುಮತ್ತಲ್ ಹಸುವಂ ಬಂದಿಗೊಂಡ ಪೊೞಲ ತಳವಾಱರೊರ್ವರ್ಗಂ ಕಟ್ಟೋಲಗದ ರಾಯನೆಡೆಗೆಯ್ತಂದು ನಾಡಂ ಪುಗುತಂದ ಬಾಡಬದಿರನನೊಕ್ಕಣಿಸಿ ಪಸೆಯೊ

ಳೊಪ್ಪಿದೋರ್ಲೆಯನೊಪ್ಪಿಸಿ ತಾಮಾಣತಿಯುಂ ಪೊರುತುಮಿರ್ಪರಾದರ್.
ಇಂತಾಗಲೊಡಂ ಸುರಥಂ ತಳಾಜರಿತ್ತ ಕಟ್ಟೋಲೆಯಂ ತಾನೆ ಬಿಡದಾ
ಮೂಲಾಗ್ರಮೋದಿ ಮೋದಂಬೆತ್ತು ತನಗೆ ತಾಂ- ಕಡುಲೇಸಾಯ್ತು.
ಪುಸಿಯಾಗದಾಯ್ತೆಂದು ಬಂದ ಧರ್ಮರೂಪನೊಂದಮರ್ದುನುಡಿ ! ಎನ್ನಂ
ಕಾವ ಬಗೆಯಿಂ ಮುಂತಟ್ಟಿದನಕ್ಕುಂ. ಏಂ ಕರುಣಾಕರನಾಗನೆ ದೇವಂ!
ಇರ್ಕೆ! ರಘುಕುಲವಾರ್ಧಿರಾಕಾಶಶಾಂಕಂ ತಾನೆ ಮೆಯ್ದೋರ್ಪುವನ್ನೆಬ
ರಂ ಕ್ಷತ್ರಿಯರ ಪಂತಮುಂ ಬಿಡದೆ ಬಿಡದೆ ಹಯಮುಂ ಕಟ್ಟಿಕಾದುವೆ
ನೆಂದು, ನೀಡುಂ ಬಗೆದು, ತನ್ನ ಪಡೆವಳರಂ ಬರಿಸಿ, ದಂಡಂ ಬಂಡಣ
ಕನುವಪ್ಪಂತು ಸಾಜಿಸಿ, ಚಂಪಕಮೋಹಕರ್ ಮುಂತಪ್ಪ ಪದಿಂಬರ್ ಕು
ಮರರ್ವೆರಸು ತಾನುಂ ಬದ್ಧದಿಂ ಯುದ್ಧಸನ್ನದ್ಧನಾದಂ. ಇತ್ತಲ್ ಶ
ತ್ರುಹಂ ತಾನೆ ತನಗೆ ತಜಿಸೆಂದು ಬಂದು- ಅಂತಪ್ಪೊಡೆಮಂಗಾರಾಯನೊ
ಳ್ ಕಾಳೆಗಂ ಸಲ್ಲದು ಪೊಲ್ಲದು. ತನ್ನವನಂ ನೋಯಿಸಿದರೆಂದೆಮ್ಮನ
ಣ್ಣಂ ಮುನಿಗುಂ. ಅದಱಿನಿ ಬಗೆಯಿನೆಮ್ಮೊಳೊರ್ವನಂ ದೂದಟ್ಟಿ ರಾಯಂ
ಗೆ ತಿಳುಪಿ ಹಯಮುಂ ತರಿಸುದೆಮಗಕ್ಕುಮೆಂದು ಬಗೆದಂದು ಸುಮತಿ
ಗೊರೆವುದುಮಾತನುಮಂತಿರೊಡಂಬಟ್ಟಂಗದನನಿದಱೊಳ್ ನಿಯೋಗಿಸಿ ಕ
ಳಪಿದರ್.

ಅಂತಪ್ಪುದುಮಾಗಳುರ್ಕಿನ ಸೊರ್ಕಾಳ್ತನದಿಂ ನೀಳ್ದಂಗದಂಗದನಂ
ದಿನ ರಾವಣನೆಡೆಗೆಂತಂತು ಕಡುಸಡಗರದಿಂ ದೂದ್ಯೆದಿವಂದು ರಾಯಂಗೆ
ಕಾಣಿಸಿಕೊಂಡು ಪಸಾಯನನುನೊಪ್ಪಿಸಿ ಮನ್ನಣೆಗೊಂಡು ಸಮುಚಿತಾ
ಸನದೊಳ್ ಕುಳ್ಳಿರ್ಪುದುಂ; ಬಿತ್ತರದ ಬಿತ್ತರಿಗೆಯೊಳೊತ್ತರದ ಗಾಡಿಯಿ
ನೊಪ್ಪಿರ್ದ ರಾಯಂ- ಎಲೆ ಬೀರ! ಎತ್ತಣಿನೀಪಾಪ್ರಡಂ ? ನೀ
ನಾವನಾರವನೇನುಂಟೆಮ್ಮೊಳ್ ನಿನಗೆ ಕಜ್ಜಂ? ಪೇಳೆಂದೊಡೆ- ಎಲೆ ಮಾ
ರಾಯ ! ಮುನ್ನಂ ಕೇಳ್ದುಂಟೆ ದಶಕಂಠನ ಕಂಠನಾಳಂಗಳಂ ಕೊ
ಳ್ಳಿಪುಳ್ಳಿಯಪ್ಪಿನೆಗಂ ಸದೆದು ಕೊಂದು ಕಳೆದ ಶ್ರೀರಾಮರಾಮನಂ ರಾ
ಮನಂ? ಆತನಡಿಯುಬಚ್ಚುಳಾಯ್ತನಂಗದನೆಂ. ದೇವರ್ ಜಗಮುಂ ಕಾವ
ರೆಂಬೊಂದಗ್ಗಳಿಕೆಯಂ ಜನಕೆ ತೋಱಿಪ ಬಗೆಯಿಂ ಬೇಳ್ವರಕ್ಕುಂ.
ಅದಱಿನವರ ಯಜ್ಞೀಯಾಶ್ವಂ ನಿಮ್ಮ ನಾಡಂ ಪುಗುತಪ್ಪುದುಂ, ನಿಮ್ಮವ

ರ ಕಟ್ಟಿದರ್ ಗಡ! ಅದುಕಾರಣಮಾಕುದುರೆಯ ಬೆಂಗಾಪಿನ ದಕ್ಷಡವ ಗಂಡುಗಲಿಗಳ ಗಂಡಂ ರಾಘವಾವರಜನೆನ್ನಿಸಿಂತು ಪೇೞ್ದಟ್ಟಿದನೆಂತೆನೆ:— ನೀವೆಮ್ಮಂದಿಗರಿರ್ಪುದುಂ ರಣಕಂ ಪಣಕಮಾಸೆವಾಡದೆ ಹಯಮಂ ಬಿಟ್ಟು ಕಪ್ಪಮಂ ಕೊಟ್ಟು ನೆರೆವಾೞ್ವುದು ಕರಮೊಳ್ಳಿತ್ತು; ಬಱಿವೆ ದೇವರೊಳ್ ಪಗೆದು ಇಹಕಂ ಪರಕಂ ಬೆನ್ನಾಗದಿರಿಂ. ಇಂತಿಪಂ ಬಗೆಯೊಳೊರೆದು ಮೇಲಣ ಕಜ್ಜಮಂ ಕಾಣ್ಬುದು ಲೇಸು- ಎಂದಂ.

ಈಪರಿಯಿಂ ಕಂಚುಮಿಂಚಾಗಿ ನುಡಿದಂಗವನ ಪೊಂಗದ ನುಡಿಗಳನಾಲಿಸಿ ಸುರಥಂ— ಅಪ್ಪುದಪ್ಪುದು. ಬಲ್ಲೆಂ ಬಲ್ಲೆನಾಜಗದ ದೈವಮಂ. ಪಗೆಯುಂ ಬಗೆಯೆಂ. ಕೇಳ್ವೊಡಿಂತಿದೊಂಗು ಬಿನ್ನಪಂ. ದೇವರಡಿಯೊಳ್ ತಾಂ ಪೇೞ್ವಂತು ತನ್ನ ಹಯಮಂ ತಾನೆ ಬಂದು ಕೇಳ್ದೊಡಾಗದೆ! ಕಾಣ್ಕೆಯುಂ ಕಪ್ಪಮುಂ ನಾಡಂ ಬೀಡಂ ವಸುವನಸುವನೊಡಲನೊಡಮೆಯುಮನೆಲ್ಲಮುಮನೊಪ್ಪಿಸೆನೆ! ಆದೊಡೆನ್ನೆವರಂ ಶ್ರೀರಾಮಂ ತಾನೆ ಮೆಯ್ದೋಱಂ ಬಾರನನ್ನೆವರಂ ವಾಜಿಯಂ ಸಾಜದಿಂದೀಯೆಂ ಬೀಯೆಂ. ಮಿಕ್ಕುೞಿದ ನಿಮ್ಮ ಸೊರ್ಕುಜವ್ವನಿಗರಂ ತಿಕ್ಕಿ ತೆಕ್ಕೆಯಾಡುವೆನಿಂತಿದು ದಿಟ್ಟಮೆಂಗಂ. ಆಗಳಂಗದಂ- ಏನ್ಯೈಯ! ಪೊಂದುವ ಸಂಧಿಯ ನುಡಿಗಳನಾಡದೆ ಸಲ್ಲದ ನಿಲ್ಲದ ನಾಡ ನುಡಿಗಳನೆಮ್ಮವರ್ ನೋವಂತಿರೆ ಸುಡುಮಾತುಗಳಂ ಗೞಪುವಯ್! ಏಂ ಲವಣಾಂತಕಂ ಸಾಲನೆ! ಪುಷ್ಕಲಾದ್ಯರ್ ಸಾಲರೆ! ಆಂ ಸಾಲೆನೆ! ಇದಱಿಂ ನಿನಗೆ ಸುಖಮಾಗಲರಿಯದು. ಅಂತು ರಾಮನನೆ ಕಣ್ಣಾಱೆ ಕಾಣಲ್ಕೆಂದು ಬಯಸುವೆಯಪ್ಪೊಡೆ ಎಮ್ಮನೊಡೆವೆರಸಯೋಧ್ಯೆಗೆಯ್ತರಲೊಡಂ ಕಂಡು ಪಾವನನಾಗಲಕ್ಕುಂ. ಚಿಃ! ಮರುಳೆ! ದೇವರ್ ನಿನ್ನೆಡೆಗೆ ಬರ್ಪುದುಂಟೆ! ಬಾರರ್. ಅದುಕಾರಣದಿಂ ದೇವರ್ ಮುನಿಯದ ಮುನ್ನಮನುಜಶತ್ರುಹನ ಶರಹತಿಗೆ ಸೋಯದ ಮುನ್ನಮುಗ್ಗದ ಪುಷ್ಕಳನ ಕವಲಂಬಿನಿಸುಗೆಗೆ ಗಾಱುಗಿಡದ ಮುನ್ನಮಣುವನ ಸಿಂಹಗರ್ಜನೆಗೆ ಬೆಬ್ಬಳಿವೋಗದಮುನ್ನಮೆನ್ನ ಗುರ್ದಿಂ ಬರ್ದದ ಮುನ್ನಮೆಂತಾನುಮೆಮ್ಮವರಂ ಕಂಡು ಮಱೆವಾೞ್ವುದು ಮೇಲೆಂದು ಸಭೆ ಬಿಲ್ಲುಂಬೆಱಗಪ್ಪಂತು ಜರ್ವಿ ಬೆಸೆದು ನುಡಿಪ್ಪುದುಂ; ಮಾರಾಯುಂ ಪಿರಿದುಂ ಕನಲ್ದು-ತೆಗೆ ತೆಗೆ ನಿನ್ನ ಶತ್ರುಹಗಿ

ತ್ರಿಪುರಹರಂ. ಮುಕ್ಕಣ್ಣನೆ ರಣದೊಳಿದಿರಾದೊಡಂ ಬಗೆವೆನೆ? ನಿಮಗಂ ದೇವರ್ಗಂ ನಯಕಂಜುವೆನಲ್ಲದೆ ಭಯಕಲ್ತು. ಅಂತಾಗದಂದು ನೀವೆ ಬಿಲ್ಲಾಳ ಬಲ್ಲಾಳರಪ್ಪಿನಂ ಮೊನೆಯೊಳಿ ಹಯಮಂ ಕೊಳ್ವುದು ರಾಮನಂ ತೋಱದೆ ಸಂಧಿಗೊಂದೆಂ. ಬಿಣ್ನುಡಿಗೆ ಬೆಱಗಾಗೆಂ. ಇದು ಸಿದ್ಧಂ ಬದ್ಧಮೆಂದು ಪ್ರೌಢ್ದು ನುಡಿದು ಬಂದ ನಿಯೋಗಿಯುಂ ಪಿಂತಟ್ಟಲೊಡಂ; ವಾಲಿಪುತ್ರನಿಚ್ಚೆ ಪಚ್ಚೆಯಾಗಿ ಚೆಚ್ಚಱದಿಂ ಬಂದು ತನಮ್ಮಣ್ಣಂಗಿಂತಿದಂ ಕೇಳಿಸಿದಂ.

ಬೀರಬೇಟ್ಗೆ ತಮಗಾನುಡಿಯೆ ಗುಡಿಯಾಗೆ ಆಕೆವಾಳರೆಲ್ಲರ್ ಕಲಿಯಾಗಿ ಕಣೆಯು ದೊಣೆಯು ಕಲ್ಲ ಬಿಲ್ಲ ಜೆಟ್ಟಿನ ಮುಟ್ಟಿನ ಮರನ ಗಿರನ ಪ್ರೌಱಮೊಳೆತ್ತಿನಸೆದು ಮತ್ತಮೆತ್ತಂ ಮುತ್ತಿ ಗರ್ಜಿಸಿದರ್. ಆ ಗರ್ಜನೆಗೆ ಮುಂಗಾರ ಸಿಡಿಲ ಗರ್ಜನೆಗೆ ಮೊರೆದು ಮುಱಿದೇಳ್ವ ಸಿಂಗನಂತೆ ಜೊಬ್ಬಿಱಿಮಬೆಟ್ಟು ಸರಥಂ ಸುರಥಂ ದಂಡಂಗೊಂಡು ದಾೞಿಡುವ ದೆಬ್ಬಾಳದ ದಕ್ಕಡಿಗರಂ ತಱುಬಿ ನಿಂದಂ. ಅನಿತಱೊಳ್ ಸಹದೇವಭೂರಿದೇವರಿಪುಂಜಯಪ್ರಮುಖ ಪುತ್ರವರ್ಗಮುಂ ಮಂತ್ರಿವರ್ಗಮುಂ ಮೂಲಬಲಂಬೆರಸು ಬೆಂಬಲನಾಗೆ ಬಂದೊದವಿದರ್. ಆಗಳಾಕಾಡೆಯೊಳಂ ನಿಡುಗೋಲ ಬಲ್ಸರಿ, ಬೋಲೆಯಂಬಿನ ಸೂಟ್ಸರಿ, ನಿಡುಗಲ್ಲ ಮೆಲ್ಸರಿ, ಬಡಿಗೋಲ ಜಡಿ, ಪೊಯ್ಮರನ ಪೊಯ್ಮೆತೆ, ಬಟ್ಟಕೈದಿನ ದಿಟ್ಟಸೋನೆ ಎತ್ತಂ ಕಱೆದತ್ತು. ಇಂತಪ್ಪದುಮುರ್ಕಿನ ಕೇಣಿಯು ಚೂಣಿ ಸೋರ್ಕುಂಜೆಕ್ಕಾಗಲೊಡಂ ಕಂಡು ಮಿಂಚೆಟ್ಟು ಪಡೆವಳರೆಲ್ಲರುರವಣಿಸಿ ಮುಂಬರಿದೊತ್ತಿ ನಿಂದರಾಗೆ ಕಾದಿ ಮೋದಿ ತಾಂ ತಮಗೆ ಜವಪುರದ ಪಡಿಸಳರಾದರ್. ಈಗಳಿರ್ಚಕ್ಕದೊಳತಿರಥರ್ಗರ್ಧರಥರ್ಗೆ ಮಹಾರಥರ್ಗೆ ತಂತಮ್ಮೊಳ್ ಪೋಣರ್ಕೆ ಗಡ! ರಿಪುಂಜಯಗೆ ವಿಮಲಂ ಸಾಟಿ, ದುರ್ವಾರರಂಗೆ ಸುಬಾಹು ಪಾಟಿ, ಹರ್ಯಕ್ಷಂಗೆ ನೀಲರತ್ನಂ ಪೋಟಿ, ಬಲಮೋದನಂಗದಂಗೆಣೆ, ಸಹದೇವಂಗೆ ಸತ್ಯವಂತಂ ತೊಣೆ. ಇಂತೋರಗೆಯಿಂ ತಾಮಿರ್ದುಟ್ಟಾಗೆ ಕಾದುತಿರಲೊಡಮತ್ತಲೊಂದೆಡೆಯೊಳ್ ತನ್ನೊಂದು ಪಸ್ನತಿಕೆಯಿಂ ಪಡಿವಲಮನರಿಯುತಿಱಿಯುತೆ ಬೀದಿವರಿಯುತೆ ಬರುವರುತುಮಿರ್ಪ ಚಂಪಕನನಿದಿರ್ಚಿ ಕೋಲ್ಗಱೆವ ಪುಷ್ಕಲಂ—

—ಎಲೆಲೆ ಗಬ್ಬದುಬ್ಬರನ ಗರುಡಿಯ ಬೀರ! ನೀನೇವೂರ ರಾಯಗುವರನೊ? ಕೆಮ್ಮನಿರದೆ ಬಱಿದೆ ಪೆಱರೊಡವೆಯ ಜನ್ನದಸುವಂ ಪಸುವಂ ಕವರ್ವ ಕಿತವರೆಂತಂತು ಬಲ್ಪಿಂ ಕೊಂಡುಯ್ದು ನಿಮ್ಮವರ್ಗೆ ನೀಂ ಗಂಡನೆ! ಬಂಡನೆ! ನುಡಿ ನುಡಿಯೆಂದಂ. ಆಸೊಲ್ಲಂ ಪುಲ್ಲಂ ಬಗೆದು ಪಲ್ಲಮುಱಿಯೊಂದಾಯತಿಯಿಂ ಮಿಕ್ಕುಮೀಱಿ ಪೊಕ್ಕಿಱಿವಟ್ಟೆಯುಂ ಮುಟ್ಟೆ ಮುಱಿದು ಮುಂಡನುಂ ದಿಂಡುರುಳ್ಚಿ ರುಂಡಮಂ ಸೆಂಡಾಡಿ ಕೊರ್ವನಾಲೆ ಕರ್ವನೆಂತಂತು ಪಿೞಿದು ಮುಳಿದು ಮುಂದೊತ್ತಿ ಪೋಪನಂ ಕೋಪದಿಂ ತಱುಬಿ ಮತ್ತಮೆಂಗುಂ. ಓ! ಓ! ಗರುವಾಯ ಬಲ್ಗಡಸುಗಾಱ! ನುಡಿವಂಗೆ ನುಡಿಯದುಸಿರನೆ ಪೋಪ ಪೆರ್ಮೆಯದೊಂದು ಪೆರ್ಮೆಯೆ! ಪಡಿನುಡಿಗುಡವೇಡಾ! ಬಲ್ಪುಳ್ಳೊಡೆನ್ನನ್ನರೊಳ್ ತೋಱದೆ ಆಱದ ಬಾರದ ಬಱುಬಡವುಬಣಗುಗಳಂ ಕೊಂದಿಂ ತಿಂದೆನೆಂದೊಡೊಂದು ಕಾದಾಳ್ತನಮೆ! ಮತ್ತಂ ಮೇಣುಮಂತದನೊರ್ಮೆ ನಿನ್ನಂ ಕೇಳ್ವೆಂ. ನೀನಾವನೇವಂ? ನಿರ್ನೆರಮೆಮ್ಮಂ ತಿಣುಕಿ ಕೆಣಕಿ ನೋಯದೆ ಸಾಯದೆ ಬಂದ ಬಂದಿಯ ಕುದುರೆಯಂ ಬಿಟ್ಟು ಕಾಣ್ಕೆಗೊಟ್ಟು ನೆಱೆ ಮಱೆವೊಕ್ಕುದು ಕರಂ ಲೇಸೆಂದಂ. ಆಗಳ್ ಚಂಪಕಂ ಕಿನಿಸಿಂ—ಎಲೆ ಎಲೆ! ಕಡುಸಡಗರದ ಬಡಿವಾರದ ತೋರದೋಟಗ! ರಣಕ್ಕೆ ಮೆಯ್ಯಾಂತು ನಿಂದೆನ್ನಂ ಮುನ್ನಮಾರೆಂದು ಕಿಱುಕುಳನೆಂತಂತು ಬೆಸಗೊಳ್ವ ಬೆಸೆಗಾಱ! ನಿನ್ನ ಗರುವಿಕೆಗೆ ನಾಡೆ ನೋಡೆ ತೋಡೆ! ಬಡ್ತಿನಿಂದ ಗಂಡುಗಲಿಗಳ್ಗೆ ಸೊಲ್ಲೆ ಬಿಲ್ಲಪ್ಪಿನನೀಗಳ ನಿನ್ನೊಳ್ ನುಡಿವೊಡೆಂದೆ ನಿನ್ನಂ ತಾಗಿವಂದೆಂ. ನಿನ್ನೊಳುಱಿದೆ ನಗಾವುದನ್ಯಂ ಜನ್ಯಂ? ಪೆಸರೇನೆಂಬೆಯಪ್ಪೊಡೆ ನಿನ್ನನ್ನರಪ್ಪ ಸೊಕ್ಕಿನ ಬಂಡುಣಿಗಳ್ಗೆ ತಲೆವೇನೆಯನೊದವಿನ ಚಂಪಕನಪ್ಪ ಚಂಪಕಂ. ತೋಳ್ವಲಮುಳ್ಳೊಡೆ ಕಾದಿ ಕುದುರೆಯಂ ಕೊಳ್ಳೆಂಬುದುಂ— ಪುಷ್ಕಲಂ— ಏನೆಂಬ ಪೊಸ್ಪೊ! ತಾಂ ಗಡ! ಚಂಪಕಂ ಗಡ! ಬಂಡುಣಿಗಳ್ ಗಡ! ಏಂ ನಿನ್ನ ಪ್ರಾಣಂಗಳ್ಗೆ ದರ್ವೀಕರನಾಗೆನೆ! ನೋಡೆಂದಂ. ಅದರ್ಕಾ ಚಂಪಕಂ— ನೀಂ ದರ್ವೀಕರನಪ್ಪೊಡೀಕಳನೊಳೀ ನಡುಕಳದೊಳಡುವಳನಕ್ಕುಂ. ಭಾರತ್ರಿಯೆಂಗುಂ— ಅಂತಪ್ಪೊಡೆ ತಳ್ವ

ದೆ ತಱಿದು ಸುಂಟಿಗೆ ಪಂಟಿಗೆ ಸಲ್ವಿನಂ ನಿಮ್ಮನೆ ಬಾಣಸುಗೆಯ್ದು ಪರ್ದಿಂಗೆ ಬಿರ್ದಿಕ್ಕುವೆಂ, ನೋಡೆಂದು ಪೊಂಗಱಿಯ ಕವಲಂಬಂ ಚವಲಂಬವಾಡದ ಮುನ್ನಮೋಡುವಿನಂ ಪೋಗೆಚ್ಚಂ. ಇಂತಿರೆ ಪಗೆಯ ಸವಗದೊಳೆಚ್ಚ ಕಣೆ ಬೆಚ್ಚಂತಾಗಲೊಡಂ ನಾಂಟಿದಲಗನಲಘುಭುಜಪ್ರತಾಪಂ ಎನಸುಂ ಬಗೆಯದಕ್ಷಯಬಾಣಂಗಳಂ ಪ್ರಷ್ಕಳಂ ಪ್ರಷ್ಕಳನಂ ನೋಯಿಸಿದಂ. ಇಂತಸ್ತ್ರದುಂ ಶರಪತ್ರಿಗೆ ಗಾಱುಗೆಟ್ಟುಬ್ಬಸಂಬಟ್ಟು ವೈರಿಮುಱಿದನಾಗೆ ಬಲದೊಳೆತ್ತಂ ನಿಬ್ಬೆಱಗಿನ ಕಲಕಲಂ ಪಿರಿದಾಯ್ತು. ಅನಿತಱೊಳೆ ಶತ್ರುಘ್ನಂ ಘಾತಿಗೊಂಡು ನೋವು ತನಗೊಂದು ಮನಕ್ಕೆ ಬೇಸಾಗೆ ಮುಂಬರಿದೊತ್ತಿ ಮುತ್ತಿ ಗಜಱಿ ಗೆಲ್ಲವ ಚೆಲ್ಲದ ಪಱಿಮಱಿಯ ಗಂಡರನೆತ್ತಂ ಪಿಂಡುಗಡೆದ್ರತಂಡದೆದು ಬೆಂಡಾಗಿ ಮತ್ತಮುಗ್ರದ ಪುಗ್ಗಿನ ಚಂಪಕನನಿಸಿ ಮಱುಂತು— ಓವೋ! ಪೋಟಿಗರಿತ್ತಲಿರ್ಪರೆ! ಬಾಣಿಗರ ಬಲ್ಪುಳ್ಳರ್ ನಿಮಗಾವೀಗಡೆಯೆಡೆಯಾಯ್ತೇ! ಪೇಡಿಯುಂತುಂ ಬೋಳಿಯುಂತುಮಿಂತು ತಲೆಗೆಡಿಪ್ಪದಿದಾವ ರೂಢಿಯೋ? ಕಿಱುಕುಳರಂ ತರುಪಲಿಗಳಂ ತಱುಂಬಿ ಗೆಲ್ವುದು ಗೆಲ್ಲಮೆ ಪೊಲ್ಲಮೆಯಾಗದೇಂ ನಿಮಗೆ! ಅತ್ತಲಿತ್ತಲ್ ಚಿತ್ತವಿಪ್ರನೆನ್ನ ಸರಿಸಕ್ಕೆ! ಆನುಂಟು; ತೋಳ್ವಲ್ಪ್ ನೀವುಂಟು. ಇಂತೆನ್ನ ಸಜ್ಜೆನೆಟಗೋಲ ಸವಿಯುಂ ಇನಿಸಿನಿಸುಂ ಕಾಣಿಪೆಂದು ಬಲ್ಗೋಲ್ಗಳಂ ತಿರುವಾಯ್ಗೆ ಸಂಧಿಸುತೆಚ್ಚಂ. ಆಗಳ್ ಚಂಪಕಂ ಪಿಳ್ಕು ಪೆಸಗಾಗಿ ಬರ್ಪ ಶರನುಂ ತನ್ನೊಂದಂಬಿನಿಂ ಮುಱಿದು ಮೋಸ ಪುಂಖಾನುಪುಂಖವಾಗೆ ಪತ್ತುಂಬುಗಳಂ ಗೊಲೆ ನೆಲೆವಪ್ಪುವಿನಂ ನೇಡಾದೇಸಾಡಿದಂ. ಅಂತೇಸಾಡಿ ಬರ್ಪ ಪ್ರಣಂಬುಗಳಂ ನಡುವಟ್ಟೆಯೊಳೆ ಕೊಚ್ಚಿ ಪಡಿಸರಲಿಂ ತೇರ ಕೀಲಂ ಪಾರುವವ ಕಾಲಂ ಮುಱಿದಂ. ಇಂತಾಗಲೊಡಂ ಮೂಱಡಿಯ ಪೇರಡಿಯೊಂದು ಪಾಂಗಿನಿಂ ಪಯಂ ಕೊಂಟಿ ನಡೆವುದುವಾರಥಮನುಱಿದು ಮೋಹನೊಂದು ಬಿನ್ನಣದ ತೇರನಡರ್ದು ಚಂಪಕಂ ನೊಂದ ಪಂದಿಯೊಂದು ಮಸಕದಿಂ ಕೆರಳ್ಗಣ್ಮಿಕ್ಕೆಂದು ಮಂತ್ರಾಸ್ತ್ರಂಗಳಂ ಭರತಾವರಜಂಗೆ ಪೂಡಿದಂ. ಆಗಳ್ ಮಂತ್ರಮಂ ತಂತ್ರದಿಂ ತಱಿದು ಪೊಸವುಸೆಯ ವಿಶಿಖಂಗಳಂ ಪಗೆಯ ಬಿಲ್ಲಂ ಪಲ್ಲಂ ಕಡಿವಂತು ಮುಕ್ಕಡಿಗೆಯ್ದು

ಬೊಬ್ಬಿಱಿದಂ. ಚಂಪಕನೆಂಗುಂ:— ಕನ್ಬೇನೆಯ ಕರಡಿಯಂತೊರಲದಿರೆಲೆ ಕೂಸ! ಚಾಪಂ ಪೋಗೊಡೇನಕ್ಕುಂ. ನಿನ್ನೊಂದು ವಧೆಗೀಗದೆ ಸಾಲದೆ? ನೋಡೆಂದು ದಂಡಂ ಖಂಡಮಪ್ಪಂತು ಪೊಯ್ದಂ. ಅನಿತಱೊಳೆ ಗದೆಯುಂ ಸದೆದು ಮೇಗೆರಡಂಬಿಂ ಮುಂಬಿಗನಂ ನಿರಾಯುಧನಂಗೆಯ್ದು ನಿಶ್ಚೇಷ್ಟಿತನಪ್ಪಂತು ನೋಯಿಸಿ ಕಣದೊಳ್ ಕೆಡೆಪಿದಂ. ಇಂತು ಚಂಪಕಂ ಜೋಂಪಿಸಿ ತಿರೆಯೊಳ್ ಕೆಡೆವುದುಂ ಅೞಿದುೞಿದ ಬೆಂಬಲಂ ಮುಂಬಲನಾಗೆ ಬೆಂಗೊಟ್ಟೋಡಿ ತಮ್ಮಾಣ್ಮಂಗಿಂತಿದಂ ಕೇಳಿಸಿದರ್. ಬಡನೆಯೆ ಸುರಥಂ ರಥಮನಾಪಡೆಗೆ ನೂಂಕಿ ಪಗೆಯನಸ್ತ್ರಜಾಲದಿಂ ಸೆಱೆವಿಡಿದುಯ್ವೆನೆಂಬೀವೇಳೆಯೊಳಣುಗನರಿಯಂ ಕರಿಯನೆಱಗುವ ಬಲ್ಸಿಂಗದಂತಿರೆ ತನ್ನೊಂದಾಟೋಪದಿಂ ತಾಗಿ ತೂಗಿ ಪಿಡಿಯಿಂ ಗುದಿರ್ದನಾಗೆ ತೇರ್ ಜಜ್ಜರಿವೋಯ್ತು. ಆಗಳ್ ಸುರಥಂ ವಿರಥನಪ್ಪುದುಮಿರ್ವರುಂ ಕಣನೊಳ್ ಸಮಪಂಡಿಯಿಂ ಪೋರ್ದರ್. ಹಯಮಂ ತಾರೆಂಬ ರಾಘವನಂ ತೋಱೆಂಬ ಕೆಲಸಾರೆಂಬ ನೀನಾರೆಂಬ ಪೋರೆಂಬ ಬಾರೆಂಬ ಸಡಗರದ ನುಡಿಯೆ ನುಡಿ ಕೊಳುಗುಳದೊಳ್. ಸುರಥನಿಟ್ಟೆಗಱೆಯನಣುಗಂ ಮುಱಿದಂ; ಪೊಯ್ದ ಕೂರಸಿಯುಂ ಮುಱಿದನೆಚ್ಚಗ್ನಿಬಾಣಮುಂ ಮುಱಿದಂ; ಗರುಡಾಸ್ತ್ರಮುಂ ಮುಱಿದಂ; ವಜ್ರಾಸ್ತ್ರಮುಂ ಮುಱಿದಂ; ಬ್ರಹ್ಮಾಸ್ತ್ರಮುಂ ಮುಱಿದಂ; ವಾಯುಬಾಣಮುಮಂ ಮುಱಿದಂ; ರಾಮಬಾಣಮೊಂದೊಡೆ ಸರಿದಂ. ಏನೆಂಬ ಭಕ್ತಿಯೊ ದೇವರೊಳ್! ಅಂತು ಚಳಚಳಸಿ ಬೆಳಬೆಳಗಿ ತೇಂಕಿ ವರ್ಪ ಪ್ರಾಂಗಱಿದು ರಾಮಬಾಣಮುಂ ದೂರದೆ ಕಂಡಡಿಮುಡಿಯೊಂದಾಗೆ ಮಣಿದು ಕೈಯೊಳ್ ಕೊಂಡೆರ್ದೆಗೊತ್ತಿ ತಲೆಯೊಳಿಟ್ಟು ಪೊಗೞೊಳಾಂತು ಪೆರ್ಚ್ಚೆಗೆಯ್ದು ತಳ್ಕೈಸಿ ಸೊಗದಾಲಿನೀರಿಂ ಮಿಾಯಿಸಿ ಭಕ್ತಿಯೊಂದು ಪರವಸದಿಂ ಮೆಯ್ಮಱೆದಿಬ್ಬಗೊಂಡು ಸಂತಸದ ಸವಿಗಡಲೊಳೋಲಾಡಿ ನೋಡಿ ಪಾಡಿ ಮತ್ತಂ ಕಟ್ಟಿದಿರೊಳಿರ್ದ ಸುರಥನಂ ಕಂಡೆಲೆ ರಾಮ! ಇಂದಿಗೆ ನೀನೆ ಗೆಲ್ದೆಯ್. ನಿನ್ನನೆ ದೇವರೊಲ್ಬರಕ್ಕುಂ. ಎಲೆ ದೇವ! ಭಕ್ತವತ್ಸಲನಾಗೆಯೆ? ಕರುಣಾಕರನಾಗೆಯೆ? ಸಂ ಜಗದೊಡೆಯನಾಗೆಯೆ? ಎನ್ನೊಡೆಯನಾಗೆಯೆ? ಅಂ ಬಲ್ಲಿದನಾಗೆನೆ? ಮುನ್ನಿನ ನನ್ನಿಗನಾಗೆನೆ?

ಎನ್ನೊಳೇನಪರಾಧಮೊ ? ಉಪೇಕ್ಷೆಯೊ? ಪೇೞಿರೆ, ದೇವಾ ! ಈಬಣಗುರಾಯನೊಳಗೆ ಜಿದ್ದಂ ಕೈಗಟ್ಟುವೊಡಕ್ಕುಮೆ ? ನೀನೆ ಬಂದು ಜಡಿವೊಡಕ್ಕುಮೆ ! ಬಡಿವೊಡಕ್ಕುಮೆ ! ಸೆಱೆವಿಡಿವೊಡಕ್ಕುಮೆ ! ನಿನಗಮೀಪಂದೆ ಗೊಂದೆರಾಯನೊಳೇಂ ಪಕ್ಷಪಾತಮೊ ! ಸಾಜಂ. ನಿನ್ನತ್ತಣಿನರಿಗಮಂಜವೊಡಾದೆಂ. ಬೆನಕನಂ ಕಂಡು ಕಿತ್ತಿಲಿಗೆ ಕುಂಬಿಟ್ಟೆಂ. ನೀನಿಲ್ಲಮಂದೆನಗೇತಱ ಕೂರ್ಪು ? ಏತಱೊಂದಾರ್ಪು ? ಮೇಣೇತಱ ಪೊಡರ್ಪು? ಎನಗೇಕೆ ಬಂಟತನಮೇತರ್ಕೆ ಹಯದ ಬೆಂಬೞಿಯೊಂಗು ಪಲವಂದದೊಳ್ ಮಣಿಮಣಿದು ಪಾಡಿ ಬೇಡಿಕೊಳುತಿರ್ಪುದುಂ—ಬಾನ ಮೀನನಿಱಿಕೆಯ್ವೊಂದುಜ್ಜ್ವಳದ ಕುಂಡಲಂ, ಬಣ್ಣಿಸಿ ನುಣ್ಣಿಸಿದ ಕಮರ್ಗಣಿಗಲ್ಲ ಕೈಗನ್ನಡಿಯೆಂತಂತು ತಳತಳಪ ಗಂಡಮಂಡಲಂ, ಮುಗಿಲ್ ಪಗಿಲ್ತಾಗಸದ ಪಸುರ್ವಣ್ಣದ ಮೆಯ್ಸಿರಿ, ತುಂಬುವೆಱೆಯ ಕಳೆಗೆ ಕೆಳೆಯಪ್ಪ ಮೊಗಸಿರಿ, ಪಲಗೆನೊಸಲಂದಂ, ನಿಱುಗುರುಳ ಚೆಂದಂ, ಕಿಱುನಗೆಯ ಗಾಡಿ, ಚೆಲ್ವಿನಲರ್ಗಣ್ಗಳ ಕಡೆನೋಟದ ಮೋಡಿ, ಬಗೆಯೊಳಂಬುಗೊಳಲೊಡಂ; ಮಿಗಗೋಡುಂನಾಱ ಸೀರೆಯುಂ ತನ್ನ ಲಚ್ಚಣಮಾಗೆ ದೀಕ್ಷೆವೊತ್ತ ಕೋದಂಡದೀಕ್ಷಾಗುರುಮಂ ತನ್ನಿದಿರೊಳ್ ಕಂಡಂ. ಇಂತು ಮೈದೋಱಿದ ತನ್ನೊಡೆಯನಂ ಸುಖಾಶ್ರು ತಾಂ ತನಗೆ ಕಾಲ್ಪುರಮಾಗೆ ಸೋರ್ವಿನಂ ಎಮೆಯಿಕ್ಕದಾಲಿಸಿ ಮೇಣುಂ ಮೇಣುಂ ದೇವರಡಿಯೊಳ್ ಪೊರಳ್ದು ತನ್ನ ಬನ್ನಮಂ ನಿರವಿಸುದುಮತ್ತಲ್ ಮಱುವಕ್ಕದ ಸುರಥಂ ತಳ್ವದೆ ಹಯಮಂ ಕಪ್ಪಮಂ ಕಾಣ್ಕೆಯುಂ ಪೊನ್ನ ಭಂಡಾರಮಂ ತರಿಸಿ ರಾಘವನಡಿಗೊಪ್ಪಿಸಿ ತಾನುಂ ದಂಡಪ್ರಣಾಮಂಗೆಯ್ದು— ಜೀಯ ! ದೇವ ! ಎನ್ನೊಡೆಯ ! ಎನ್ನಿತಪರಾಧಮೆನ್ನಿತಪರಾಧಂ ! ಬಂದ ಹಯಮುಂ ನಿನ್ನದೆಂಬಱಿತುಂ ಬಿಟ್ಟೆನಿಲ್ಲಂ. ನಿನ್ನವರಂ ಪೊಯ್ದೆಂ ಬಯ್ದೆಂ. ಆದೊಡಂ ನಿನ್ನಂ ಕಾಣ್ಬೊಂದು ಬಯಕೆಯೊಳಲ್ಲ, ಗೆಲ್ಲದೊಳೆಲ್ಲನಿತಾದೊಡಮಲ್ತು. ಈಗಳ್ ಕಣ್ಣಾಱೆ ಕಂಡೆಂ, ತಣಿದೆಂ, ದಣಿದೆಂ. ಮೇಣೆನೆಗಾವುದಱೊಳಾಸೆ ! ಇದೆಕೊಳ್ ! ಹಯಮುಂ, ಕಾಣ್ಕೆ, ಕಪ್ಪಂ, ನಾಡು ಬೀಡೆಮ್ಮ ಸೊಮ್ಮು ನಿನ್ನ ಚರಣಕ್ಕರ್ಪಿಸುವೆಂ. ಎನ್ನೊಡಲುಮನೊಡಮೆಯುಮಂ ಮಡದಿಮಕ್ಕಳಂ ನಿನ್ನಡಿಗೊಪ್ಪಿಸಿದೆಂ. ನೀನೋವುದು ಕಾ

ಪ್ರಮು-ಎಂದು ಸೆಜಿಂಗನೊಡ್ಡಿ ಬೇಡಿಕೊಂಡಂ. ಆಗಳ್ ಶ್ರೀರಾಮಚಂದ್ರ ಮುನಿವರ್ಗರುಮನೆತ್ತಿ ತಳ್ಕೈಸಿ ತನಗಭಿಮಾನಮುನಿವರ್ಗರೊಳಂ ಸಮಂತು ಪ್ರಕಟಿಸಿ ಕ್ರೋಧಮಂ ತಿಳಿಪಿ ಕಳಿಪಿ ಮತ್ತಂ ಮುಚ್ಛ್ವೋದ ತಮ್ಮಂದಿರನೆಬ್ಬಿಸಿ ಸರ್ವರುಮಂ ಸಂತೈಸಿ ಮೆಯ್ಗರೆದಂ.

ಬಱಿಕ್ಕಮಾಶತ್ರುಘ್ನರರೆವಗಲುಪ್ಪಯಣಂಗೆಯ್ದು ಸುರಥನಿಂ ಸತ್ಕೃತರಾಗಿ ರಾಜಂಬೆರಸು ಸಡಗರದಿಂ ಮುಂತೆನುಂತೆ ನಿಚ್ಚವಯಣದಿಂ ನಡೆವರ್.

ಎಂಬಲ್ಲಿಗೆ

ಶ್ರೀರಾಮಾಶ್ವಮೇಧದೊಳ್

ಹನುಮತ್ಪರಾಜಯಂ ಪಂಚದಶಾಶ್ವಾಸಂ

ಸಂಪೂರ್ಣಂ.

---

## ಷೋಡಶಾಶ್ವಾಸಂ.

ಎಲೆಗೆ ರಾಮಾಭಿರಾಮೆ! ಸುಗ್ರೀವೆ! ನೀಲಕುಂತಳೆ! ಕುಮುದನಯನೆ! ಪದ್ಮಗಂಧಿ! ಕೇಸರಿಮಧ್ಯೆ! ಅಂಗದವಿರಾಜಿತೆ!

ಅಂತು ಕುಂಡಲಪುರದಿಂ ತಳರ್ದು ಪೆಱವರ ಕೆಲವರ ಕಣ್ಣೊಲಿಮೊಗರ ಗುಡ್ಡರೋರೊಂದು ನಾಡಂ ಕಟಿಕಟಿದು ಬರುವರುತುಮಿರ್ಪುದುಮಲ್ಲಿ ಮಲ್ಲೀವಲ್ಲೀಕುಂಜಪುಂಜರಂಜಿತಮಾದೊಂದು ಮುನಿಗಳಾಶ್ರಮದ ಪೂಜವಳಯದ ತೋಂಟದೊಳಾಟದ ಕಿಱುವರೆಯದ ಕುವರರಿರ್ವರದಟಿಂ ತಡೆದು ಪಿಡಿದು ಹಯಮಂ ಕಟ್ಟಿದರ್ ಗಡ!

ಮನೋ- (ಕೇಳ್ದೊಂದು ತವಕದಿನೆನಸುಂ ಸರಿಸಕ್ಕೈತಂದು ನಲ್ಮೆ ಮಿಗೆ ನಲ್ಲನಂ ಗಲ್ಲಮನಲುಗಿ ತಳ್ತಮರ್ದಪ್ಪಿ) ಎನ್ನ ಚೆನ್ನರಸ! ಮುನಿಗಳಾಶ್ರಮದ ತರಳರ್ಗೀರ್ಬಗೆಯೊಳ್ ನಾಡರಾಯರಂ ಜನ್ನಗುದುರೆಯಂ ಕಟ್ಟಿ ಕಾದುವೊಂದು ಬಲ್ಪುಂ ಕೂರ್ಪುಂ ನೇರ್ಪಟ್ಟುದೆಂತು? ಆ ರಪ್ಪರೀಕುಮಾರರೆಂಗೆಯ್ದುದೇನಾದರೆಂತು ಕಾದಿದರ್ ಪೇಳ? ಅಬ್ಬಾ! ಏಂ ಗಡುಸುಗಾಱರೊ!

ಮುದ್ದ- ಉಃ! ಪೋಕೆ. ಬಾಳ್ತೆಗೆಟ್ಟ ಮಕ್ಕಳಾರಾದೊಡಮೇಂ? ಸಾಲ್ಗುಮೀಮಾಳ್ಕೆ; ಕತೆಮೇಳ್ದು ಬೇಸತ್ತೆಂ; ಎಂತುಂ ಯಜ್ಞಮರಿಸಮಾಪ್ತಿಗೆಯ್ವೆಂ.

ಮನೋ- ಮುದ್ದುಮೊಗದ ಚೆನ್ನಿಗರಾಯ! ಆಗದಾಗದು, ತನ್ನಾಣೆ! ಬಾಲಕರ್ ರಣದೊಳ್ ಸೋಲ್ತರೆ? ಗೆಲ್ದರೆ? ಪೇೞಯ್. ನಿನಗಮೇನಿಂತು ಬೇಸಱೊ ಕಾಣೆಂ.

ಮುದ್ದ- ನೀನುಮುಗೊಱೆಯನೀಪ್ರದನೇನುಮಂ ಕಾಣೆನುಂತೆ ಪೇೞೆಂಬೊಡೆ ಪೇೞ್ವರೆ?

ಮನೋ- (ಕಿಱುನಗೆಯಿಂ) ಎಱೆಯ! ನೀನುಮೆರವರೆಂತಂತು ಬೇಡುವಯ್. ಇನ್ನು! ಕಾಡಿ ಬೇಡಿಕೊಂಡೊಡೆಂತುಮುಗೊಱೆಯ? ಮನಮೊಲ್ದೀವುದಲ್ತೆ ಮುದ್ದು?

ಮುದ್ದ- ಮುತ್ತಂ ನಟ್ಟಿ ಪೆಕ್ತ್ವನೀನೆಂ. ಆಮು ನೋೞ್ಪೆಂ. ಎಳಗುವರದೊಂದು ಕತೆ ಮುಂತಿರ್ಕೆ. ನೀಂ ಮುನಿವೆರಸು ಪೋದ ಸೀತೆಯೊಂದಿರವನಱಿತುಂಟೆ?

ಮನೋ- (ಅಱುಪ್ರಗೊಂಡು) ಎನಗೇನೊಂದು ಮಱವೆಯೊ? ಎನ್ನಬ್ಬೆ ಸೀತೆಯುಸಂದಾಗಳ್ ಮಱೆತೆಂ. ಅಪ್ಪುದಪ್ಪುದು. ಮುನಿಗಳಾಶ್ರಮದೊಳೆಂತಿರ್ದಳೇಂಗೆಯ್ದಳ್? ತಮ್ಮರಸರ ಕಡೆಗೆ ಪೋಂಪುದ್ದಳೇ? ಎನಗಿವನೆ ಪೇೞ್. ಆಮಕ್ಕಳಕ್ಕೆ ಪೋಕೆ.

ಮುದ್ದ- ಅಂತಱಸುಂ ನನ್ನಿಯುಂ ಐತ್ತುಂ ಬೆಳ್ಯುಂ ಪುರುಳುಂ ತಿರುಳುಮೊಡವೆರಸು ಪೋಪಂತೆ ಪೋಗಿ ಬಱಿಕ್ಕೆ ಮುನಿಪನಾ

ಶ್ರಮದ ನಟ್ಟನಡುವೆ- ಎಳವಳ್ಳಿಯ ಮೊಗವಾಡಂ, ಬೆಳ್ಳಲೆಯ ಮಂಡಪಂ, ಪಸುರೆಲೆಯ ನಟ್ಟವಸೆ, ಸೆಳೆಗೊಂಬಿನ ಕೇರ್, ಪಣ್ಣೆಲೆಯ ಪೊದಕೆ; ಚೆಂದಳಿರ ಪಚ್ಚೆ, ಪೊಸಸುೞಿಯ ಮೂಡಾವಿ, ಅಲರ್ಜೊಂಪದ ಮೇಲ್ಕಟ್ಟು ಚೆಲ್ವಾಗೆ ಕಣ್ಗಂ ಮನಕಮಿಂಬಾದ ಪರ್ಣಕುಟಿಯನೇರ್ಪಡಿಸಿ ಬಗ್ಗನೊಂದು ಸಿರಿಯುಂ ಪದಿಟಿಗೆಯ್ವಂತು ದೇವಿಯನಿರಿಸಿ ನೆರೆಮನೆಯ ಮುನಿಸತಿಯರಂ ನೇಹದ ನಲ್ಗೆಳದಿಯರಂ ಮಾಡಿ ಪಾಡಱಿದು ಬೇಡಾಗದಂತು ತಾನಾರೈಯುತಿರ್ದಂ.

ಸೀತೆ ಸೀಕ್ಕಲುಂ ಪೊಟ್ಟಿನಗೆ ಮುನ್ನಮೆ ಶ್ರೀರಾಮನೊಂದು ನೆನಪಿನೊಳಿಬ್ಬತ್ತು ಮಾಱಿವರ್ಪ ತನ್ನ ಗುರುಗಳಭಿವಂದಿಸಿಯುಂ, ಮಿಂದು ಬಂದು ಮಡಿಯುಟ್ಟು ಮುನಿಗಯ್ಯಂಗೆಂತಂತು ಬಲವಂದೆಱಗಿ ಪರಕೆಗೊಂಡು ಮುನಿಪತ್ನಿಯರಂ ಕಾಲ್ವಿಡಿದು ತಿಱಿತಂದ ಪೂಗಳನರ್ಪಿಸಿ ಕಿಱಿದುಂ ಬೇಗಮಿರ್ದು ಸಲ್ಲಪಿಸಿ ನಿಲ್ಲದವರಿತ್ತ ಕಂದಮೂಲಂಗಳಂ ಕೈಕೊಂಡು ತನ್ನ ಕಿಱುವೆರಲ ಮುದ್ರೆಯುಂಗುರದ ಶ್ರೀರಾಮಮೂರ್ತಿಗೆ ಸಮರ್ಪಿಸಿ ಬೞಿಕ್ಕೆ ತಾನಿನಿಸಿನಿಸಂ ಕೋಡಿವರಿವ ಕಣ್ಣೀರ ಜೆನ್ನೀರೊಳುಂಡು ಉಂಡು ಮುನಿಗಳೋದುವ ರಾಮಚಾರಿತ್ರಮಂ ಕಿವಿಯಾರೆ ಕೇಳ್ದು ತಾನುಂ ಪಂಬಲಿಸಿ ನಡೆವಗಲ್ಪೆರೆಗಮಿರ್ದು ಸಂಜೆಯಪ್ಪದುಂ ಸಂಧ್ಯಾದೇವಿಯುಂ ಭಾವಿಸಿ ಮತ್ತಂ ತನ್ನ ಪ್ರಾಣೇಶ್ವರನ ನಲ್ಮೆಯ ಬಣ್ಣನೆಯನೆ ನೆನೆನೆನೆದೊಂದು ಹರವಸದಿಂ ಮೈಮಱೆವಳೊಱಗುವಳ್ ಕನವರಿಸುವಳ್. ನುಡಿಯೊಳ್ ನಡೆಯೊಳೆಡವಿನೊಳ್ ಜಡದೊಳ್ ಜಂಜಡದೊಳ್ ಅಡಿಗಡಿಗೆ ಶ್ರೀರಾಮನೊಂದೆ ನೆನಪು ಗಡ! ಏಂ ಸಾಧ್ವಿಯೊ! ತನ್ನೆಱೆಯನೆಯೆ ಪಾಡು; ತನ್ನಾಣ್ಮನೆಯೆ ಭಕ್ತಿ; ತನ್ನಿನಿಯನೆಯೆ ನೆನಪು; ತನ್ನರಸನೆಯೆ ಸರಸಮಾಸರಸಿಜಾಕ್ಷಿಗಜಸ್ರಂ. ಕೋಡಳ್ ಬಾಡಳ್ ಕೊಂಕಳ್ ಸಂಕಿಸಳೋವಸ ಕೋಪದ ಶಾಸನಕ್ಕೆ ಜನಕತನೂಜೆ. ತನ್ನೆಡರನೊರ್ಮೆ ನೆನೆವಳೊರ್ಮೆ ಮಱುಗುವಳೊರ್ಮೆ ಅಳವಱಿವಳೊರ್ಮೆ ತಿಳಿವಳೊರ್ಮೆ .ತಾಂ ತನಗೆ ಸ್ಮೃತಿಡುವಳೊರ್ಮೆ ಜೇಡಂ ಪೊಕ್ಕ ನಾಡವೆಣ್ಣಂತೆಂತು ಬೆರ್ಚಿ ಬೆದಱುವಳೊರ್ಮೆ ಮಱಸಳೊರ್ಮೆ ಗುಱುಗುಮ್ಮ

ನಿಪರ್ಗಳಿಪದಿಬಟೆ ನಿಚ್ಚಂ. ಇಂತು ತನ್ನೊಂದಿರವಿನ ನೋವನೆಂತುಂ ತನ್ನ ಮನದನ್ನನ ನೆನಪಿನೇಱಗುಡಳ್. ಮುನಿಯಾರಯ್ಕೆ ಮುನಿಸತಿಯರ ನೇಹಂ ತನ್ನೊಂದು ಪಾತಿವ್ರತ್ಯಂ ನಿಸದಂ ದೇವಿಗೆ ಮೂವಳಿಸಿನ ಕಾಪಾಯ್ತು.

ಈಮಾತ್ಕೆಯಿನಿಪರ್ ಭೂಜಾತೆಗೆ ಸೀತೆಗೆ ತಿಂಗಳ್ ತುಂಬಿವರೆವರೆ ಮುನಿ ಕಂಡು ಸೀಮಂತಕರ್ಮಮಂ ಯಥಾವಿಧಿ ಮಾಡಿಸಿದಿಂಬಳಿಯಂ ನಲ್ಗೆಳದಿಯರ್ ಮಲ್ಲಿಕಾಸ್ಮಿತೆಗೆ ಮಲ್ಲಿಗೆಯ ಜೊಲ್ಲೆಯುಮಂ, ಕುಂದಕುಟ್ಮಲರದನೆಗೆ ಕುಂದದ ಬಾಸಿಗಮಂ, ಮಂದಗಮನೆಗೆ ಮಂದಾರದ ಬೈತಲೆಬೊಟ್ಟಂ, ಕಮಲಮುಖಿಗೆ ವಿಮಲಕಮಲದಂದುಗೆಯುಂ, ಚಂಪಕಸುನಾಸೆಗೆ ಸಂಪಗೆಯೊಡ್ಯಾಣಮಂ, ಶಿರೀಷಕೋಮಲಾಂಗಿಗೆ ಸಿರಸದ ಕಿಱುಮುಗುಳೆಕ್ಕಸರಮುಂ, ಜಾತಿನಾಯಕಿಗೆ ಜಾತಿಯ ಪಿಂಡುಗಂಕಣಮಂ, ಸೀಮಂತಿನಿಗೆ ಸೇವಂತಿಗೆಯ ತೋಳ ಬಂದಿಯುಂ, ಸಮೆದು ಸಿಂಗರಿಸಲೊಡಂ; ಪೂವಿನ ಪೊಸಪಸದನಂಗೊಂಡು ಅಂಗೆಂಬಡೆದು ಕಟ್ಟಿದಿರ್ಗೆ ಜಳಕ್ಕನೆ ಬಂದು ನಿಂದ ವನದೇವಿಯೊಂದು ಪಾಂಗಿನಿಂ ದೇವಿ ಕಣ್ಗೆಡ್ಡಮಾದಳ್.

ಇಂತೊಪ್ಪುವ ಸೀತೆ ಕಿಱಿದಾನುಂ ದಿನಕೆ ಮೇಣೊಂದು ಮುಹೂರ್ತದೊಳಮಳರನಮಳರಂ ಪೆಱನೇಸರ್ಕಳಂ ಪೂರ್ವದಿಕ್ಸುಂದರಿಯೆಂತೆಂತು ಪೆತ್ತು ಪತ್ತುಂದಿವಸಂಗಳ್ಗೆ ಮುನಿಪಂ ಕುಶನೆಂದುಂ ಲವನೆಂದುಂ ಕೊಂಡಾಟದ ಪೆಸರನಿಟ್ಟು ಕರೆವುದುಮಂದಿಂದಿಂಗಮವರ್ಗೆ ಕುಶಲವರೆಂಬ ಸಂದ ಪೆಸರಾಯ್ತೆಳೆಗೆ. ಬರ್ಮಡಿಯ ಚೆಲ್ವಿರ್ಮಯ್ವೆತ್ತಂತುಮಿರ್ಮಯ್ಯ ಸೋಮಕಾಮರ್ ಬರ್ಮೊದಲೊಳೊಗೆವಂತುಮೊಗೆದು ಗಾಡಿಗಾಡುಂಬೊಲಂ, ಸತ್ತಿನ ಗೊತ್ತು, ಹರಿಸದ ಸರಿಸಮೆನೆ ತೋಱಿ ದಿನದಿನಕ್ಕೇಱುಂಬೆಱೆಯಂತೆ ಕಳವೆರ್ಚುತೆ ಬಳೆಯುತಿರ್ಪಾ ನಿಸರ್ಗಸುಭಗರ್ ಪೆತ್ತಬ್ಬೆಗಂ ಪುತ್ತಿನ ಪುತ್ರಿಂಗಂ ಮುತ್ತ ಮುನಿಗಳ್ಗಮೆತ್ತಿ ನಲಿವ ಬಾಲೆಯರ್ಗಂ ಮತ್ತಮೆಲ್ಲರ್ಗಂ ಮುದ್ದುಮುದ್ದಾದರ್. ಪಟ್ಟಿಡಿ ಬಟ್ಟಮೊಗಂ ಪುಟ್ಟಗೈ ಸಿಟ್ಟಾಲಿ ನಟ್ಟನಡುವಣ ನಾಭಿ ಕಟ್ಟಾಣಿಯ ಮೆಯ್ಸಿರಿ

ನೋಲ್ಪರಂ ನಿವ್ಯಾಜಂ ಬೆಮೆಗೊಳಿಸೆ ಮೊಳೆವಲ್ಲ ಚೆಲ್ವು ಕಿಱುನಗೆಯುಂದಂ ತೊದಲ್ನುಡಿಯ ಸೊಗಸು ತಳರ್ನಡೆಯ ಗಾಡಿ ಮನಂಬುಗೆ ಕಣ್ಗಿಂಬಾದರಾಲಂಬಾಲಕರ್ ಬಾಲಕರ್.

ಮತ್ತಂ ಚಲದಿಂ ಮಱುಗುವ, ಮಱುಗುತಬ್ಬೆಯನಿಕ್ಕೆಲದೊಳಂ ಸೆಱಂಗಂ ಸೆಳೆವ, ಸೆಳೆದೋಡುವ, ಸಮಂತೋಡಿ ಕಟ್ಟಿದಿರ ಕಗ್ಗೋರ್ಡ ಗನಂ ಗಡ್ಡದೊಳೀಲ್ದು ಮಱಿಸಿಂಗನ ಬಾಲಕ್ಕೆ ಗಂಟಿಕ್ಕುವ, ಗಂಟಿಕ್ಕಿ ನಗುವ, ನಕ್ಕು ಮೊಕ್ಕಳಂ ನಲಿವ, ನಲಿದು ಬಂದು ಮುನಿಯನಪ್ಪುವ, ಪಿಡಿದಪ್ಪಿ ತೊಡೆಯನೇಱುವ, ತೊಡೆಯನುಱಿದು ಪೆಗಲನಡರ್ವ, ಪೆಗಲನಡರ್ದು ಕಿವಿಯನೂದುವ, ಕಿವಿಯನೂದಿ ತಲೆಯನಲುಗುವ, ತಲೆಯನಲುಗಿ ಮುಡಿಜಡೆಯುಂ ಬಿಡುವ, ಬಿಟ್ಟ ಕೆಂಜಡೆಯ ತುದಿಗೆ ಬೆಲ್ಲವತ್ತಮಂ ಪೊಲ್ದು, ಪೊಲ್ದಬ್ಬೆಗೆ ತೋಱುವ, ಅಬ್ಬೆಗೆ ತೋಱಿ ಕೈಪಱೆಗುಟ್ಟುವ, ಕೈಪಱೆಗುಟ್ಟಿ ಬೆನ್ನೊಳ್ ಮೈಗರೆವ, ಮೈಗರೆದು ಗುಂಡಿಗೆಯುಂ ಕಳ್ದು, ಕಳ್ದು ಬೈತಿಡುವ, ಬೈತಿಟ್ಟೊರ್ವರ್ಗಂ ಕಳ್ದನೆಂದೊರ್ವನಂ ಪೇಳ್ದು, ಪೇಳ್ದೊಡನೆ ತಂದೀವ, ತಂದಿತ್ತಡಿಗೆಱಗುವ, ಅಡಿಗೆಱಗಿ ಪರಕೆಗೊಂಬ, ಪರಕೆಗೊಂಡು ತಾಯೆಡೆಗೆ ಬರ್ಪ, ಬಂದು ತಮ್ಮ ಲೀಲೆಯುಂ ಕೇಳಿಪ, ಚಿಣ್ಣರಾಟಂ ಮಾತೆ ಸೀತೆಯ ತೆರೆಮಸಕದ ಸಂತಸಗಡಲನಿರ್ಮಡಿಯುಬ್ಬಿಸಿದತ್ತು.

ಅನಿತಱಿಂ ಬಱಿಕ್ಕೆ ಮುನಿಪಂ ಚೌಲೋಪನಯನಸಂಸ್ಕೃತರಾದ ಬಾಲಕರ್ಗೆ ಪಲವೋದುಗಳನೋದಿಸಿ, ಬಿಜ್ಜೆಯೊಳ್ ಬಿನ್ನಣಿಗರನಾಗಿಸಿ, ಪಲಮಾತುಗಳನೆಲ್ಲಮಂ ಸಾಂಗಮಱಿಪಿ, ಶಾಸ್ತ್ರಂಗಳನೊರೆದು, ಪುರಾಣಂಗಳೊಳ್ ಪರಿಣತರಂ ಮಾಡಿ, ಗಾಣದೊಳ್ ಜಾಣರಂಗೆಯ್ದು, ಬಿಲ್ಗಾಱಿಕೆಯೊಳ್ ಬಲ್ಗೈಗಲಿಗಳನೆಸಗಿ, ಪಾಟಮಾಟಮಪ್ಪಂತು ಕಲಿಸಲೊಡಂ ಮೋಡಮಱಿಯೆ ತಿಳಿದ ಕಳೆಗಳಂ ಬೆಳಗುವ ಚಂದ್ರಮನಂತೆ ಮೋಡಮಱಿಯೆ ತಿಳಿದ ಕಳೆಗಳಂ ಬೆಳಗಿದರ್ ಯಮಳರ್. ಪುಸಿಯದ, ಪೇಸಱದ, ಗಾಸಿಗೆಯ್ಯದ, ಬಾಸೆದಪ್ಪದ, ಬೋಸರಿಸದ, ಕಟ್ಟೆಱಕದ ಕೂರ್ಮೆ ಪೆರ್ಮೆವೆತ್ತುದು. ತಮ್ಮೊಳೆಣೆಯರ್ಗೆಂದುಂ ಮುನಿಯೊ

ಳೊಂದು ಗುರುಭಕ್ತಿ ಮಾತೆಯೊಳ್ ದೈವಭಕ್ತಿ ಕಣ್ಬೊಲಮಾಗೆ, ತಾಪಸೋರೊಳೊಲ್ಮೆಯಿಂ, ವಟುಗಳೊಳ್ ನಲ್ಮೆಯಿಂ, ಸಂತಂ ಬಳೆಯುತಿರ್ದರಾಜಿತಮಾರರ್ ಕುಮಾರರ್.

ಓ ಎನ್ನ ಪ್ರಾಣೇಶ್ವರೀ! ಇಂತು ದಿನದಿನಕ್ಕೇಳ್ಗೆವೆತ್ತು ಬಳೆಯುತಿರ್ಪ ಬಾಲರ ಬಳವಿಯನೆ ಕಂಡು ತನ್ನ ಮುನ್ನಿನ ಬನ್ನಮಂ ಪಿರಿದುಂ ಮಱೆದು ನಲಿವ ಜಾನಕಿಯಿರವಿಂಗೆ ಕೃತಕೃತ್ಯನಾದೆನೆಂದು ಬಗೆಮಿಗೆ ಪೊಂಗಿ ಸಂತಮಿಪ ವಾಲ್ಮೀಕಿ ಕಿಱಿದಾನುಂ ದಿನಕ್ಕೆ ತನ್ನೊಂದವಸರಕೆ ಕುಶಲವರನಾಶ್ರಮಕೆ ಕಾಪಿಟ್ಟು ವರುಣಲೋಕಕ್ಕೆ ಪೋಪುದುಮಾಗಳಿತ್ತಾನುಂ ಸ್ವೇಚ್ಛೆಯಿಂ ನಡೆವ ರಾಘವನ ಜನ್ನಗುದುರೆ ಈಯಾಶ್ರಮಮಂ ಪುಗುತರಲೊಡಂ—

ಮನೋ— ಈಗಳಱಿತೆಂ ಪಸುವಂ ಕಟ್ಟಿದ ಬಾಲರಾರೆಂಬುದಂ. ಕುಶಲವರಾಗರೇ? ನೀನುಮಾವ ನಾಡ ಗತಕಿಯೊ? ಆಗಳೆ ಸೀತೆಯ ಮಕ್ಕಳ್ ಕಟ್ಟಿ ಕಾದಿದರೆಂದೊಡಾಗದೆ! ತಾಂ ಪೇೞಂ ಗಡ! ಮುಚ್ಚುಗಡ! ಆಯ್ತಾಯ್ತು! ಮುಂತಣ ಕತೆಯಂ ಪೇೞ್ ನೋೞ್ಪೆಂ.

ಮುಪ್ಪ— ಬಳಪ್ಪಗೊಟ್ಟ ಕಾವಲನಂ ಮೂದಲಿಪ ಹೂಜೆಗಾರ್ತಿಯೊಂದಾಯುತಿಯಂ ಮೆಱೆವ ನಿನಗೆ ಸಳ್ಗಳದಿಗಲ್ಲದೆ ಪೆಱಳಾವಳ್ಗಂ ಕತೆಯಂ ಬಿತ್ತರಂ ಬಿತ್ತರಿಪಂ, ನುಡಿಗಬ್ಬದ ಗಬ್ಬದುಬ್ಬರದಿಂ ನನೆಕೊನೆವೊಗಿ ಕೊನೆವೆರ್ಚಿನ ಪುರ್ಚಿನ ಪೊಳ್ಳುಬಳ್ಳುಮುದ್ದಣಂ. ಆಯ್ತು ಕೇಳ್. ಇರ್ವರುಮಲ್ತೊರ್ವನೆ ಕಿಱಿಯಂ ಲವಂ ತಾನೊರ್ಮೆ ಸಂಗಡಿಗರ್ವೆರಸು ಆಶ್ರಮಕೆನಸುಂ ದೂರದೆ ತೋಂಟದೊಳ್ ಬಿನದಿಸುತಿರ್ಪ ವೇಳೆಗೆ ಬಿಂಕದಿನ ಲ್ಲಿಗಲ್ಲಿಗೆ ಸುೞಿದುಂ ತುೞಿದುಂ ಮೂಸಿಯುಂ ಬಾಸಿಯುಂ ಮೇದುಂ ಪಾಯ್ದುಂ ವನಮಂ ಮನಮಂ ತುಟಾಱೆ ಪುಡಿಗುಟ್ಟಿ ಕಿಚಿಕಿಲ್ವ ಹಯಮಂ ದಿಟ್ಟಿಸಿ ಆರ್ತಿದೊಂದು ಮುಕುಮುಂಬಿಗುದುರೆ? ಕಂಡಿರೆ! ಮುತ್ತಯ್ಯನಿಲ್ಲವಂದೆ ಬಂದು ಪೊಕ್ಕು ಪೂಬದೋಂಟಮಂ ತೊತ್ತುೞದುೞಿದು ಪಾೞ್ಗಡಿಕುಂ. ಪೋಪಂ! ಪಿಡಿದು ಕಟ್ಟಿ ಬಂದೊಡೊಡನೆ ಮುತ್ತಮುನಿಗೊಪ್ಪಿಸುವಮೆಂದು ತಾಂ ಮುಂತೆ ತಳರಲೊಡಂ ಮಿಕ್ಕಿನ ಬಟುಗಳ್

ಪಿಡಿ ಪಿಡಿ ಎಂದಾರ್ದು ಸೋವುದುಂ; ಲವಂ ತಾನೆ ಮುಂಬರಿದುತ್ತರಿಗೆಯಿಂ ಕೊರಲಂ ಬಿಗಿದು ಕೆಲನ ಕಿಱುಗೋಣೆಯ ಕಿಱ್ಕಂಬಿನೊಳ್ ಕಟ್ಟಿ ನೊಸಲೊಳೆಸೆವ ಬಿರುದಿನೋಲೆಯುಂ ಕಂಡು ಕೊಂಡು ಮಾಣಿಗಳಿದಿರೊಳಿಂತು ವಾಚಿಸಿದಂ:—

ನೆಗೞ್ತೆವಡೆದ ನೇಸಱ ಬೞಿಯೊಳೊಗೆದು ಪೊೞ್ತುಪೊೞ್ತಂಗೇೞ್ಗೆವೆತ್ತು ಪಲವುಂ ಪಗಲರಸುಗೆಯ್ದು ಪಂತಿದೇರವೆಸರ ರಾಯುಂ ಮುನ್ನೊರ್ವನುಂಟು. ಆತಂಗೆ ಪಿರಿಯಳರಸಿ ಕೌಸಲ್ಯೆಯೊಳೞಿವುಂ ಬೀರಮುಂ ನನ್ನಿಯುಂ ಬಲ್ಪುಮೊಂದಾಗಿ ಮೆಯ್ವೆತ್ತಂತೆ ಪುಟ್ಟಿ ಜಸಂಬೆತ್ತ ಶ್ರೀರಾಘವಂ ಜನ್ನಮಂ ಬೇಳ್ಗಂ. ಅಂತಿರಾತಂ ಗೆಲ್ಲಕ್ಕೆ ವಾಜಿಯುಂ ಸೋದರನಾರಯ್ಕೆಯೊಳ್ ತಿರೆಗೆ ಕಳುಪಿದಂ. ಆರಾನುಮೆತ್ತಾನುಂ ತೋಳ್ವಲದೊಂದು ಪೆರ್ಮೆಯಿಂ ಜವನ ಬಾಯ್ಗೆ ಪೋಗಲ್ಬಗೆವ ಕಲಿಯಿರೆ ಕಟ್ಟಿ ಕಾದುವುದೆಮ್ಮವರೊಳ್. ಮೋಣನುಂಜಿ ಪಿಂಜರಿವಂ ಕಾಣ್ಕೆಗೊಟ್ಟೆಮ್ಮೊಳ್ ಮಱೆವಾೞ್ವುದು. 

ಬೞಿಕ್ಕಮಿಂತು ವಾಚಿಸಿಕೊಂಡು— ಉಂ! ಇಂತುಟಲೆ ಬೀರರೊಂದು ಪೆರ್ಮೆವಡೆದೇೞ್ಗೆ! ತಾಂ ಕೌಸಲ್ಯೆಯೊಳ್ ಪುರುಳುಂ ಲಕ್ಕಣಮುಂ ಬವರ್ಮೆಯ್ವೆತ್ತುದೆಂಬಂತಿರೊಗೆದನಕ್ಕುಂ! ಇಂತಿರಂತದಂ ಬಿಚ್ಚಳಿಸಿ ತೋಱಿಪೊಡೆಮ್ಮಣ್ಣನೆ ಸಾಲ್ಗುಂ. ನೋೞ್ಪಂ ಮಾರಿಯ ಬಾಯ್ಗಾರೆಂಬುದಂ; ಅಲ್ಲದಂದು ಪಂದೆಗಳಾಗೆವೆ? ಹಯಮಂ ಮರಲ್ಚಿಪೊಡಿಂದು ಸೋದರಂ ಸಾದರಂ ಬರ್ಕೆ. ಅನಿತೊಂದುಬೇಗದಿನೆಮ್ಮಣ್ಣಂಗಿಂತಿದನಱಿಪಿ ಕೂಡಿಸರ್ಪೆಂ—ಎಂಬನಿತಱೊಳ್ ಮಿಕ್ಕುೞಿದ ಬಾಲರೆನಸುಂ ಬೆರ್ಚೆ—ನಿನಗೇನಲೆ ಸೊಕ್ಕು! ಬಲ್ಪುಳ್ಳ ನಾಡ ರಾಯರ ಜನ್ನಗುದುರೆಯುಂ ಕಟ್ಟಿ ಛಲದಿಂ ಕಾದುವೆನೆಂಬ ನೀಂ ಮರುಳಾಗ! ಸೆಣಸಾಟವಾಟಮೆ! ಪಾಟಮೆ! ಬಾಲಂ ನೀನೆತ್ತಂ; ಅಳವಿಗೞಿದ ಕೂರ್ಪಿನ ಕಾಲಾಳ್ಗಳೆತ್ತಂ! ಪೋ ನೂಕ! ಅರಿಗಳ್ಗೞಿವಾಗದ ಮುನ್ನಮೆ ಕಟ್ಟಿದ ಹಯಮಂ ಪೋವಿಟ್ಟು ಮನೆಗೆ ಪೋಪಂ. ಅಜ್ಜ ನಾಣೆ! ದುಡುಕಿ ಪೋಗದಿರೆಂದು ಗದ್ದಿಪ್ಪುಮಮನಪಗರ್ಗಳಂ ಗದಱಿ— ಚೀ! ಚೀ! ಕಣ್ಗಟ್ಟಿನ ತಪದ ಬವ

ಸಿನ ಮುದುಗೂಗೆಯ ಪಿಳ್ಳೆಗಳ್ ಪೋಪೋಗಿರೆ! ಆಂ ತರುವಲಿ ಗಡ! ಪಗೆ ಕಡುಗಲಿ ಗಡ! ಆಂ ಕಿಱಿಯನಾದೊಡೇಂ; ಅಣ್ಣಂ ಪಿರಿಯಂ ಸಾಲನೆ! ರಟರಟವೊದಱುವ ಕಾರ ನೀರ ಪೆರ್ಗಪ್ಪೆಗಳಂತಿರೇಗಳು ಮಾಗದ ಪೋಗದ ಪಲಿನುಡಿಗಳನೋದುತುಮೊದರುತುಮಿರ್ಪ ನಿಮಗೆ ರಣದ ಗೊಡವೆಯೇಕೆ? ನಿಲ್ಲದೆ ಗುಡಿಗೆಯ್ದಿ ಕೊಂಡದ ಬೂದಿಯ ನೂದಿಮಲ್ಲದೊಡೆ ಸವುದೆಯನೊಟ್ಟಿಮಂತುಮಲ್ಲದೊಡೆ ಪರಿದ ಸಮ್ಮ್ರಮಂ ಕೆಮ್ಮನೆ ಪೊಲ್ಲಿಮೆಂದು ಮಾಂಕರಿಸಬೊಡ ಮತ್ತಲ್ ಬೆಂಬೞಿಯ ಕಾಪಿ ನಾಳ್ಗೞ ಹಸುವನಱಿಸುತುಂ ಬರೆಸರೆ ಕಟ್ಟಿದಿರೊಳ್ ಬಾಲಕರುಮಂ ಮರನ ಮೊದಲೊಳ್ ಹಯಮುಮಂ ಕಂಡು- ಕಟ್ಟಿದರಾರೆಂದು ಜರ್ಬಿಂ ಮಸಗಿ ನುಡಿವುದುಂ; ಮಿಕ್ಕ ಪಟುಗಳ್ ನಡುನಡುಗಿ-ಆನುಲ್ತಾ ಮಲ್ತು. ಈಪೊಸಮಾಣಿಯಾಗಲ್ವೇೞ್ಕುಂ. ಬೇಡವೇಡೆಂದೊಡಂ ಚಲದಿಂ ಪಿಡಿದು ಕಟ್ಟಿ ಮಿಣ್ಣನಿರ್ಪನೆಂದು ಲವನಂ ತೋಱಿ ತಾಂ ಮೆಲ್ಲಮೆಲ್ಲನೆ ಪಿಂಜರಿದು ಮರನ ಮಱೆಯೊಳಾದರ್. ಅಂತಪ್ಪುದುಮಾಳ್ಗಳಾಲವನಂ ಮುತ್ತಿ ಪಳ್ಳಿಯ ತುಱುವಳನಂತಿರೆ ಹಸುವನೇನೆಂದು ಕಟ್ಟಿದಯ್? ಹಯಮುಮನೆಮ್ಮ್ರಮಂ ನೋಡದೆ ನಾಡ ರಾಯರೆಂದು ಸಂಕಿಸದೆ ಕದನಕ್ಕಂಜದೆ ಜೀವದಾಸಮಿಲ್ಲದೆ ಕಟ್ಟಿ ನಿಂದ ನಿನಗೆ ಕಣ್ಮ್ರಱಿರವೇಡಾ! ನೆಲನಂ ಕಿನ್ನೆಲನಂ ಬಾಸಂ ತಾನಂತುಟೊಂದು ಮ್ಮೆಮೆಯಿಂ ಕಾವ ದೇವಂ ಬೇಳ್ವ ಜನ್ನದ ಮಾನ್ಯದ ಹೂನ್ಯದ ಕುದುರೆ ಕಣಾ! ಅಬ್ಬಾ! ಏಂ ಸೋಕೆರ್? ಸೆಳೆಯ ಸವಿ ಬೇಱೆ; ಪೊನ್ನ ಪಿಳುಕಿನ ಬಲ್ಗಸೆಯ ಸವಿ ಬೇಱೆ. ಪೋ! ಪೋ! ಕಾಡ ಕೋಡಗವಸುಳೆ—ಎಂದು ಸೊಪ್ಪಿಂ ಱೆಪ್ಪೆಪ್ರೇದರ್. ಅನಿತಱೊಳ್ ಮಾರ್ಕೊಂಡಾಕುೞಿವಿಂಡಂ ಪುಗುವ ಮಱಿಸಿಂಗನೊಂದಾಟೋಪದಿಂ ಕಾವಲರ ಪಡೆಯಂ ನುಗ್ಗಿ ಸರಲ ಸೋನೆಯಂ ಕಱೆದು ಘಾತಿಸಿ ಬೊಬ್ಬಿಱಿದು-ಕಂಡಿರೆ ಕಾಡ ಕೋಡಗವಸುಳೆಯ ಕೈಚಳಕವಂ! ಎನಗೆ ಸೆಣಸಾಟಂ ಸಲ್ವುದೇ? ಸಾಲ್ವುದೆ ನಿಮಗಿಂದಿನ ಗೆಲ್ಲಮೆಂದು ಮತ್ತಂ ಮತ್ತಂ ಕೋಲ್ಗಳನೆಚ್ಚು ಎನಿಸುದೂರಕಱೆಯಟ್ಟಿದಂ. ಬೞಿಕ್ಕಮವರಾತಂಗಮಾಱನೊಂದು ತದೆಗಂ ಬೆಂಗೊಟ್ಟಂತುಮಿಂತುಮೋಡಿ ತಮ್ಮೊಡೆಯಂಗಿಂತಿ

ದಂ ಪೇೞ್ವುದುಮಾತಂ ಮಾತಂ ಮಾಣಿಸಿ ಸುಮತಿಯೊಳಾರ್ತ್ರೀವನಂ ಅಂತಪ್ಪ ಬಾಲನೇನಿರ್ಕುಂ? ನೀಂ ಕೇಳ್ದುಂಟೆ, ಪೇೞೆನಲೊಡಂ-ಇಂತೀವನಂ ಮುನಿಗಳಾಶ್ರಮಮೆಂಬುದಂ ಬಲ್ಲೆಂ. ಬಾಲನಾಱೆಂಬುದನಱಿಯೆನೆಂದಂ. ಅದರ್ಕಾಶತ್ರುಘ್ನನಾರಾದೊಡೇನಾಯ್ತು, ಎತ್ತಿ ಪೋಪಮೆಂದು ಸೇನೆವೆರಸೈದಿವಂದು ಕುದುರೆಯನಣ್ಣನೆಡೆಗುಯ್ವ ಲವನಂ ತಡೆದು ತಾಗಿದನಾಗಳ್. ಅನಿತಱಿಂ ಮೇಲೆ ಮನೆಗೆಂದು ಪೋಪ ಲವಂ ಪಲವಂ ರಾವುತವಡೆಯುಂ ತೇರ ವಂಗಡಮುಂ ಕರಿಘಟೆಯುಂ ಕವಿತರ್ಪುದಂ ಕಂಡು ಮಾಣ್ದು ನಾರಿಯುಂ ಬಿಲ್ಗೆ ಬಿಗಿದು ಬೆನ್ನ ಮೂಡಿಗೆಯಿಂ ಕೋಲನುಗಿದು ಸಂಧಿಸಿ ಬಂಧಿಸಿದ ಕುದುರೆಯ ಕೆಲನೊಳಿರ್ಪುದುಮಾತನೊಂದು ಬಿಂಕಮುಮಂ ಸೆರಗಂ ಪೊಱಿದ ಬೀರಮುಮಂ ಕಂಡು ರಾಘವಾವರಜಂ ತಾನೆ ತೇರಂ ನೂಂಕಿ ಬಾಲಂಗಿದಿರಾಗಿ-ಎಲೆ ಮಾಮಿಡಿಯ ತೋರದ ತೋಱಿದ ಪೆರ್ಗಳಿಕೆಯ ತರಳ! ಮೊಟ್ಟೆಯೊಳೆ ಕೆಲವೊಂಗದಟು ನಿನಗೆತ್ತಣಿನಾಯ್ತು? ನೀನಾವಂ? ಹಯಮನೇನೆಂದು ಬಗೆದು ಕಟ್ಟಿದೆಯೊ? ಕಟ್ಟಳವಿಯೇಂ? ನಿನಗೆ ಸೊಗಸಾಯ್ತು! ಬಿಡು ಬಿಡು ಮರುಳೆ! ಆಟದ ಕೂಟದ ನಿನ್ನನ್ನರೊಳ್ ಪೆಣರ್ವಂದಂ ಕದನಮಲ್ಲೆಂದು ಗದಱಿ ಮರಲ್ದುವೊಂದು ಬಗೆಯಿಂ ಹಯಕೆ ಸನಿಯಂಬೋಪ್ಪುದುಂ ಲವಂ ಕಿಸುಗಣ್ದು ಕಣೆಯನೆಚ್ಚು ಪಗೆಯುಂ ನೋಯಿಸಿ ಕಡೆಯೊಳ್-- ಪ್ರಾಯಂ ಕೂಸಾದೊಡೇನೀಸಾಯಕಂ ಕೂಸಕ್ಕುಮೆ! ಜಗದೆ ನೀವೆ ಬಲ್ಪುಳ್ಳರ್! ಆಂ ನಡೆವೆತ್ತ ಸೀರ್ಪುಲ್ಗಾಗೆವೆ! ಅಲ್ಲದೊಡೇಂ ಪೆರ್ಗಳಿಕೆಯೊ? ಆಮೆ ಜಗದ ಗಂಡರ ಗಂಡರ್. ಪೆಱರ್ ಪಂದೆಗೊಂದೆಗಳ್. ಹಯಂ ಬರ್ಪುದುಮೊಡನೆ ಮಱೆವಾೞ್ವುದು! ಕಪ್ಪಮನೊಪ್ಪಿಸುವುದು ಗಡ! ನಿರ್ಧನರಪ್ಪನಂ ಮೊಗಸಿರ್ದ ಜನ್ನಕ್ಕೆ ಪಣಮಂ ಕುಡಿಮೆಂದು ಬೇಡಿದೊಡಾಗದೆ! ಲೇಸುಲೇಸು. ನಿಮ್ಮನ್ನರಪ್ಪ ನಾಡ ರಾಯರೊಂದಾಯತಿಯೆಂದು ಹಂಗಿಸಿ ನುಡಿದಂ. ಆನುಡಿಗೆ ಶತ್ರುಘ್ನನಿಸಿಸುಂ ಖತಿಗೊಂಡು ಮೋಹನೊಂದಂಬಿನಿಸಲೊಡಂ ಮಾರ್ಕೊಂಡು ಮುಱಿದು ತಾನೈದು ಕೂರ್ಗಣೆಗಳಿಂ ತೇರಂ ಬಿಲ್ಲ ನಾರಿಯುಂ ತುಂಡಿಸಿ ಹೊಂಕರಿಸಿದಂ. ಮತ್ತಂ ಶತ್ರುಘ್ನಂ ನವ್ಯಭವ್ಯರಥಮಂ ಪೊಸಬಿ

ಲ್ಲಂ ಕೊಂಡು ಬಾಲಕನಂ ಶರಂಗಳಿಂ ಮುಸುಂಕಿದಿಂಬೞಿಯುಂ ಕೋಲ್ಗಳುಱುಜಿಗೆ ಗಾಱುಗೆಟ್ಟು ಬಾಯಾಱಿ ಬನ್ನಪಟ್ಟು ಮುಚ್ಚೆವೋದ ಲವನೊಂದು ಗಂಡುಗರ್ವಕ್ಕೆ ಮೆಚ್ಚಿ ಕೊಂಡಾಡಿ ನೇಹಂ ಮಿಗೆ ತಾನೆ ತೋಳ್ಗೊಳೆತ್ತಿ ತೇರೊಳಿಟ್ಟು ಹಯಮುಮಂ ಬಿಡಿಸಿ ಪುರಕೆ ಪೋಗವೋಪುದುಂ; ಮಿಕ್ಕ ಮಕ್ಕಳಂತಿದಂ ಕಂಡು ಬೆದಱಿ ಕಟ್ಟುಱದಿಂ ತಮ್ಮಾಶ್ರಮಕ್ಕೆ ಬಂದು ಬೆಟ್ಟುಸಿರಿಂ ಇಸಿವೊಟ್ತುಂ ಬಾರದೆ ನಿಂದ ಮಕ್ಕಳ ಬರವನೆ ಪಾರುತುಮಿರ್ಪ ಸೀತೆಯುಂ ಕಂಡು— ಅಬ್ಬೆ! ಪೋಪೋ! ಈಗಡೆ ಲವನಂ ಬೀಱಿಪ ರಾಯರ ಕುದುರೆಯುಂ ಕೊಂಡನೆಂಬೊಂದು ಕತದಿಂ ಬೇಡವೇಡೆಂದೊಡಂ ಕೇಳದೆ ಪಗೆಗಳ್ ಪಿಡಿದುಯ್ದರಯ್ಯೋ! ಕುಶನಾವೆಡೆ! ಮತ್ತಯ್ಯನೇಂ ಬಾರನಿನ್ನುಂ! ಕೆಟ್ಟುದು ಕಜ್ಜಂ. ನಡೆ ನಡೆ, ಪೋಪಂ ಪೋಪಂ, ತಳ್ವದಿರೆಂದು ತಾಮುಂ ಕೆಯ್ಯೊಳ್ ದಂಡಂಗೊಂಡು ಪೊಱಮಟ್ಟರ್.

ಎನ್ನೆಱತಿ! ಇಂತಾಡಿದ ಮಕ್ಕಳ ಮಾತಂ ಕೇಳ್ದು ಸೀತೆ ಮನಮುಱುಗಿ— ಹಾ ಹಾ! ಎನ್ನ ಕಣ್ಮಣಿಯನಾರುಯ್ದರ್! ಎನ್ನ ಚಿಂತಾಮಣಿಯನಾರ್ ಪಿಡಿದರ್! ಎನ್ನ ಸಂಜೀವನಮನಾರ್ ಕೊಂಡರ್! ಎನ್ನರಗಿಳಿಯನಾರ್ ಕಂಡರಕ್ಕಟ! ಹಾ ಎನ್ನ ರನ್ನ! ಎನ್ನ ಚೆನ್ನ! ಹಾ! ಹಾ! ಎನ್ನ ಸುಕುಮಾರ! ನೀನೇನಾದಯ್! ಎತ್ತವೋದಯ್ ಮಗನೇ? ನಿನಗೇತರ್ಕೆ ಪಾಜಿ? ಏತರ್ಕಾರ್ಜಿ ಪಗೆಗಳೊಳ್?

ಜಡಿಸರೊ ಬಡಿವರೊ ಸೆಱೆವಿಡಿ |
ದಿಡುವರೊ ಮೇಣಲ್ಲಂದು ಶೂಲದ ಮೊನೆಗೇ ||
ಱಿಡುವರೊ ಕಡಿವರೊ ಬಱಿದೇಂ |
ಬಿಡುವರೊ ಹಾ ಕಂದ! ನಿನ್ನನಱುಗುಲಿರಾಯರ್? ||

ಆಃ! ಅರಿಗಳ್ ಬಾಯ್ಗೆಂತೆ ಪೆತ್ತೆನೆ ಮಗನೇ? ಎಂತೊಡಲಂ ಪಿಡಿದಿರ್ಪೆನೊ? ಎಂತು ಸೈರಿಪೆನೊ?— ಎಂದು ಪಲುಂಬಿ ಪಳಯಿಸುತ್ತಿರ್ಪಾವೇಳೆಗರಿಗಜಾಂಕುಶಂ ಕುಶಂ ಕುಶಸಮಿತ್ಫಲಪ್ರಸೂನಂಗಳಂ ಪೊತ್ತು ತೊಟ್ಟನೆ ಬಂದು ಪೊಱೆಯನಿೞಿಪಿ ಮಱುಗುವ

ಮಾತೆಯು ಪೊರೆಯೊಳ್ ನಿಂದು-ಎನ್ನಬ್ಬೆ! ಇಂತೇನಬಲಾರಿನಾಯ್ತು ? ನಿನಗೇಂ ಜಡಂ! ಪಟುವಾನಿಸರಾತವಸಿಗಳೇಂ ಕೊಱಚಾಡಿದರೆ ? ನೆರೆಮನೆಯ ಕಿಱುಬಬ್ಬೆ ನಿನ್ನಂ ಬೆನ್ನೊಳೇೞಿಸಿದಳೆ! ಈಗಾಳುಮೂಳ ಬಾಳರೆತ್ತಾನುಂ ಭಂಗಿಸಿದರೆ? ಏಕೆ ಮಱುಗುವಾ? ಎನ್ನಂ ನೋಡು, ಮಾತಾಡು-ಎಂಬೆನಸುಂ ಪತ್ತೆಸಾರ್ದು ಕೊರಲನಮರ್ದಪ್ಪಿಯುಂ ಗಲ್ಲಮನಲುಗಿಯುಂ ಬೞಿವ ಕಂಬನಿಯುಂ ತೊಡೆದುಂ ನುಡಿಯಿಸುವ ಬಾಲಕಂಗೆ ಮಱುನುಡಿಗುಡಲಾಱದಂದು ಬೞಿಯು ಮಕ್ಕಳ್- ಪಗೆರಾಯರ ಜನ್ನಗುದುರೆಯಂ ಬಂದಿವಿಡಿದುದಂ ಮೇಣ್ ಕಾದಿ ಸೆಱೆವೋದುದಂ ಕುಶಂಗೆ ಕೇಳಿಸಿದರ್. ಇಂತೆಂಬ ವಟುಗಳಂ ಗದಱಿ ಬೆದಱಿ ಪೋಪಂತು ಮಾಡಿ ತಾಯುಂ-ಎನ್ನಾಣೆ! ಮಱುಗದಿರಾ. ಜವನಕ್ಕೆ; ಉರಿಗಣ್ಣ ಭವನಕ್ಕೆ; ಬೆಟ್ಟನ ತಿಟ್ಟನ ಮಾಧವನಕ್ಕೆ; ಎಮ್ಮ ಲವನಂ ಕೊಂಡುಯ್ದವನಂ ಸೊರ್ಕು ಸೆರ್ಕಪ್ಪಿನೆಗಂ ಬಡಿದು ಪಿಡಿದಸುವೆರಸು ನಿನ್ನಡಿಗೊಪ್ಪಿಸದಿರೆ, ನಿನ್ನ ಮುದ್ದಿನ ಕಂದನೆ! ನೋಡೆನ್ನ ದಟನೆಂದು ಪೂಣ್ದು ಮಾತೆಯಂ ಸೈತಿಟ್ಟು, ಮುನ್ನಂ ಮುನಿ ತನಗಿತ್ತ ಸವಗಮಂ ಸೀಸಕಮಂ ಕಣೆಯುಂ ದೊಣೆಯುಂ ಬಿಲ್ಲನೆಲ್ಲಮಂ ಕೊಂಡು ತಾಯ್ಗೆ ಪೊಡೆಮಟ್ಟು ಪರಕೆಗೊಂಡಂದಿನಱುಮೊಗನೊಂದು ಪನ್ನತಿಕೆಯಿಂ ಬೆಂಬತ್ತಿ ನಡೆದು ತಡೆದರಿಸೇನೆಯನಿದಿರ್ಚಿ-ಎಲೆಲೆ ಬಣಗುಗಳಿರಾ! ರಣದೆ ಮೈಸೋಲದ ಸೋಲದ ಬಾಲನೊರ್ವನಂ ಬೆಳ್ಳುಪಿಳ್ಳೆಯನೆಂತಂತು ಕೊಂಡುಯ್ವುದಿದಾವ ನಾಯಂ ಸೇಣ ಸಾಳ್ಗಳ್ ? ನಿಮ್ಮಂ ಗೆಲ್ಲವೆಣ್ಣಂತೊಲ್ವಳ್! ಬಲ್ಪಳ್ಳಡೆನ್ನೊಳ್ ತೋಱಿಮೆಂದು ತನಿವೆಳಗಿನ ಪೊಸಮುಸೆಯಲಗಂ ತೆಗೆದೆಚ್ಚು ಚೂಣಿಯಂ ಘಾತಿಸಿ ದಿಂಬೞಿಯುಂ ದೆಸೆಗೆಟ್ಟು ತಮ್ಮ ದೞಮಂ ಕೈವೀಸಿ ಸೈತಿಟ್ಟು ಪುಷ್ಕಲಂ ಬಂದ ಬವರಿಗಂಗೆ ಮಾಱಾಂತು-



ಎಲೆ ತರಳ! ನಿನ್ನ ಬಿಂಕದ ।
ನೆಱಿಮೋಂ? ಕಟ್ಟುಱದ ಬೞದ ಬಾಯಾಯ್ತರಿಯಂ ॥
ಗೆಲಲಾರ್ಪೊಡೆ ಪೋರ್ಪೊಡೆ ಮೊ ।
ಯ್ಗಲಿಗಳ್ ನಾಣಿಲಿಗಳಂತು ಜಂಕಿಪರೊಳರೇ ? ॥

ಸೆಱೆವಿಡಿದುಯ್ವೊಡಾಗದು ಗಡ! ಗಂಡರ ಗಂಡವರ್ಗಕ್ಕೆ ತಗದು ಗಡ! ನಾಯುಂ ನಾಯುಂ ಕೇಳ್ವರೆ? ಅಲ್ಲದಂದಾಬಡತರುವಲಿಗೇಕೊ ನಾಡ ಮನ್ನೆಯರ ಜನ್ನಗುದುರೆಯೊಂದು ಗೊಡವೆ! ಕಾದುವ ಬೆಸನಂ! ನೀನವಂಗೆ ಸೋಗರನಕ್ಕುಮದಱಿಂ ಕಡುಕೆಯ್ದೊಡೆ ನಿನ್ನುಮಂ ಸೆಱೆಗೊಂಡು ಕೊಂಡು ಪಿಂಡನುರ್ದನಂ ಮಾಡಟೆ ಬಿಡುವೆನೆ, ನೋಡೆಂದು ಪೊಂಗಱಿಯ ಕೂರಂಬುಗಳನಾರ್ದೆಚ್ಚಂ. ಅಂತಿರೆ ಗುಱಿಗೊಂಡು ಬರ್ಪ ಬಾಣಮಂ ಕಾಣಗಂತು ಕಡಿದು ಪಡಿಸರಲಿನೇಸಾಡಿ ಕೂಸಾಡಿದ ನುಡಿಗಿಂತಿದೇಂ ಮುನಿಸು! ನೀಂ ಮಾನ್ಯರ್ ಪೊನ್ಯರ್; ಆಮನ್ಯರ್ ವನ್ಯರ್ ಸಾಜಮಾಗವೆ! ನೋೞ್ಪೊಡೆ ನಿಮ್ಮ ಗಂಡುಗಲಿತನಕಂ ಮನಕಮೊಪ್ಪಿರೆ ಮುಚ್ಚೞಿಯಿಂ ಪೞ್ಚಿಪೋದ ಕಿಱಿದಮ್ಮನಂ ಬಂದಿಗೊಂಡಿರಕ್ಕುಂ. ಈಗಳನ್ನಂ ಮುನ್ನಂ ಬನ್ನಂಬಡದನ್ನಂ ಬಾಳ್ದಲೆಪಿಡಿಯಿಂ. ಅಲ್ಲದೊಡಿಂತು ಱಿ! ಕಾಡ ಮಱೆಯ ಕಿಱುವೞಿಯುನಟ್ಟಿ ಪಿಡಿವ ನಾಡ ನಾಯ್ಗಳಂತಂತೆನ್ನಣುಗದಮ್ಮನಂ ಪಿಡಿದೆವು ಜಡಿದೆವೆಂದೊಸೆಯೊಂದು ಪನ್ನತಿಕೆಯೇ! ಈಗಳೆ ನಿಮ್ಮನುಗಿದುಂ ಬಗಿದುಂ ಬೆಸೆನಲಿಗುಡುತುಮೆನ್ನ ಚೆನ್ನ ತಮ್ಮನಂ ಕೊಳ್ವೆನೆಂದು ನೋಯಿಸಿದಂ. ಇಂತಿರೆ ಪುಷ್ಕಲಂ ಶರಹತಿಗೆ ಗಾಱುಗೆಟ್ಟು ಬಾಯೊಱೆ ಕೀಱಿ ನೆಲಕುರುಳ್ದು ಇನಿವೊೞ್ತಿಂ ತೆಪ್ಪಱದಿರೆ ಕಂಡು ಲವಣಾಂತಕನಂತಕನಂತೆ ಕನಲ್ದು ತೇರನೇಱಿ ಬಂದು ಕಟ್ಟೆದಿರ ಪೂಣಿಗನಂ ಕಂಡು- ಅಬ್ಬಾ! ಕಂಡಿರೆ ಮಱೆಗೊಣಸು ಪಲ್ಲಮುಱಿಯಂ ಕೊಣಕಿ ಕೆಣಕುವೊಂದಚ್ಚರಿಯಂ: ನೀರೊಳ್ಳೆ ಪುತ್ತಿನ ಪಾವಂ ನುಂಗಲಾಟಿಪೊಂದಂದಮಂ. ಕಾಲ ತುೞಿತಕ್ಕೆ ಪೊಗೆವ ನಂಜೆನುರಿಜಾಳೆಯು ಸುಯ್ಗೆಜಜ್ಜರಿಯಾಗಿ ಸೀಕರಿಪೋಪುದಂ ಲೆಕ್ಕಿಸದಿರ್ಕುಮೆಂದು ಬೆಂಗೆ ಬೆಂಗೈದಂಬುಗಳನೆಚ್ಚೊಡಾಸರಲೆ ಕೂಟವ ಕಾದಲರನೆಚ್ಚೊಡಲಿಚನ ಪೂಸರಲಪೊಲಾಯ್ತು ಸರಲಂ. ಆಗಳ್ಗೆ ಕುಶಂ ಪಗೆಯ ಕಣೆಯುಂ ಸದೆದು ಮೇಣೆರಡಱಿಂ ಕರದ ಕೋಯುಂಡಮಂ ಮುಱಿದಂ. ಇಂತು ಬಿಲ್ ಬೆಸೆಯಾಗೆ ಕಂಡು ಶತ್ರುಘಂ ಪೆಱತೊಂದು ಬಿಲ್ಲಂ ಕೊಂಡು ಕಣೆಯುಂ ಪೂಡಿ- ಎಲೆಲೆ ಮಟ್ಟಮೀಱಿದ ಮಾಯದ ಬಾಲಕ! ನೀಂ ದಿಟ್ಟಂ.

ಬಿಟ್ಟಮಾದೊಡೆನ್ನೀಕಟ್ಟಸುಗೆಯ ಕೋಲಂ ಮುಟ್ಟೆ ಮುಱಿವುದೆಂದು ಕಿವಿಮುಟ್ಟೆ ಸೆಳೆದಿಟ್ಟಂ. ಅನಿತಱೊಳ್ ಕುಶಂ ಕನಿಗಿಡಿಯುಂ ಕಾಱುವರ್ಷತೋರಗಣೆಯುಂ ನಡುವಟ್ಟೆಯೊಳ್ ಪಡಿಗೋಲಿಂ ಬಡಿಗೋಲಿಂ ಕರಡಮುಂ ಸದೆವಂತೆ ಸದೆದು ಮತ್ತಮಾಜಱಿಂ ಕೈಯ ಪೊಸಬಿಲ್ಲಂ ಮೆಯ್ಯ ಸವಗಮಂ ತುಂಡಿಸಿ, ತೇರಂ ವಾರುವಮಂ ಕಡಿದು, ರಥಿಯುಂ ಸಾರಥಿಯುಂ ಸಮಂತು ಗಾಱುಗಿಡಿಸಿದಂ. ಅಂತಪ್ಪುದುಮಿಳೆಗಿೞಿತಂದು ಗದೆಗೊಂಡು ಪೊಯ್ಯಲೊಡಂ ಕುಶನೆಂತುಂ ಮೆಯ್ಮುದುಡಿ ಪುಟನೆಗೆದು ಕನ್ನೊಂದು ಕಣೆಯಿಂ ಶತ್ರುಘ್ನನನಿಱಿದಂ. ಆಗಳೇನೆಂಬೆನೊ! ಬೆಟ್ಟಸ ನಡುಸರಂ ಬಿಱುಗಾಳಿಯ ಪೊಯ್ಲಿಂಗೆ ಬೇರುಡಿದು ಬೀೞ್ವಂತೆ ದಿಮ್ಮನೆ ಗದೆವೆರಸು ತಿರೆಗೆ ಕೆಡೆದಂ. ಮೊಱೆಯಿಟ್ಟುದು ಸೇನೆ; ಮುಂದುಗೆಟ್ಟುದು ಯೋಧರೊಂದು ನೆರವಿ; ಗಜಬಜೆಸಿದರ್ ಮಹಾರಥರ್. ಇಂತಾಗಲೊಡಮೆತ್ತಂ ಸುಭುಜಂ ಲಕ್ಷ್ಮೀನಿಧಿ ಮುಂತಪ್ಪ ವೀರರುಂ ಸುಗ್ರೀವಸುಷೇಣರಾದಿಯಪ್ಪ ಮರ್ಕಟನಾಯಕರುಮಿರ್ತಂಡದಿಂ ಮಂಡಳಿಸಿ ಕಾದುವುದುಮೊರ್ವನೆ ಬಾಲನನಿಬರಂ ಮಱಿಸಿಂಗನಾನೆವಿಂಡನೆಂತಂತು ಮಾಮಸಕದಿಂ ದೆಸೆಗಿಡಿಸಿದಂ. ಕೆಲರಂ ಕಡಿದಂ; ಕೆಲರಂ ಬಡಿದಂ; ಕೆಲರನು; ಗಿದಂ; ಕೆಲರಂ ಬಗಿದಂ; ಕೆಲರಂ ಕುಱುವಱಿದಱಿದಂ; ಕೆಲರಂ ಬಿಗಿನಂ; ಕೆಲರನಿಟ್ಟಂ; ಕೆಲರಂ ಬಿಟ್ಟಂ ಮೊನೆಯೊಳ್.

ಇಂತು ಸಂಗ್ರಾಮಕೋಲಾಹಲಂ ವಿರೋಧಿವರೂಥಿನಿಯುಂ ಸದೆಬಡಿದು ಕಾಲದ ರಂಗತ್ರಿಣೇತ್ರನಂತೆ ಮೆಱೆಯುತಿರ್ಪುದುಮಾವೇಳೆಗೆ ಮುಚ್ಚೆವೋದ ಲವಂ ಕಿಱಿದುಂ ಬೇಗನೆಚ್ಚತ್ತು ತನ್ನ ಬಂದಿಗೆ ಬೆಱಗುವಟ್ಟತ್ತಂ ನಿಟ್ಟಿಸಿ ಪಗೆಯೊಡ್ಡು ಬಕ್ಕಂ ಬಯಲಾದುದಂ ನೀಡುಮೋಱಿಸಿ ಮುಂದೆಸೆಯೊಳಱಿದುಱಿದ ಜೋದರೊಳ್ ಪೊಣರ್ವಗ್ರಜಾತನಂ ಕಂಡು ತಾನುಂ ಕೈದುಗೊಂಡಾತನಂ ಕಿಚ್ಚಂ ಗಾಳಿಯೆಂತಂತು ಕೂಡಿದಂ. ಹತಶೇಷರೊಳಮಿಗಳ್ ಪಲಂಬರ್ ಗತಾಸುಗಳಪ್ಪುದಂ ಕಂಡು ಕಂಡಗತಾಸುಗಳೆಂತುಂ ರಣಕೆ ಬೆಂಗೊಟ್ಟೋಡಿ ಕಟ್ಟುಱದಿಂ ಪೊೞಲ್ಗೆ ಬಂದು ರಾಘವಂಗೀವಿವರಮನಱಿಕೆಗೆಯ್ವುದುಂ; ತನ್ನವರ ಪರಿಭವಕ್ಕೆ ಮನಮುಱುಗಿಯುಂ ಪಗೆದ ಮಕ್ಕಳರ್ವರ ಬಿಲ್ಗವೆತ್ತ ಬಲ್ಪಿಂಗೆ ಬೆಱಗಾಗಿಯುಂ

ದೀಕ್ಷೆಯೊಳಿರ್ದ ರಾಘವನನುಜಂಬೆರಸು ತಾನೆ ಪೋಱಮಟ್ಟಂ. ಇಂತು ಚಡುವೇಗದಿಂ ಪಡೆಗೂಡಿ ನಡೆದು ಕಾಡನೆತ್ತಂ ಕವಿದೊತ್ತಿ ರಾಮಲಕ್ಷ್ಮಣರೋರೊಂದು ದೆಸೆಯೊಳಿರ್ದು ದಳಿವನೊಡ್ಡಿ ಮಕ್ಕಳಂ ಪಿಡಿಯೆ ಬರ್ಪುದುವಾಪ್ರೊಡ್ಡು ಗಾಳಿಯೊಡ್ಡಿನ ಮುಗಿಲೊಡ್ಡಾಯ್ತು ಬಾಲಕರಿದಿರೊಳ್. ಇಂತೊಂದು ಮಾಳ್ಕೆಯಿಂ ಸುರಿಗೆಯು, ಜಮದಾಡೆಯು, ಕಕ್ಕಡೆಯು, ಮುಸುಂಡಿಯು, ಕಡಿಗತ್ತಿಯು, ಕೊಡಲಿಯು, ಇಟ್ಟಿಯು, ಬಟ್ಟೆಕೈದಿನ, ಕೈದುಕಾಱರ ದಱಂ ತಂತಮಗೆ ದಳಿವುಱಿದಿಂ ಕುಶಲವರಿಸುಗೆಯಿಂ ಸತ್ತುಂ ಮುತ್ತುಂ ಕಱಿದುಮಱಿದುಂ ಪೋಪುದಂ ಅಱಿಮಱಿದ ಮಂಡಳಿ ತಂಡತಂಡದಿಂ ಪಿಂಡನಾಗಿಸಿ ಚಂಡಭಂಡನಕ್ಕೆ ನೂಂಕಿ ತಾಮಿರ್ವರುಂ ತೇರನೇಱಿ ಬರ್ಪ ಗಂಡುಗಲಿಗಳಂ ಕಂಡು ಗಂಡಗರ್ವದಿಂ ಲವನಗ್ರಜಂಗೆ-ಕಂಡಿರೆ ಅಣ್ಣ! ಮೊನೆಯೊಳಾಗಳೆ ಮಿಟ್ಟಿಗೆ ತುತ್ತಾದ ತಮ್ಮವರ ಬೆಂಬಲಕೆಂದು ಬಂದ ಬಲ್ಲಿವರಿರ್ವರುಂ ಜೋಡಿವೇಱಾಗಿ ರಥಮನಡರ್ದು ಎಮಗೆ ಮುಮ್ಮೊಗವಾಗಿ ಟೇವಿಯಿಂ ಬರ್ಕುಂ. ಈಗಳೆಮಗೆ ಸಮರಂ ಸಾಟಿಯಾಯ್ತು. ಕಾಡ ದೈವಂಗಳ್ಗೆ ಬಲಿಯೀವಂ. ಕಿಱಿಯನೊರ್ವನೆನಗೆ; ಪಿರಿಯಂ ನಿಮಗೆ. ಮಿಕ್ಕಿನ ಪಡಿಬಲಮೆನ್ನ ನಿಮ್ಮ ಕೋಲ್ಗೆಂದು ಪಸುಗೆಗೆಯ್ದು ಮುಂದೊತ್ತಿ ಬರ್ಪ ರಾಮಲಕ್ಷ್ಮಣರ್ಗೆ ಕಟ್ಟಿದಿರಾಗಿ ನಡೆದರ್.

ಇಂತು ಸಂಕೆಯಿಲ್ಲದೆ ಬಿಂಕದಿಂ ಮುಟ್ಟಿವರ್ಪ ಮಕ್ಕಳ ಬಲಕಂ ಚಲಕಂ ನಿಬ್ಬೆಱಗಾಗಿ ರಾಘವಂ ಲಕ್ಷ್ಮಣಂಗೆ- ಎಲೆ ತಮ್ಮ! ನಾಡೊಡೆಯರ ಮಕ್ಕಳ್ಗಮೀವಗೆಯ ಪೆಂಪುಂ ಕೆಂಪುಂ ನೋಡಿಪ್ಪೊಡರಿದು ಗಡಾ! ಪಾಡುಗೆಟ್ಟ ಕಾಡ ತರುವಲಿಗಳ್ಗಿಂತುಟೊಂದು ಬೀರಮೆತ್ತಣ್ದು! ಇವರೊಳೆನಗೇನೊ ಮಮತೆ ಪುಟ್ಟುಗುಂ; ಮುನಿಸು ಬಾರದು. ಆರೆಂಬುದನಾರಯ್ದು ಪೇಳಿಯ್,- ಎಂಬುದುಂ ಲಕ್ಷ್ಮಣಂ ತೇರನಣೆದು ನೂಂಕಿ ಬಿಲ್ಲ ಕೊಪ್ಪಿಂಗೆ ನಾರಿಯನಳವಡಿಸುತೆ ಕೋಲಂ ಸಂಧಿಸುತೆ ನುಗ್ಗಿವರ್ಪ ಬಾಲರಂ ತಡೆದು-ಎಲೆ ಮಕ್ಕಳಿರ! ನೀಮಾರ್? ಹಯಮಂ ಕಟ್ಟಿದಿರೇಕೆ? ಎಮ್ಮವರನಿದಿರ್ಚಿದಿರೇಕೆ? ಪೋಪಿರೆಲ್ಲಿಗೆ? ತಡೆಯಿಮೆಂದು ಬಿಲ್ಲನೇಱಿಸಿದಂ. ಆಗಳ್ಗೆ ಲವಂ- ಎಲೆಲೆ, ಕಟ್ಟೊತ್ತಾಯದ ರಾ

ಯ! ಮೊನೆಗೊತ್ತಿ ಬಂದು ನೀವಾರೆಂದು ಬೆಸಗೊಳ್ವುದಿದಾವ ನಡತೆ? ಸಲ್ವೊಡೆ ಕಾದು, ಮೋದು. ಆಱೆಯಪ್ಪೊಡೆ ಪಲಾಯನಮನೊಂದು. ಆದೊಡಂ ನೀಂ ಕೇಳ್ವನಂ ಪೇೞ್ವೆಂ. ಎಮ್ಮನಬ್ಬೆ ಪೆತ್ತಳಜ್ಜಂ ಸಾಕಿದಂ. ಚಲದಿಂ ನಿಮ್ಮ ಹಯಮಂ ಕಟ್ಟಿದೆವು; ಇದಿರ್ಚಿದೊಡಿದಿರ್ಚಿದೆವು. ಮೀಸಲಿಪರ್ ನಿಮ್ಮ ಜೋದರ ಸಮ್ಮುಖಕ್ಕೆ ಪೋಪೆವು. ತಱೆದೊಡೆ ತಱೆವೆವೆಂದು, ಕಟ್ಟೆ ನುಡಿವುದುಂ; ಲಕ್ಷ್ಮಣಂ—ಕೊರ್ವಿನ ಕೊಂಕುನುಡಿಗಿದು ಪೊೞ್ತಲ್ತು. ನೀಮೆಳೆಯರ್. ಗೆಲ್ದ ಗೆಲ್ಲಂ ಸೋಲ್ತ ಸೋಲಂ ಬೀರರ್ಗೆಮಗೆ ಬಾರದು. ಸವಿನುಡಿಯುಂ ಲಾಲಿಸಿ ಕೊಳುಗುಳಮಂ ಹಯಮಂ ಕಡುಚಲಮಂ ಬಿಟ್ಟು ಪೋಗಿಂ. ಈನುಡಿ ನಿಮಗೆ ಸೊಗಸಾಗದೆ ಪೋಗೆ ನಿಮ್ಮೊಡಲುಮಂ ಬಿಟ್ಟು ಪೋಪಿರ್. ಇದು ನಿಕ್ಕುವಂ—ಎಂದು ಮೂಡಿಗೆಯಿಂ ಕಣೆಯನೆತ್ತಿ ಬಿಲ್ಗೆ ಪೂಡಿದಂ. ಅದರ್ಕಾಲವಂ ಲವಂ ಬೆಚ್ಚದೆ— ಎಲೆ! ಕೊಱಚಾಡುವೆಯೇಂ? ಆಮೆಳೆಯರಾದೊಡೇಂ ಕೋಲ್ಗೊಂದೆಳಮೆಯುಂಟೆ? ಪಂದಿಯಂತುಂ ಗೊಂದೆಯಂತುಂ ಸೊರ್ಕಿ ಕೊರ್ವಿ ಬಳೆದೊಡಾಯ್ತು! ಮಱಿಸಿಂಗನಂತು ಕಡುಪುಂ ಬಲ್ಪುಮಿರವೇಡ! ಪೋ! ಕೂಸಾಗಿಯುಮಂದು ಪದ್ಮನಂ ಕೊಂದ ಸಂದ ಗುಹನಳವಿ ಗಹನಮಾಗದೇಂ ಮನಕೆ?— ಎಂದು ಸಡಗರಿಸಿ ಕಣೆಯೆರಡಱಿಂ ಲಕ್ಷ್ಮಣನ ಧನುವಂ ಮುಱಿದಂ. ಅನಿತಱೊಳೆ ಮಗುೞ್ದೊಂದು ಬಿಲ್ಲಂ ಕೊಂಡು ಕಿನಿಸಿಂ ಮೆಯ್ವೆರ್ಚಿ ಕೋಲ್ಗಳನುರ್ಚಿ ಬಾಲಕಂಗಿಸುವುದುಮಂತವರಂ ನಿಲ್ಲದೆ ನುಚ್ಚುನುಱಿಮಾಡಿದಂ. ಎನಿತ್ತೆನಿತ್ತಂ ಲಕ್ಷ್ಮಣನಿಸುವನನಿತ್ತನಿತ್ತಂ ಕೊಚ್ಚುದಱಿವಂ ಲವಂ. ಇಂತು ಪಿರಿದುಂಬೊೞ್ತು ಸೆಣಸುತಿರಲೊಡಮತ್ತಲ್ ಮೇಣೊಂದು ದೆಸೆಯೊಳ್ ಸೂಟಿಯಿಂ ಪೋಪ ಕುಶನಂ ತಱೆದು ರಾಘವಂ— ಎಲೆ ಪಸುಳೆ! ನೀನಾವಂ? ಹಯಮನೇನೆಂದು ಕಟ್ಟಿದಯ್? ಎನ್ನಾಣೆ! ನಿನ್ನೊಳೆ ನಗಟ್ಕುಱುಂಟು. ನೀಂ ಗೆಯ್ದ ದುಱುದುಂಬಿತನಮಂ ಪೊಲ್ಲದ ಕಜ್ಜಮಂ ಮಱೆತೆಂ. ಇದಕೊಳ್ಳ ನಿನ್ನಂ ಕಾವೆಂ. ನಿಮಗಿನಿತ್ತು ಬಲ್ಪೆಂತುಟಾಯ್ತು? ಬಿಲ್ಲೋಜನಾವಂ? ಪುಟ್ಟಿದಿರೆಲ್ಲಿ? ಪೇೞೆಂಬುದುಂ; ಕುಶಂ—ಕೇಳೆಲೆ ರಾಯ! ನಿನ್ನ ಹಯಮಂಗಿಯುಮಂ ನಾಂ ಕಟ್ಟಿದೆನಿಲ್ಲ.

ಕಿಱಿಯನಱಿಯದೆ ಕಟ್ಟಿದನಕ್ಕುಂ. ಮೇಣೆನ್ನೊಳಾವುದುಂ ದುಱದುಂ ಬಿತನಂ ಬಾರದು. ನಿಮ್ಮಪರಾಕ್ರಮಂ ಬಱಿದೆ ನೋಯಿಸಲೊಡಮೆನಗೆ ನಿಮ್ಮೊಳ್ ಮುನಿಸಾಯ್ತು. ಈಗಳ್ ನಿಮ್ಮನಿದಿರ್ಚುವೊಡಾದೆಂ. ಎಮಗಜ್ಜಂ ಬಿಲ್ಲೋಜಂ. ಕಾಡೊಳೆ ಪುಟ್ಟಿದೆವು. ಅಬ್ಬೆಯ ಪರಕೆ, ಮುತ್ತಯ್ಯನ ಕಾಪು, ಕೆಳೆಯರ ನಲ್ಮೆ, ಪಿರಿಯರೊಲ್ಮೆ, ಎಮಗೀ ಪಗೆಯ ಬಲ್ಪನೊಡರ್ಚಿದತ್ತು-- ಎಂದಾಡಿದಂ. ಆನುಡಿಗೆ ರಾಘವಂ ತಲೆದೂಗಿ-ಕಿಱುಗೂಸುಗಳ್ ನಿಮಗೆಮಗೆ ಜುದ್ಧಮಕ್ಕುಮೆ? ಬಱಿದೆ ಕಾದಿ ಬೞಲದಿರಿಂ. ಕೊಂಡ ಹಯಮಂ ಬಿಟ್ಟು ಸಂತಂ ಪೋಗಿಂ ಪೋಗಿಮೆಂದುಸಿರ್ದಂ ಬೞಿಯುಂ ಕುಶಂ ನಿನ್ನೀಕೊರ್ವಿನ ನುಡಿಯಂತಿರ್ಕೆ! ಕಟ್ಟಿದ ಹಯಮಂ ಕೊಟ್ಟು ಬಾೞ್ವ ಮಾತುಂಟೆ? ಅಬ್ಬೆ ಜೋಡಿಸಳೆ? ಅಜ್ಜಂ ಪೞಿಯನೆ? ಕೆಳೆಯರೇಡಿಸರೆ? ಚಲಕಂ ತೋಳ್ವಲಕಂ ಕುಂದಾಗದೆ? ಎನ್ನ ಮೇಣೆನ್ನ ಪೆನ್ನ ಪಿಳುಕಿನ ಕೋಲ ಬಾಲಿಶಮಂ ನೋಡೆಂದು ಜಡಿದು ನುಡಿದೊಡನಯ್ಯನಂ ಪಿಡಿದು ಬಡಿವ ಕಲಿಯುಗದಱಿವಾಳ್ಕೆಯ ಕೂಟಿ ಮಕ್ಕಳೊಂದು ಮಾಳ್ಕೆಯಿಂ ದಾದುರ್ಪ ಪೊಯ್ದಂ.

ಆಃ! ಏತಱೊಂದು ವಿಧಿಯ ಬದಗಾಟಮೊ! ತನಗಯ್ಯನೆಂದಱಿದನಪ್ಪೊಡೆ ಕುಶಂ ವಿಶಿಖಮನಿಸುವನೆ? ಪೋರ್ವನೆ? ಬಯ್ವನೆ? ಪೊಯ್ವನೆ? ತಂದೆ ಮಕ್ಕಳೊಂದು ಪೊರುಡಿಗಿದುವೆ ಮೊದಲಾಯ್ತೇ! ಆನಿತಱೊಳ್ ರಾಘವಂ ಕೂರ್ಗಣೆಯುಂ ಮಾರ್ಗಣೆಯಿಂ ತುಂಡಿಸಲೊಡಂ ತರಳಂ ಮೇಣೊಂದು ಮಾರ್ಗಣಮಂ ಸೆಳೆದಿಟ್ಟಂ. ಮತ್ತಮೊಂದಂ ಮುಗುಳ್ದುಮೊಂದಂ ಪೆಱತೊಂದಂ ಬೇಱೊಂದಂ. ಇಂತು ರಾಘವನೊಡನೆಸುಗೆಯಿಂ ತಳ್ತೆಸುಗೆಯಂಗೆಯ್ವುದುಂ ಮನಸುಂ ಕೋಪದಿಂ ಚಾಪಮಂ ತುಡುಕಿ ಸಂದ ಬಾಣಮಂ ಸಂಧಿಸುವುದುಮಾ ಬಾಣಂ ಮೊಣದೆಯ್ದಿ ಗುಱಿಗೆಟ್ಟು ಬಂದತ್ತು. ಏನೊಂದಚ್ಚರಿಯೊ! ದಿವಿಜದನುಜಮನುಜರೊಳಂ ಮೊನೆಯೊಳಳ್ಕದ ಬಳ್ಕದತಿಕಾಯನಂ ಹತಕಾಯನಂ ಗೆಯ್ದಂಗೆ ತನ್ನೊಂದಳ್ಕೆಯಿಂ ಬವಿರ್ಲಮಂ ತಳಮುಳಂಗೆಯ್ದುಂ ಬಿಡುಗಣ್ಣರೊಡೆಯನ ಪಡೆಯುಂ ದೆಸೆಗಿಡಿಸುಬ್ಬರವಬ್ಬರದಿಂದಾರ್ರಿ

ಯುಂ ಮಾರಿಯ ಬಾಱಿಗನಂ ಮಾಡಿದಂಗೆ ಲಕ್ಷ್ಮಣಂಗೆ ಕೊರೆವ ಸಬುದವಂ ಸಿಂಗದ ಗರ್ಜನೆಗೆತ್ತು ಗಜಂಗಳಳಱಿ. ಸುಯ್ಯ್ವ ಸುಯ್ಲ ಸುೞಿಗೆ ನೆಲೆಗೆಟ್ಟು ಮುಱಿಮುಱಿಯಾಗಿ ನಿಡುಗಂಬಂಗಳ್ ತೇಂಕೆ ತಿರೆಯೊಳಂದೊಱಗಿದ ಬಿಂಜವೆಟ್ಟಿನೆ ಬೆಟ್ಟನೊಱಗಿದ ಕುಂಭಕರ್ಣನೊವರ್ಯುಂ ಪೈಮಱಿದೆಬ್ಬಿಗ್ರಜನ ಪರಿಭವಕ್ಕೊಳಱಿ ಕಡೆಗಾಲದ ಬಿಗುವರ್ರಿಜನೊಂದಾಟೋಪದಿಂ ಮೊನೆಯೊಳಿದಿರ್ಚಿದೊಡವನಂ ಜವನಂದಿಗನನಾಗಿಸಿದ ರಕ್ಕಸವಲ್ಲಣಂಗೆ ಈರೇೞುಂ ಲೋಕಮುಂ ಗೆಲ್ಲಂಗೊಂಡು ಭುಲ್ಲವಿಸಿ ಬಲ್ಲಿದನೆಂಬ ಗಂಡಗರ್ವದಿಂ ಪೊಣರ್ವ ದಶಾನನನೊಡಲಂ ಕಡಲಮೀಂಗಳ್ಗೆರೆಯನಾಗಿಸಿ ಮೆಱೆದಾಹವಮಲ್ಲ ರಾಮಂಗಿಂದು ಚಿಣ್ಣರಾಟದ ಕೂಟದ ಪಸುಳೆಗಳತ್ತಣಿಂ ಸೋಲಂ ಗಡ! ಲಕ್ಷ್ಮಣನಸಿ ದಸಿಯಾಯ್ತು ಗಡ! ರಾಮಬಾಣಕ್ಕೆ ಮಣಿಯರ್ ಗಡ!

ಎನ್ನ ಕಣ್ಣೇ! ಪೆಣ್ಣೇ! ಇಂತು ಕುಶಲವರ್ ಬಾಂಬಟ್ಟೆಗರೊಟ್ಟಯಿಸಿ ನೆರೆದು ಬೆಱಗುವಡುವಿನಂ ರಾಮಲಕ್ಷ್ಮಣರೊಳ್ ಕಡುಕೆಯ್ಯುತಿರಲೊಡಮಾವೇಳೆಗತ್ತಲ್ ವರುಣಲೋಕಕ್ಕೆ ಪೋದ ವಾಲ್ಮೀಕಿ ಬಾಲಕರಿರವಂ ನಾರದನತ್ತಣಿನಱಿದು ಮಾಣದೆ ತನ್ನಾಶ್ರಮಕ್ಕೆ ಬರೆ ಅಲ್ಲಿ ಮಕ್ಕಳ ಬಟ್ಟೆಯನೆ ನಿಟ್ಟಿಸುತೆ ಹಂಬಲಿಸಿ ಬೆಬ್ಬಳೆವೋಪ ಸೀತೆ ಮುನಿಯುಂ ಕಂಡೆಱಗಿ ಲವನನರಿಗಳ್ ಹಯದ ನೆವದಿಂ ಬಂದಿಗೊಂಡುದಂ ಮೋಹಾತನಂ ಮಗುಳ್ಚ್ವೊಡೆಂದು ಕುಶಂ ನಿಶಿತವಿಶಿಖವಿಸರವಿಲಾಸಿ ಬೆಂಗೊಂಡುದನಿನ್ನುಂ ಬಾರದೆ ತಡೆದುದಂ ಬಿನ್ನಯಿಸಿದಳ್. ಅವರ್ಕಾಮುನಿಪಂ ಸೀತೆಯುಂ ಸೈತಿಟ್ಟು ಮಕ್ಕಳಂ ಕೂಡಿವರ್ಪೆನೆಂದು ಪ್ರೊಱಮಟ್ಟು ಬರುತ್ತುಮಿರ್ದಂ.



ಇಂತು ಬರುವರುತ್ತುಮಿರಲೊಡಂ ಎನಸುಂದೂರದೊಳ್ ಮುಱಿಪಟ್ಟೆಯು, ಸುರಿದ ಕರುಳ್, ಒಱೆದ ಬಸೆಯು, ಕೊಱೆದ ಸುಂಟಿಗೆಯು, ಪರಿದ ಕೆನ್ನೀರ ಪೊಣಸ ಬಣಂಬೆ ಜವನುಂಡು ಕಾಱಿದ ಮಾಟ್ಕೆಯಿಂ ಕಾಣಿಸಿದತ್ತು. ಕೆನ್ನೀರ ಮುನ್ನೀರ ಸೇತುವಿಂಗಿಂತು ಕಿಱುವೆಟ್ಟುಗಳಂ ಪೊಸತೆನೆ ಪಱಪಿದರೆನೆ ಏಱುಗೊಂಡು ಮಡಿದಾನೆವಿಂಡೆಸೆ

ದತ್ತು. ಇಂತೊಪ್ಪುವ ರಣರಂಗಮಂ ಕಂಡು ಕೊಂಕಿ ಸಂಕಿಸಿ ಬರ್ಪ ಮುನಿಪಂಗೆ ರಣವಿಕ್ರಮಮೂರ್ತಿಗಳಂತೆ ಕೋಡದೆ ಬಾಡದೆ ಸಾಹಸಮಲ್ಲರೊಳ್ ಪೋಣರ್ಪ ಕುಶಲವರಂ ಕಂಡು ತಲೆದೂಗಿ ಸನಿಯಂ ಸಾರ್ದು- ಓ ಓ! ಮಹಾತ್ಮಾಣಿಮೆಂದು ನುಡಿದುಂ ತಡೆದುಂ ಮಕ್ಕಳಂ ತಳ್ಕೈಸಿ ರಾಮಲಕ್ಷ್ಮಣರ್ಗೆ ಕಾಣಿಸಿಕೊಂಡಂ.

ಮುದ್ದಣಂ- (ಮನೋರಮೆ) ಏನೆಲಗೆ! ಕಡೆಗೆ ಹುಂ ಗುಟ್ಟದೆ ಗುಜುಗುಮ್ಮನಿರ್ಪಯ್?

ಮನೋರಮೆ- ಮಕ್ಕಳ ಸೆರಗಿಲ್ಲದ ಸಾಸಕ್ಕೆ ಬೆಱಗುವಟ್ಟು ಇಸಿರ್ಪೆಂಟಿತ್ತುಂ ಕೆಮ್ಮನಿರ್ದೆಂ.

ಮುದ್ದ- ನೀನೊರ್ವಳೆ ಅಲ್ತು; ಬಾನೊಳ್ ಬರ್ದಿಲವೆಂಡಿರುಂ ಕಂಡು ಬೆಱಗುಗೊಂಡು ಬೆಂಡಾದರ್. ಅಂತಿರೆ ತಳ್ವದಾಗಳರ್ವರುಂ ಮುನಿಗೆ ಮಣಿವುದುಂ ವಾಲ್ಮೀಕಿ ಮುಗುಳ್ನಗೆಯಿಂ ರಾಘವಂಗೆ- ಓ ಓ! ಇನಿತೊಂದು ಜಗಕೆ ಪ್ರಸತೆನೆ ತಂದೆ ಮಕ್ಕಳ್ ನಿಮಗೆ ಸಂಗರಂ ಕಱಿವಾಯ್ತೇಂ! ಇಂತುಮೊಳವೆ! ಕಾದುವರುಂಟು ದಾಯಿಗರ್, ಪಗೆಗಳಗ್ರಜಾನುಜರ್. ತಂತಮ್ಮೊಳನ್ನೆಬರಂ ಕಂಡೆನಿಲ್ಲಂ ಕೇಳ್ದನಿಲ್ಲೀ ತೆಱನ ದೊರೆವೆತ್ತ ಸೆಣಸಂ. ಅಂತಲ್ಲದೊಂದು ನಿಮಗಮೇಂ ಜಗದ ಮಾಯದ ಜವನಿಕೆಯು ಬೆಗಡೊ! ನಿನ್ನ ಬಣ್ಣದ ರೂಪು ನಿನ್ನ ತಿಣ್ಣದ ಬಲ್ಪು ಪಣ್ಣಿದ ಪೋಣರ್ಕೆಯೊಳ್ ನಿನ್ನನೆಚ್ಚಱಿಸದೆ ಪೋದುವೆ? ನೀಂ ನಾಡೊಡೆಯನೆಂಬೊಂದುರ್ಕಿಂ ಸೊರ್ಕಿಂ ಕೈವಿಡಿದ ಮಡದಿಯುಂ ಬಗೆಯದ ನಿನಗೀಬಾಲರ ಕುಱುಪೆಂತುಟಕ್ಕುಮೆನಲೊಡಂ ರಾಮಂ- ಲಕ್ಷ್ಮಣನ ಮೊಗಮಂ ದಿಟ್ಟಿಸೆ;- ಜೀಯ! ಮುನಿಪಂ ಪೇಳ್ದಂತಾಗದಂದು ಕಾಡಾಡಿ ಮಕ್ಕಳ್ಗೀವಗೆಯು ತೋಳ್ವಲಮುಂಟಪ್ಪುದೆ! ನೋೞ್ಪೊಡೆ ನಿನ್ನಂ ಪೋಲ್ವರೆಂದಂ. ಅದರ್ಕಾರಾಮಚಂದ್ರಮಂ ಸೀತೆಯ ವಾರ್ತೆಯೇನೆಂಬುದುಂ; ಅನುಜಂ ಕೂಡಿಪ್ರೋದುದಂ ಕಾಡೊಱಳಪಿವಂದುದನಾಡಿ ತೋಱಿಪುದುಂ; ಮುನಿಪಂ ಸಮನಂತರದೊಳ್ ತನ್ನಾಶ್ರಮಕ್ಕುಯ್ದಾರಯ್ದುದಂ ಮೊಗಲ್ಗೆಯ್ದು ಅನುಳರೊಗೆಮಂ ಬಿಲ್ಗ

ಱಿಕೆಯ ಬಿನ್ನಣಮಂ ನಾನಾಬಿಜ್ಜೆಯಱಿವಂ ನಿರವಿಸಿ ಮುಗಿಸಿದಂ. ಆಗಳ್ಗಾಗಸದತ್ತಣಿಂ— ಇವರೀಬಾಲಕರಪ್ರತಿಮವೀರರ್. ನಿನಗೆ ಸೀತೆಯೊಳ್ಪುಟ್ಟಿದರಿವರನೊಪ್ಪುಗೊಳ್ಳೆಂದು ಮಱೆನುಡಿ ಪುಟ್ಟಲೊಡಂ ಸುರರ್ ಪೂಮೞೆಗಱೆದರ್.

ಮತ್ತಂ ರಾಘವಂ ಸಿಗ್ಗಿಂ ಕೆಮ್ಮನಿರ್ಪುದುಂ ವಾಲ್ಮೀಕಿ ಮಕ್ಕಳನಯ್ಯನಡಿಗೆಱಗಿಸಿ-ಇವರೊಳೀನನ್ನೆಯಂ? ನಿನ್ನಂ ಮೀಱಿದ ತೋರದ ಬಲ್ಪಿನ ಬಾಲರೆಂಬ ಜಸಂ ಜಗಮಱಿಯೆ ಪರ್ಬಿದತ್ತು. ಅಪ್ಪ ಬರ್ಪ ಜಯಪರಾಜಯಂಗಳಂ ನೀನಱಿಯದುಂಟೆ! ನಿನ್ನ ಲೀಲೆಗೇನೆಂಬೆನೊ! ಎಂದಂ. ಆಗಳ್ ಸಂತಸದಾಲಿನೀರ್ ಕಾಲ್ಪುರವಾಗೆ ನವಿರ್ ನಿಗರವಾಗಿ ಗುಡಿಗಟ್ಟೆ ಮಣಿದ ಮಕ್ಕಳನಿರ್ವರುಮನೆತ್ತಿ ತೊಡೆಯೊಳ್ ಕುಳ್ಳಿರಿಸಿ ತಳ್ಕೈಸಿ ಮುದ್ದಿಸಿ ಮುಂದಾಡಿ ಶಿರಮನಾಘ್ರಾಣಿಸಿ ಮುಂಗುರುಳಂ ನೇವರಿಸಿ ಮೆಯ್ದಡವಿ ತನಯರ ಮೆಯ್ಯೊಂಕಿನೊಂದು ಹರವಸದಿಂ ಬಗೆಯುಬ್ಬಿದ ರಾಘವಂ— ಎಲೆಲೆ ಬಾಲಕರಿರ! ನಿಮಗೀಜಾಣ್ಮೆಗಾವುದು ಮೊದಲ್ ಪೇೞಿಮೆಂಬುದುಂ; ಎಮಗೀ ಅಜ್ಜನುಪದೇಶಿಸಿದ ರಾಮಾಯಣಮೆ ಮೊದಲಾಯ್ತೆಂದರ್. ಆಗಳ್ ವಾಲ್ಮೀಕಿ ತಾನವಿತಾನವಿನಿನಂ ಕಱೆಯೆ, ಕೊರಲುಂ ಬೆರಲುಮೊಂದಾಗಿ ಬೆರೆಯೆ, ಲಯಮನೆಡೆಸದ ತಾಳದ ಮೇಳವದಿಂ ಪತ್ತುಂಬಗೆಯ ಗಮಕಂಗಳೋಜೆಯಿಂ ಶುದ್ಧಮಿಶ್ರಸಂಕೀರ್ಣಂಗಳೆಂಬ ಪಲವುಂ ಬಗೆಯ ರಾಗಂಗಳೊಳ್ ಬಾಜಿಪ ಬಾಣಿಯ ಬೀಣೆಯಿಂಚರಕೆ ನೆರವಪ್ಪೊಂದು ಭಂಗಿಯಿಂ ಬಾಲಕರಿಂ ರಾಮಾಯಣಮನೊಪ್ಪಿಸಿದಂ. ದೇವರ್ಕಳ್ ಹಿಗ್ಗಿದರ್; ದೇವಾಂಗನೆಯರೊಗ್ಗಿದರ್; ದೇವಗಾಯಕರ್ ಸಿಗ್ಗಿನೊಳಾದರ್; ತುಂಬುರನಾರದರ್ ಮುಗ್ಗುರಿಸಿದರ್. ಅನಿತಱೊಳ್ ಮುನಿಪಂ ತನ್ನ ಗುಂಡಿಗೆಯ ನೀರಂ ತಳಿದು ಮೆಚ್ಚೆವ್ರೋದರನೆಚ್ಚಱಿಸಿದಂ. ಈಗಳ್ ಸರ್ವರುಂ ಪುರಕೆ ಬಿಜಯಂಗೆಯ್ದರ್.

ಮನೋ— ಏಂ ಸೀತೆಯುನಿನ್ನುಂ ಕೂಡಿ ಪೋಗನೆ? ಉೞಿದೆ ಪೋದನೆ ರಾಮಂ?

ಮುದ್ದ— ಓ! ಇನ್ನುಮುಱುವನೆ ಸತಿಯುಂ! ಈಪೊೞ್ತಿಂ ತನ್ನರಸಿಯ ಉಱುಗಿಲ್ಲದ ನಡೆಗೆ ದೇವರ್ಕಳಂ ಸಾಕ್ಷಿಗೊಟ್ಟು ಆಗಳ್ ತನ್ನತನ್ನೆಯನುಂ ಮನ್ನಿಸೆಂದು ನನ್ನಿವೇೞ್ದು ಸಂತಮಿಟ್ಟು ಸುದತಿ ಸೀತೆಯಂ ಪೊನ್ನ ಸಿವಿಗೆಯೊಳೇಱಿಸಿ ದೇವರ್ಕಳ್ ಪೊಗೞೆ ತಾನುಂ ತನ್ನವರುಂ ಆಶ್ರಮದ ಮುನಿಗಳೊಂದುಗೂಡಿ ಪೋದ.....

ಮನೋ— ಓ! ರಾಮನೊಳ್ಳಿದನಕ್ಕೆ! ಸೊಗಂಬಾೞ್ಗೆ! ರಾಮಂಗೆ ಗೆಲಮಕ್ಕೆ! ರಾಮನಂ ಕೊಂಡಾಡುಗೆ! ಜಸಂ ಪೆರ್ಚಿ ಪರಿಗೆ! ರಾಮನೊಳ್ ನನ್ನಿ ಸನ್ನಿದಮಾಗಿರ್ಕೆ!......

ಮುದ್ದ— ಇಂತು ರಾಮನಂ ನೀಂ ಪರಸುವ ಪರಕೆಯೆ ಸೊಗಸು! ಬೞ್ಸಗಸು!

ಕಥೋಪಸಂಹಾರಂ

ಮುದ್ದಣಂ— ಎನ್ನ ಪಟ್ಟದ ರಾಣಿ! ಇನ್ನೆತ್ತಂ ನಿರಾಮಯಂ, ನಿರಾಕುಳಂ; ಸುಭಿಕ್ಷಂ; ಶಾಂತಿ.....

ಮನೋರಮೆ— ಏನೆಲೆ ರಮಣ! ಇಂದಿದೇನೆತ್ತಣ ಶಾಂತಿಗೀಂತಿಗಳ್?

ಮುದ್ದ— ರಾಘವನ ಜನ್ನ ಗುದುರೆ ಬರಿಸಂಬರಂ ಬಿಡದೆ ಚರಿಸಲೊಡಂ ಖುರಪುಟದ ತುಱಿತಕ್ಕೆ ಪಾವನಮಾದ ನಾಡ ಜನರ್ಗೆತ್ತಂ ಮಂಗಳಮೊಂದೆಂ. ಕಟ್ಟಾಯಸವ ನಿಚ್ಚವಯಣವುಂ ಬನ್ನವಟ್ಟೆಯ ಬೞಲ್ಕೆಯುಂ ಗಾಳುಗೂೞಿರೊಳ್ ಪೊಣರ್ವ ಗನ್ನನಿಟ್ಟುರದ ಸೆಣಸಾಟಮುಂ ರಾಮಸೇನೆಗೆ ಮುಡಿದುದು. ಈಗಳ್ ತಂತಮ್ಮ ಬೀಡಿಂಗೈದಿವಂದುಂ ಬೀರರೆಲ್ಲರ್ ನೇಹಂಮಿಗೆ ತಂತಮ್ಮರಸಿಯರಿನೋಲೈಸಿಕೊಳ್ವರ್.

ಮನೋ— ಅಂತಪ್ಪೊಡೆ ನೀಂ ಪೇೞ್ವ ಸಲ್ಗತೆ ಮುಗಿಯೆ ವಂದುದು.

ಮುದ್ದ— ಉಂ! ಎಂತೆಂತೊ ರಗಳೆಯ ಪಾೞ್ಗತೆ ಕಡೆಗಂಡುದು.

ಮನೋ— ಛೀ! ಶ್ರೀರಾಮಪುಣ್ಯಚರಿತಮಂ ಪಾೞ್ಗತೆಯೆಂದು ಇೞಿಕೆಯ್ದು ತೆಗೞ್ವೆ!

ಮುದ್ದ— ಶ್ರೀರಾಮಚರಿತಮನಿಱಿಸಿ ಕುಱಿಸಿ ನುಡಿದೆನಿಲ್ಲಂ. ಪುರುಳಿಲ್ಲದ ಸಲ್ಲದ ಪೊಲ್ಲನೆನ್ನ ಬಱುವಣ್ಣನೆಯು ಬೇಸಱಿಕೆಯು ಪಾೞಿಬ್ಬಮಂ ಪೊಳ್ಳೆಂದೆ ನುಡಿಬೆಂ.

ಮನೋ—(ಸವಿನಯಂ) ತಮ್ಮೊಡಮೆಯುಂ ತಾಮೆ ಪೊಗೞ್ವರೆ ಬಲ್ಲರ್? ಅಲ್ಲದಂದು ನವರಸದ ತನಿರಸಮೊಱೆವ ಬಣ್ಣಗಬ್ಬಮಂ ಪೊಳ್ಳೆಂಬೊರೆನ ನಿನಗಮೇಂ ನಿರಹಂಕೃತಿಯೊ ನಿನ್ನಾಜಾಣ್ಮೆಯೊಳ್.

ಮುದ್ದ— ಏನೆನ್ನ ಕಬ್ಬಂ ನಿನಗೆ ಮೆಚ್ಚುಗೆಯಾಯ್ತೆ?

ಮನೋ— ಎನಗೊರ್ವಳ್ಗೆಂದೊಡೇಂ. ನಾಡೊಳೆಲ್ಲರ್ಗಂ.

ಮುದ್ದ— (ನಕ್ಕು) ಎನ್ನೊಳೊಂದಭಿಮಾನದಿನಿಂತುಸಿರ್ವೆಯಕ್ಕುಂ.

ಮನೋ— ಎನ್ನ ಮುದ್ದಿನರಸ! ಅಂತಲ್ತು; ನಿನ್ನ ಪೆಸರೆಂತಂತು ಕಬ್ಬಮುಂ ಮುದ್ದುಮುದ್ದಾಯ್ತು ಜಗಕೆ.

ಮುದ್ದ— ಇಂತೀನುಡಿಯಿನೆನ್ನಂ ನೀನೇಱಿಪಂತಿರಿರ್ಕುಂ.

ಮನೋ— ಉಃ! ಉಃ! ಗುಣದೊಳ್ ಪುರುಡುಂಟೆ? ಸಾಜಂ. ನಿನ್ನೀಜಾಣ್ಮೆಯ ಬಣ್ಣನೆಯು ನಲ್ಗತೆ ಕೇಳ್ವರನೆಂತಪ್ಪರುಮಂ ಬಗೆಯನಿರ್ಕುಱಿಗೊಳ್ಗುಂ; ನಾಡ ಮಾತೇಕೆ! ಎನಗೆಂತೋ ಮೇಣುಂ ಮೇಣ್ ಕೇಳ್ವೆನೆಂಬೊಂದಾಸೆ ಪುಟ್ಟುಗುಂ.

ಮುದ್ದ— ಎನ್ನಾಣೆ!

ಮನೋ— ನಿನ್ನಾಣೆ! ಕಡೆಯೇಂ? ಕಮ್ಮಲರ್ ಮಗಮಗಿಸದೇಂ ಪೋಕುಮೆ!

ಮುದ್ದ— ಮುತ್ತಬ್ಬೆಯಾಣೆ!

ಮನೋ— ಮುತ್ತಬ್ಬೆಯಾಣೆ! ಇಸ್ಸಿ! ಪುಸಿಯನೇಂ ಪೊಱ್ತಂಗಮುಸಿರೆಂ. ಈಬಗೆಯ ನುಡಿಗಬ್ಬಂ ಮುಂತಿಲ್ಲ ಪಿಂತಿಲ್ಲಮೆಂದಾಯ್ತು.

ಮುದ್ದ— ಎಂತುಂ ನಿನಗೆ ಸೊಗಸಾಯ್ತಲೇ! ಇದುವೆ ಪರಮಾನಂದಮೆನಗೆ.

ಮನೋ— ಬಿನ್ನಣದ ಬಣ್ಣನೆಯ ನುಡಿಯಲ್ತು; ಬಲ್ಲೊಗಸು ಬಲ್ಲೊಗಸು ನೀನೆಂದ ಕತೆ.

ಮುದ್ದ— ಅಂತಪ್ಪೊಡೆ ತಾರೆಲೆ ನೀನೆಂದ ಮೆಚ್ಚಿನುಡುಗೊಱೆಯಂ.

ಮನೋ— (ಕಣ್ಬೆಗಡುಗೊಂಡರಂತೆ ನಟಿಸಿ) ಇನ್ನೇಂ ಜಾಣನೊ! ನೀನಱಿಯದರಂತೆ ಮಿಣ್ಣನಿರ್ದುಮೆನ್ನಿಂದೆನ್ನಂ ಕಟ್ಟಿಸಿದ ದಿಟ್ಟಂ. ನಿನಗೇನೆಂಬೆನೇನೆಂಬೆನೊ! ನಿನ್ನಾ ಬಣ್ಣವಾತಿಗೆ ಮಾಱುವೋದೆಂ (ಎಂದು ವಿಚಾರದಿಂ) ಆಯ್ತಾಯ್ತು ಪೇಳ್ದ ಕತೆಗೆ ಮಂಗಳಮಂ ಮಾಡು; ಮೆಚ್ಚುಗಿಚ್ಚು ಬೞಿಕ್ಕಮಲ್ತೆ.

ಮುದ್ದ— ಒಱೆದೆ ಮಂಗಳಮುಕ್ಕುಮೆ! ಹೋಳಿಗೆ ತುಪ್ಪಮಂ ತಿನೆ ವಡಿಸವೇಡಾ!

ಮನೋ— ಹೋಳಿಗೆತುಪ್ಪಕ್ಕಿಂದೇಂ ನಿನಗೆ ಶೋಭನಮೆ?

ಮುದ್ದ— ಇಂದೆನಗೆಂದೊಡೇಂ? ಎನಗಂ ನಿನಗಂ.

ಮನೋ— ಪೋ ಸಾಲ್ಗುಮೀಬಣ್ಣದ ಕೊಂಕುನುಡಿ. ರಾಘವನ ಯಜ್ಞಮೆಂತು ಪರಿಸಮಾಪ್ತಿಯಾಯ್ತು. ಪೇೞ್,

ಮುದ್ದ— ಶೋಭನಾಂಗೀ! ಅಂತು ರಾಘವಂ ಸತಿಸುತರ್ವೆರಸು ಅಯೋಧ್ಯೆಗೆ ಪೋಪುದುಂ ಕೆಲವಾನುಂ ದಿನಕೆ ಜನ್ನಗುದುರೆಯುಂ ಪೊಱಲ್ಗೆ ಮುಮ್ಮೊಗಮಿಕ್ಕಿ ನಡೆದತ್ತು. ಕಾಪಿನ ಬಲ್ಪಡೆಯುಂ ಬೞಿಸಾರ್ದುವಂದುದು; ಶತ್ರುಘ್ನಪ್ರಮುಖವೀರವರ್ಗಮುಂ ತೆರಳ್ದನು. ಓಓ! ಇದೆತ್ತಣ ಕಪ್ಪಕಾಣ್ಕೆಗಳೊ! ಪೊನ್ನೇಂ, ಪೊಂದೊಡವೇಂ, ರನ್ನಮೇಂ, ಬಗೆವಗೆಯ ಪಟ್ಟುಡೆಯೇಂ, ಆಣಿಮುತ್ತಿನ ಜಾಳಿಗೆಯೇಂ! ಕತ್ತುರಿಯ ಪೊಱೆಯೇಂ! ಕಪ್ಪುರದ ಮುಡಿಯೇಂ! ಜಾತ್ಯಶ್ವಂಗಳೇಂ! ಭದ್ರಗಜಂಗಳೇಂ! ಕಾಣಬಾರದ ವಿನೂತ್ನವಸ್ತ್ರರಂಗಳೇಂ! ಬೆಂಗೆ ಬೆಂಗೆ ಪೂಡಿದಂತಿರೂರುದ್ದಮಾದ ಓರಣದಿಂ ಬರ್ಪ ಬಂಡಿಗಳೇಂ! ಅಳವಿಗೞಿದ ಮಂಡಳಿಕರ ನೆರವಿಯೇಂ! ಬಱಿದೇಂ ಪಿರಿದೇಂ ರನ್ನೆ! ನಾಡೊಳುಳ್ಳ ಐಸಿರಿಯೆತ್ತಮೊಂದುಗೂಡಿ ತನ್ನಮ್ಮಣ್ಮರಂ ಮುಂದುಮಾಡಿ

ಜನ್ನದ ಪೇರುಕ್ಕೆವಮಂ ಕಾಣ್ಬೊಡೆಂದು ಪುಗಿಲುಮುಟ್ಟ್ಯು ಪೊಪಂತಿ ರಾಯ್ತು. ಇಂತು ಬಂದು ಪೊರಿಲ್ಗೆ ಗಾವುದದಳತೆಯೊಳ್ ನಿಂದು ದಿಗ್ವಿಜಯಂಗೆಯ್ದು ಬಂದೊಸಗೆಯಂ ಪೇಳ್ದಿಟ್ಟಲೊಡಂ, ರಾಜಕಾರ್ಯನಿರತಂ ಭರತಂ ಅವರೆಲ್ಲರಂ ಮನ್ನಿಸುತಪ್ಪಿಳಿಸಿದಿಗೊಂಡು ರಾಘವಂಗೆ ಕಾಣಿಸಲೊಡಂ ಬೇಱೆವೇಱೆ ಬಂದ ಸಾಮಂತರಂ ಸತ್ಕರಿಸಿ, ಮಂಡಳಿಕರಂ ಕೊಂಡಾಡಿ, ತನ್ನ ಕಿಱಿಯಮ್ಮನ ಸಾಸಮಂ ಪೊಗೞ್ದು, ಪುಷ್ಕಲನಂ ಮೆಚ್ಚಿ, ಲಕ್ಷ್ಮೀನಿಧಿಯಂ ಮನ್ನಿಸಿ, ಮಿಕ್ಕುೞಿದ ವೀರರಸುಪಚರಿಸಿ, ಸರ್ವರಂ ಬೀಡಾರಕ್ಕೆ ಬೀಳ್ಕೊಟ್ಟಂ.

ಮಱುದಿವಸಂ ಬೇಳ್ವ ಜನ್ನಕ್ಕೆ ಪೂರ್ಣಾಹುತಿ ಪೊೞ್ತೆಗೆ ಮುನ್ನಮೆ ಸರ್ವಸಂಭಾರಮೋಪರ್ಣಟ್ಟುದು. ಬಂದ ವಿಪ್ರರ್ಗೊಂದು ಸಭೆ; ಮುನಿಜನಂಗಳ್ಗೊಂದು ಸಭೆ; ರಾಜನ್ಯರ್ಗೊಂದು ಸಭೆ; ಪುರದ ಪುರಂಧ್ರಿಯರ್ಗೊಂದು ಸಭೆ ಯೋಜನದಳತೆಯೊಳಾಯ್ತು. ಈಗಳ್ ಯಾಗಶಾಲೆಯೊಳೆಣ್ದೆಸೆಯೊಳಂ ಬಾಗಿಲೊಳೋರಿರ್ವರ್ ಮುನಿಗಳ್ ರಕ್ಷೋಘ್ನಸೂಕ್ತಮಂಪಠಿಸುತ್ತೆ ಕಾಪಲರೆಸೆದರ್. ಮತ್ತಮೀರೆಣ್ಬರ್ ಯಾಜಕರೋರೊಂದು ದೆಸೆಯೊಳ್ ಸಾಮಗಾನಮಂ ಪಾಡುತುಮುದ್ಗಾತೃಗಳುಮೊಂದೆಸೆಯೊಳ್ ತಂತ್ರಮಧ್ವರ್ಯುಗಳುಮೊರ್ದೆಸೆಯೊಳ್ ಹೋತಾರರುಮೊಪ್ಪಿದರ್. ವೇದಘೋಷಂ, ವಾದ್ಯಘೋಷಂ ನೃತ್ಯಘೋಷಮೆತ್ತಂ ದಿಕ್ತಟಮಂ ತುಂಬಿದುದು; ಕೊಂಡಬೊಳನ್ನೆ ಬರಮೆಡೆವಿಡದೆ ಚಟಚಟಿಸ ಬೇಳುರಿ ನಾಲಗೆಗಳಂ ನೀಡಿಕೊಂಡಿರ್ದುದು.

ಈಗಳೀಗಳ್ ಮಂಗಳಂ; ದೆಸೆವಳರ್ ಮೊಯ್ದೊಱೆ ಜನ್ನಕ್ಕೆ ಬಂದು ತಂತಮ್ಮ ಪಸುಗೆಯಂ ಮನಂ ದಣಿಯೆ ಕೈಯಾಱಿ ಕೊಂಡರವರ್ಗಂ ಮಂಗಳಂ. ಋತ್ವಿಜರೆಲ್ಲರ್ ಕೊಳಗ ಮತ್ತಮಿರ್ಬಳ್ಳ ಧನ್ನಮಂ ಪೊನ್ನ ಪೇಱಂ ಚಿನ್ನಾಕಳಂ ಪ್ರತಿಗ್ರಹಿಸಿ ರಾಮನಂ ಪರಸಿ ಬೀಳ್ಕೊಂಡರವರ್ಗಂ ಮಂಗಳಂ. ಮುನಿಗಳೆಲ್ಲರ್ ನರಲೀಲೆಯ ಪರಬೊಮ್ಮನಂ ಕಣ್ದಣಿಯೆ ಕಂಡೆವೆಂಬೊಂದು ಸಂತಸದಿಂ ನಲಿನಲಿಯುತೆ ತವಮಾಶ್ರಮಕ್ಕೆ ಪೋದರವರ್ಗಂ ಮಂಗಳಂ. ಮೂಗುದ್ದ ಮುಂಡುಂಡು

ತೀಗಿ ಕೊಟ್ಟ ದಕ್ಷಿಣೆಯಂ ಪೊತ್ತುಬ್ಬಸಂಬಡುತೆ ನಡೆದರ್ ಪಾರ್ವರವರ್ಗಂ ಮಂಗಳಂ. ಪೌರಪೌರಂಧ್ರಿಯರ್ ಶ್ರೀರಾಮನ ದಿವ್ಯಮೂರ್ತಿಯಂ ಕಂಡು ಸಂತಸಂದಾಳ್ದು ತಾಂ ತಮಗೆ ಮಾತುಗುಟ್ಟುತಿರ್ದರವರ್ಗಂ ಮಂಗಳಂ. ಕೊಂಡಾಟದ ಮಾಸಾಮಂತರ್ ತಮಗೆ ದೊರೆವಡೆದ ಗಜರಥತುರಗವಿಭೂಷಣಾದಿಗಳಂ ಕೈಕೊಂಡು ರಾಘವಂಗೆಱಗಿ ಆತನಡಿಯಾಣತಿವಡೆದು ಪುರಕೆ ಬಿಜಯಂಗೆಯ್ದರವರ್ಗಂ ಮಂಗಳಂ. ಇಂತು ಶ್ರೀರಾಘವಂ ಸೀತಾಸಮೇತಂ ಜನ್ನಮಂ ವೇಳ್ದು ತನ್ನೊಂದು ಬೆಳ್ಜಸದಿಂ ದೆಸೆಮೂಲೆಗಳಂ ಬೆಳಗಿಸಿ ಸೋದರವೆರಸು ಪಲವುಂ ಪಗಲರಸುಗೆಯ್ಯುತ್ತುಮಿರ್ದನವಂಗಂ ಮಂಗಳಂ ಶುಭಂ ಭದ್ರಂ ಕಲ್ಯಾಣಂ.

ಮುದ್ದಣಂ— (ಅನಿತಱೊಳ್ ಮನೋರಮೆ ಎೞ್ದು ಪೋದಳ್)— (ಎೞ್ದು ಪೋಪಳನೀೞ್ದು ಮಾಣಿಸಿ) ಬಳ್ಸಿಡಕುಗಾತ್ರಿ ಕಣಾ! ಮುದ್ದಣನುಮಂ ಟಕ್ಕಿಪ ಪೆಂಡಿರೊಳರೆ? ಕೊಂಕುನುಡಿಯೊಂದು ನೆವದಿಂ ಬಿಂಕದಿನೆಬೊರ್ಗಡಾಯ್ತು! ಮೆಚ್ಚನಿತ್ತಲ್ಲದೆ ಪೋಪ್ಪುದೇಂ ಬಿಡುವೆನೆ!

ಮನೋ— ಕತೆಗೆ ಮಂಗಳಮಂ ಮಾಡದೆ ಬಱಿದೆ ಉಡುಗೊಱೆ ತುಡುಗೊಱೆಯೆಂದೊಡೇಂ ?

ಮುದ್ದ— ಕತೆಗೆ ಮಂಗಳಮನಾಗಳೆ ಪೇೞ್ದೆನುಱಿದೆನಿಲ್ಲ. ಈಗಳುಱಿವುದೊಂದೆ ನಿನ್ನುಡುಗೊಱೆ.

ಮನೋ— ಉಡುಗೊಱೆಯ ಕಾಟಕ್ಕಿನ್ನೆತ್ತವೋಪೆಂ! ನೀನೇಂ ಬೇಡುವಯ್?

ಮುದ್ದ— (ಪುಸಿಮುನಿಸಿಂ) ಬೇಡುವೆನೇಂ ತಿರಿಕನೆ? ಮನೆಗೆ ಬಂದನೆ ? ಮೆಚ್ಚಿತ್ತೊಡವನೆ ಕೈಕೊಳ್ವೆಂ.

ಮನೋ— ಆನೆಂತುಂ ಪರಾಧೀನೆ. ಮೇಣೆನಗೊಡಮೆಯಾವುದು? ಏನನೀವೆನೆಂತೀವೆಂ ?

ಮುದ್ದ— ಏನೊ ! ಎಂತೊ ! ಆಂ ಮೆಚ್ಚುವಂತುಂ, ಕತೆಯ ಪ್ರ

ರುಳ್ಗೋವಂತುಂ ನಾಲ್ವರ್ ತಲೆದೂಗುವಂತುಂ ಉಡುಗೊಱೆಗೆಯ್ದೊಡಾಯ್ತು.

ಮನೋ— ಅಂತಪ್ಪೊಡಿಂತಿದು—...... ನಿನ್ನೀಕಬ್ಬಮನೋದುವ ಜಾಣರೀವಗೆಯುಡುಗೊಱೆಯನೀಯೆಂಬರಾವಗೆಮೆಚ್ಚನೀವೆಂ.

ಮುದ್ದ— ಅಂತಾನುಮಕ್ಕೆ ! ಪ್ರೇಸಂ.

ಧರೆಯುೞಿಯೆ ಜೀವರಾಶಿಗೆ ।
ಪಿರಿಯಂ ನರನಾದಮಾದನಾತ್ಮಂ ತನ್ನೊಳ್ ॥
ದೊರೆಕೊಂಡಿರ್ಪನಮಂತದು ।
ಪರಿನಿರ್ಮಲನಾಗೆ ಪಿರ್ಮೆಯಿರ್ಮೆಯ್ವಡೆಗುಂ ॥

ಎಂಬಲ್ಲಿಗೆ

ಶ್ರೀರಾಮಾಶ್ವಮೇಧದೊಳ್

ಕಥೋಪಸಂಹಾರಂ ಷೋಡಶಾಶ್ವಾಸಂ ಸಂಪೂರ್ಣಂ.

ಶ್ರೀ ರಾ ಮಾ ಶ್ವ ಮೇ ಧಂ

ಸಂ ಪೂ ರ್ಣಂ.

# ಕರ್ಣಾಟಕ ಕಾವ್ಯಮಂಜರಿ.

ಕನ್ನಡದ

## ಅದ್ಭುತ ರಾಮಾಯಣಂ.

[೧೪]

ಎಸ್. ಜಿ. ನರಸಿಂಹಾಚಾರ್,
ಮ. ಆ. ರಾಮಾನುಜೈಯಂಗಾರ್,
ಇವರಿಂದ ಟಿಪ್ಪಣದೊಡನೆ ಪರಿಷ್ಕರಿಸಲ್ಪಟ್ಟು

ಕರ್ಣಾಟಕ ಕಾವ್ಯಮಂಜರಿ ಪ್ರೊಪ್ರೈಟರುಗಳಗಾಗಿ,

ಮೈಸೂರು

ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.

೧೮೯೬.

ಈ ಪುಸ್ತಕವು ಮೈಸೂರಲ್ಲಿರುವ ಕರ್ಣಾಟಕಕಾವ್ಯಮಂಜರಿ ಆಫೀಸ ಮ್ಯಾನೇಜಿಂಗ್ ಪ್ರೊಪ್ರೈಟರ್ ಮ. ಕುಮಾರಸ್ವಾಮಿ ತಿರುಮಲಾಚಾರ್ಯರಲ್ಲಿ ದೊರೆಯುತ್ತದೆ.

# ಪೀಠಿಕೆ.

---

ಈ ಗ್ರಂಥವು ಸಂಸ್ಕೃತದಲ್ಲಿರುವ "ಅದ್ಭುತರಾಮಾಯಣ" ವೆಂಬ ಪುರಾಣದ ವಚನರೂಪವಾದ ಕಥೆ.

ಇದನ್ನು ಕನ್ನಡಿಸಿದ ಕವಿಯ ಹೆಸರು ಗೊತ್ತಿಲ್ಲ. "ತಿರುಗನ್ನಡಿಗನಡಿದಾವರೆಯ ಬಂಡುಣಿಗಳಪ್ಪ ಕನ್ನಡಗಬ್ಬಿಗರ ಮನೆಯೂಳಿಗದವನೊರ್ವಂ ಕನ್ನಡಿಗಂ" ಎಂದು ಗ್ರಂಥಾಂತ್ಯದ ಗದ್ಯದಲ್ಲಿ ಕವಿಯು ಹೇಳಿಕೊಳ್ಳುತ್ತಾನೆ. ಈತನು ಕನ್ನಡ ದೇಶದ ಬ್ರಾಹ್ಮಣನಾಗಿರಬಹುದು. ಈ ಗ್ರಂಥವು ಉಡುಪಿಯ ಪ್ರಾಂತದಲ್ಲಿ ದೊರಕಿದುದರಿಂದ ಈ ಕವಿಯು ಬಹುಶಃ ಅಲ್ಲಿಯವನಾಗಿರಬಹುದು. ಈ ಗ್ರಂಥವು ಪ್ರಾಯಶಃ ಹಳಗನ್ನಡದಲ್ಲೇ ರಚಿಸಲ್ಪಟ್ಟಿದ್ದರೂ, "ಪೊರಡು" "ತಬ್ಬಲಿ" "ಅವುಗಳ" "ಹಾಯ್ಕಿದಳ್" "ಕಲಿಯುತೆ" "ಎಣ್ಣದಿರಿ" ಮೊದಲಾದ ಹೊಸಗನ್ನಡ ಪದಗಳೂ, ಮತ್ತು ಪ್ರಯೋಗಗಳೂ ಸಿಕ್ಕುವದರಿಂದ ಈ ಕವಿಯು ಸುಮಾರು ೧೫೦ ವರ್ಷಗಳಿಗೆ ಈಚೆ ಇದ್ದವನೆಂದು ತೋರುತ್ತದೆ.

ಪ್ರಕೃತದಲ್ಲಿ ಕನ್ನಡದಲ್ಲಿ ದೊರೆಯುವ ಉತ್ಕೃಷ್ಟ ಗದ್ಯಗ್ರಂಥಗಳಲ್ಲಿ ಈ ಗ್ರಂಥವು ಒಂದಾಗಿದೆ. ಇದರ ಶೈಲಿಯು ಲಲಿತವಾಗಿಯೂ, ವಾಕ್ಯಗಳು ಸರಳವಾಗಿಯೂ ಇರುವದರಿಂದ ಹಳಗನ್ನಡವನ್ನು ಅಭ್ಯಾಸಿಸುವರಿಗೆ ಇದು ಬಹಳ ಪ್ರಯೋಜನಕಾರಿಯಾಗಿದೆ.

ಈ ಗ್ರಂಥದ ಪ್ರತಿಯನ್ನು ದಯವಿಟ್ಟು ಕಳುಹಿಸಿಕೊಟ್ಟದುದಕಾಗಿ, ಕುಂದಾಪುರದ ಗೌರ್ನಮೆಂಟ್ ಬೋರ್ಡ್ ಹೈಸ್ಕೂಲ್ ಮ್ಯಾಸ್ಟರಾದ ಮ॥ ರಾ॥ ನಂದಳಿಗೆ ಲಕ್ಷ್ಮೀನಾರಣಪ್ಪನವರಿಗೆ ಬಹಳ ಕೃತಜ್ಞರಾಗಿರುತ್ತೇವೆ.

# ಶುದ್ಧಾಶುದ್ಧಪತ್ರಿಕೆ.

| ಪುಟ. | ಪಙ್ತಿ. | ಅಶುದ್ಧ. | ಶುದ್ಧ. |
|---|---|---|---|
| ೮ | ೧೦ | ಅಲಪ್ರೊಡೆಯು | ಅಲನ್ರೊಡೆಯು |
| ೯ | ೧೯ | ಚಕ್ರಶಾಯಿ | ಚಕ್ರಿಶಾಯಿ |
| ೧೨ | ೮ | ದಟ್ಟಿನೞಜ | ದಱನಟ್ಟಿಜ |
| ೪೧ | ೨೦ | ಬೞ | ಬೆರೆ |
| ೪೪ | ೬ | ವಸರಾ | ವೆಸರಾ |
| ೬೦ | ೩ | ದೂಳಗೆ | ದೂೞಗ |
| ೬೩ | ೧ | ಸೇನೆಯು | ಸೇನೆಯುಂ |
| ೬೪ | ೨೧ | ಪಲ್ಗಿಬಿ | ಪಲ್ಗಿಱ |
| ೬೮ | ೦ | ಅರಿ | ಅರಿ |
| ೬೯ | ೧ | ದೆಕ್ಕಲ | ದೆಕ್ಕಲ |
| ೭೩ | ೨೪ | ತೋಱ | ತೋರ |

ಊೞಗ, ಪೇೞಗೆ, ಪುತ್ತೞ— ಈ ಪದಗಳು ಹೀಗಿರಬೇಕು.

# ಅದ್ಭುತ ರಾಮಾಯಣಂ.

## ಪ್ರಥಮಾಶ್ವಾಸಂ.

ಈತಿರೆಯೊಳ್ ಆವಗಂ ಕಱಿವಣ್ಗಳಿಂ ಕಣ್ಗೊಳಿಪ ಪಣ್ಮರಂಗಳಿಂ, ಪಗಲುಮಿರುಳುಮುರಲ್ದು ಮಗಮಗಿಪ ನೀರ್ವೂಗಳಿಂ ದೆಸೆವ ಪೂಗೊಳಂಗಳಿಂ, ದಿಟ್ಟಿಸಿ ಮುಟ್ಟುವರಘಂಗಳಂ ಸುಟ್ಟುರಿಪುವ ತೀರ್ಥಂಗಳಿಂ, ಬಗೆವಗೆವಣ್ಣದಿನೊಪ್ಪುವಲರಿಂಬಿಡಿದ ಪೂವಳ್ಳಿಗಳಿಂ, ತಣ್ಣೆಲಲನೀವ ತೆಳ್ಮರಂಗಳಿಂ, ತಮ್ಮತ್ತಣಿಂ ಕಿಱುವೆಲರ್ ಸೋಂಕೆ ಕುತ್ತಮೆಲ್ಲಮನಱಿಯಿಪ ಮರ್ದುಗಿಡುಗಳಿಂ, ಪಗೆಯುೞಿದ ಮಿಗಬಳಗದಿಂ, ಇಂಚರಂಗೆಯ್ವ ಪಕ್ಕಿಗಳಿಕ್ಕೆಯಿಂ ತೋರ್ಪ ವಾಲ್ಮೀಕಿಮಹರ್ಷಿಗಳ ಮನೋಜ್ಞಂ ಪುಣ್ಯಾಶ್ರಮವೊಂದು ತಮಸಾನದಿಯ ತೀರದೊಳ್ ಪೆಸರ್ವಡೆದಿರ್ದುದು.

ಇಂತು ಮನಂಗೊಳ್ವ ತಾಣದ ರಿಸಿಗಳೊಳ್— ಅರೆಬರ್ ಒಂದೆಡೆಯೊಳ್ ಪಱಪಾತಂ ನುಡಿಯುತೆ ಜನ್ನದಾರಮಂ ಪೊಸೆಯುತಿರ್ದರ್; ಕೆಲರ್ ಗರವಟದ ಸನ್ನಿಧಿಯುಮನಣಿಗೆಯ್ಯುತಿರ್ದರ್; ಕೆಲರ್ ಸಂದಿಗ್ಧವೇದವಾಕ್ಯಂಗಳಂ ವಿಚಾರಿಸುತಿರ್ದರ್; ವಟುಗಳೊಳರೆಬರ್— ಪೆಱತೊಂದೆಡೆಯೊಳ್ ಫಲಸಮಿತ್ಕುಶಂಗಳಂ ಕೊಯ್ಯುತಿರ್ದರ್; ಅರೆಬರ್ ನಾರುಡೆಯುಂ ಸೀರೊಳೊಗೆಯುತಿರ್ದರ್; ರಿಸಿವೆಣ್ಗಳೊಳ್ ಕೆಲರ್ ಮತ್ತಮೊಂದೆಡೆಯೊಳಚ್ಚಸರಮಂ ಪಿಡಿದು ರಾಮನಾಮಮನೆಣುತಿರ್ದರ್; ಕೆಲರ್ ಹದಿಬದೆಯರ ನೆಗೞ್ತೆಯುಂ, ಕೆಲರ್

ಪುಣ್ಯಕಥಾವಿಶೇಷಂಗಳಂ, ಬೆಸಗೊಳುತ್ತಿರ್ಪರ್; ಪೂಗಿಡುಗಳ ಪಾತಿಗಳ್ಗೆ ನೀರೆರೆಯುತುಮಿರ್ಪರ್ ಕೆಲರ್.

ಈಪರಿಯೊಳಿರುತ್ತಿರಲೊಂದುದಿನವೊಂದಿನಂತೆ ಪ್ರತ್ತಿನಣುಗಂ ತಮ್ಮ ಶಿಷ್ಯರ್ಗೆ ರಾಮಾಯಣಕಥಾಕೌತುಕಮಂ ನಿರವಿಸುತ್ತಿರಲಾ ಶಿಷ್ಯರೊಳಗಗ್ಗಳನೊರ್ವಂ ಭಾರದ್ವಾಜಂ ಕೈಮುಗಿದಿಂತು ಬೆಸಗೊಂಡಂ :– ಜೀಯ! ತಾವೆಮಗನುಗ್ರಹಿಸಿದ ರಾಮಚಾರಿತ್ರಮಂ ಕಿವಿಯೊಳ್ ಕೇಳ್ದೊಡಂ ಮನಮಾಱದುದಱಿಂ ಮಗುೞ್ದುಮದನೆ ಬಿತ್ತರಿಸಿ ಪೇೞ್ವುದು. ಅಂತುಮಲ್ಲದೆ ಪಿಂತೊರ್ವರ್ ಬೊಮ್ಮಲೋಕದೊಳ್ ಶತಕೋಟಿರಾಮಾಯಣಂಗಳಪ್ಪುವೆಂದುಮತ್ತಣಿಂ ಲೋಕಕ್ಕೆ ಇಪ್ಪತ್ತೈದು ಸಾಸಿರ ಲೆಕ್ಕದ ರಾಮಾಯಣಂಗಳ್ ಬಂದುವೆಂದುಂ ತಿಳಿಪಿದಿರ್. ಆದೊಡೆವಿಮ್ಮಂ ಕೇಳಪಟ್ಟನಿತು ರಾಮಾಯಣಂಗಳೊಳಾರುಂ ಪಿರಿದು ಬಣ್ಣಿಸಿಪ್ಪುದು; ಅವುಗಳೊಳಾವ ರಾಮಾಯಣಂ ಕೇಳಲ್ತಕ್ಕುದು; ಎಂಬಿನಿತಂ ಕರುಣೆಯಿಂದಱುಹಲಕ್ಕುಂ. ಈ ನುಡಿಗೇಳ್ದು ವಾಲ್ಮೀಕಿ ತಾಂ ಕಿಱುನಗೆಬೀರ್ದು ಕರತಲಾಮಲಕದಂತೆಲ್ಲಂ ಬಗೆಗೊಡರ್ಚಿ ಶ್ರೀರಾಮಚಂದ್ರಮಂ ಚಿದಂಬರದೊಳಪ್ಪಿರಲೊದೆವಂ.

ಬಳ್ಳಿತುಸಿರ್ದೈ, ಚಿರಂಜೀವಿಯೆ! ಅನಿತೆಲ್ಲಮನಾನೊರ್ವನೆ ಕೇಳ್ದೆನಾದೊಡಂ ಕೇಳ್ದಂತೆ ಪೇೞಲೆನಗಂ ಸಾಧ್ಯಮಲ್ತು; ಆದೊಡಂ ಬಲ್ಲನಿತು ಪೇೞ್ವೆಂ, ಕೇಳ್. ಆಬೊಮ್ಮಲೋಕದೊಳಿಸವ ಶ್ರೀರಾಮಕಥಾಮೃತಭರಿತಶತಕೋಟಿರಾಮಾಯಣಮಹಾರ್ಣವದತ್ತಣಿಂ ಪಂಚವಿಂಶತಿಸಾಹಸ್ರಚಾರಿತ್ರಪೀಯೂಷಕಣಂಗಳ್ ಶಿವನ ಜಟಾಜೂಟದಿಂ ಕೆಳಗ ಜಗುಳ್ದ ವಿಯದ್ಗಂಗಾಸಲಿಲಬಿಂದುಗಳಂತೆ ಭೂಲೋಕಮಂ ಪೊರ್ದಿದುವು. ಅವು

ಗಳೆಲ್ಲಂ ಭೂಸ್ವಾಭಾವ್ಯಂಗೊಂಡ ಬಾಂಬೊಳ್ಚ್ಚದ ನೀರ್ವನಿಗಳ್ವೋಲ್ ಮಾನುಷಚಾರಿತ್ರಗಂಧಮಂ ತಾಳ್ದುವು. ಅದಱೊಳಂ ಘನೆಯುಂ ಪೂರ್ವ ಸ್ವಾರಸ್ಯಂಗುಂದಿದ ಸ್ವರ್ಧುನೀಜಲಲೇಶಂಗಳ್ ತೆಱದೆ ಸೀತಾಮಾಹಾತ್ಮ್ಯಮಾಧುರ್ಯಂ ಸಂಪೂರ್ಣಂ ಕಾಣಿಸದು. ಅನುದಱಿಂ ದ್ರುಹಿಣಲೋಕದೊಳಡಂಗಿರ್ದ ಕಾವ್ಯಮಪ್ಪ ರಾಮಾಯಣಂಗಳೊಳ್ ಕಾಕುತ್ಸ್ಥಚಾರಿತ್ರಮುಮಂ, ಮೇಣ್ ಮೂಲಪ್ರಕೃತಿಭೂತೆಯಪ್ಪ ಸೀತಾಚಾರಿತ್ರಮುಮಂ ನೀನೆಮ್ಮ ಪ್ರಿಯಶಿಷ್ಯನಪ್ಪ ಕತದಿನೊರೆವೆಂ.

ಜಾನಕೀದೇವಿ ತಾಂ ಸೃಷ್ಟಿಯ ಆದಿಭೂತಮಹಾಗುಣೆಯುಂ, ಪ್ರಕೃತಿಯುಂ, ಸ್ವರ್ಗಸಿದ್ಧಿಯುಂ, ತಪಸ್ಸಿದ್ಧಿಯುಂ, ಐಶ್ವರ್ಯರೂಪಿಣಿಯುಂ, ಮೂರ್ತಿಮಂತೆಯುಂ, ಬ್ರಹ್ಮಾಣ್ಡನಾಯಿಕೆಯುಂ, ಕಾರಣಕಾರಣಿಕೆಯುಮಪ್ಪಳ್. ಅವಳಂ ಬ್ರಹ್ಮವೇದಿಗಳ್ ವಿದ್ಯೆಯೆಂದುಂ, ಅವಿದ್ಯೆಯೆಂದುಂ, ಗುಣೆಯೆಂದುಂ, ನಿರ್ಗುಣೆಯೆಂದುಂ, ಪ್ರಕೃತಿಯೆಂದುಂ, ವಿಕೃತಿಯೆಂದುಂ, ದೇವಿಯೆಂದುಂ, ಚಿನ್ಮಯಿಯೆಂದುಂ, ಚಿದ್ವಿಲಾಸಿನಿಯೆಂದುಂ, ಮಹಾಕುಂಡಲಿನಿಯೆಂದುಂ ಪೇೞ್ವರ್. ಅವಳಿಂದಮೀ ವಿಶ್ವಂ ಶೋಭಿತಮಾಗಿರ್ಕುಂ. ಮತ್ತಮವಳಂ ತತ್ತ್ವದರ್ಶಿಗಳ್ ಹೃದಯದೊಳ್ ಬೈತಿಟ್ಟು ಹೃದ್ಗ್ರಂಥಿಯಿಂ ನಿಘಟ್ಟಿಸಂಗಯ್ದು ತಾಂ ಸುಖಮೂರ್ತಿಯಪ್ಪರ್. ಎಲೈ ಸುವ್ರತ! ಎಗಳ್ ಧರ್ಮಗ್ಲಾನಿಯುತ್ಪನ್ನಮಪ್ಪದೋ, ಮೇಣೇಗಳಧರ್ಮದಭ್ಯುದಯಮಪ್ಪುದೋ, ಆಗಳ್ ಶಕ್ತಿಪ್ರವೃತ್ತಿಯೆಡೆಯಪ್ಪುದು. ಇಂತಿವಳ್ಗಂ ಸಾಕ್ಷಾತ್ಪರಮಾತ್ಮಂ ಪರಮೇಶ್ವರನಪ್ಪ ರಾಮಂಗಂ ಆಕಾಶದೊಳೆನಸುಂ ಭೇದಮಿರದು. ಇವನಱಿಯುತ್ತೆಯೆ ಸಂತರ್ ಸ್ವಾಂತಸಂತುಷ್ಟಿಯಿಂ ಮುಕ್ತಿಸೀಮಂತಿನಿಯಂ ಸಿಟ್ಟ

ಪರ್; ಸಂಸಾರಿಗಳ್ ಮಿೞ್ತುವಿನ ಬಾಯಿಂ ತಪ್ಪಿದಪರ್. ಶ್ರೀರಾಮನಾದೊಡೆ ಅಚಿಂತ್ಯಂ, ನಿತ್ಯಂ, ಸರ್ವಸಾಕ್ಷಿ, ಸರ್ವಾನ್ತರ್ಯಾಮಿ, ಸರ್ವಲೋಕೈಕಕರ್ತಾರಂ, ಆನಂದಮೂರ್ತಿಯೆನಿಪ್ಪಂ; ಕಾಲ್ಗಳಿಲ್ಲದೆಯುಂ ಪರಿದಪಂ; ಕೈಗಳಿಲ್ಲದೆಯುಂ ಪಿಡಿದಪಂ;
5] ಕಣ್ಗಳಿಲ್ಲದೆ ಕಣ್ಬಪಂ; ಕಿವಿಗಳಿಲ್ಲದೆ ಕೇಳ್ಪಪಂ. ಅಂತಾತಂ ವಿಶ್ವಮೆಲ್ಲಮಂ ತಿಳಿದೊಡಂ ವಿಶ್ವಮೆಂತುಮವನನಱಿಯದು; ಇದರ್ಕೆಯೆ ಈತಂಗೆ ಪುರಾಣಪುರುಷನೆಂಬರ್. ಇಂತಪ್ಪ ಪುರಾಣಪುರುಷನ ಮತ್ತಂ ಪರಪ್ರಕೃತಿಯ ಜನ್ಮಕಾರಣಮೆಂತಂತೆಯೆ ಬಣ್ಣಿಪೆಂ. ಅರೂಪಮಿರ್ದು ಸರೂಪಮೆಂತಾಯ್ತು: ಇದಂ ವಿಚಾರಿಸಲ್ ಮರ್ತ್ಯರನನುಗ್ರಹಿಸಲೆಂಬುದೆ ಮುಖ್ಯಕಾರಣಮಲ್ತೆ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್,

ಪ್ರಥಮಾಶ್ವಾಸಂ

ಸಂಪೂರ್ಣಂ.



# ದ್ವಿತೀಯಾಶ್ವಾಸಂ.

ಕೇಳ್ವುದು, ಇಕ್ಷ್ವಾಕುಕುಲಾಂಬುಧಿಯೊಳ್ ರಾಮಚಂದ್ರ ಮನೆಹಗೆ ಪುಟ್ಟಿದನೆಂದುಮೀರತ್ನಗರ್ಭೆಯೊಳ್ ಸೀತಾರತ್ನಂ ಜನಿಸಿರ್ದ ಬಗೆಯೆಂತೆಂದುಮುಸಿರ್ವೆಂ.

ಮೊದಲ್ ಅಂಬರೀಷಚಾರಿತ್ರದತ್ತಣಿಂ ರಾಮಲೀಲಾವಿನೋದಂ ವ್ಯಕ್ತಮಕ್ಕುಂ.

ಮುನ್ನಮೀಪ್ರೊಡವಿಯೊಳ್ ತ್ರಿಶಂಕುವೆಂಬೊರ್ವಂ ನೇಸರ್ಬುಮ ರಾಯಂ ಪಲವುಂ ಪಗಲರಸುಗೆಯ್ಯುತ್ತುಮಿರ್ದಂ. ಈತಂಗೆ ಸರ್ವಲಕ್ಷಣಲಕ್ಷಿತೆಯಾದ ಪದ್ಮಾವತಿಪೆಸರ ಪಟ್ಟದರಸಿಯುಂಟು. ಜಂಪತಿಗಳ್ ಮೆಯ್ಯೆರಡು ಮನವೊಂದೆಂಬ ನ್ಯಾಯದಿನೇಕಮಿರ್ದರ್. ಸರ್ವಸುಖಭೋಗಂಗಳೊಳುಂ ಕೊಱತೆಯಿಲ್ಲಮಾದೊಡಂ ಬಹುಕಾಲಕೆ ಸಂತಾನಂ ತಲೆದೋರ್ದುದಿಲ್ಲಮೆಂಬ ಕುಂದೊಂದೆಯೆ ಎಲ್ಲಾಭೋಗಂಗಳೊಳುಂ ನೈರಸ್ಯಮಂ ಪುಟ್ಟಿಸಿದುದು. ಕತಮಿದಱಿನವರಿರ್ವರುಮೇಗಳುಂ ಚಿಂತೆಯನಪ್ಪುಕೆಯ್ದು ರಾಜ್ಯವಿಷಯಂಗಳುಮಂ ಭೋಜ್ಯವಿಷಯಂಗಳುಮಂ ತೊಱೆದರ್. ಬೞಿಯಮಾಮಾರಾಯಂ "ಸರ್ವಂ ವಿತ್ತಾಪ್ತಲಾಭಂ ಸತಿತನುಜಸುಖಂ ಪೂರ್ವಕರ್ಮಾನುಸಾರಂ" ಎಂದು ಬಗೆದಂದು, "ಆಸೆಯನುೞಿ ಲೇಸಕ್ಕುಂ" ಎಂಬ ನಾಣ್ಣುಡಿಯುಂ ಪಿಡಿದು, ದುಗುಡಮನುೞಿದು, ಮುನ್ನಿನೊಳ್ ನಿಜವಿಷಯವಿಷಯಂಗಳಂ ವಿಚಾರಿಸಿ, ವಿಭವೋಪೇತಂ ವಿಪ್ರರ್ಗೆ ವಿವಿಧದಾನಧರ್ಮಂಗಳೊಳ್ ವಿತ್ತಮಂ ವಿಶೇಷಂ ವಿನಿಯೋಗಂಗೆಯ್ದು, ಯಜ್ಞಾದಿಗಳನೆಸಗಿ "ಸುಕೃತಮೆ ತಾಂ ಸೌಖ್ಯಮೂಲಮಿಹಕುಂ ಪರಕುಂ" ಎನುತೆ, ಓರೊಂಗೆ

ಡೆಯೊಳ್ ವಾಪೀಕೂಪತಟಾಕಂಗಳ ನೇರ್ಪಡಿಸಿ, ಪೆರ್ದಾರಿಗಳಂ ಬಿಡಿಸಿ, ಮೇಣೋರೊಂದೆಡೆಯೊಳಱವಟ್ಟಿಗೆಸತ್ರಂಗಳಂ ಕಟ್ಟಿಸಿ, ಇಂತು ಜನರ ಕೂರ್ಮೆಗೀಡಾದಂ. ಆನಾರಾಯಿತಿಯುಂ "ನಂಬಿದವರ್ಗಿಂಬಿಹೆಂ" ಎಂಬ ಅಚ್ಯುತನ ಅಚ್ಚರಿಯೆನಿಪಿಪ್ಪೆಸರನಿಚ್ಚೆಗೊಂಡು, ನಚ್ಚಿನಿಚ್ಚಂ ಸಚ್ಚಿದಾನಂದನಪ್ಪ, ಯೋಗನಿದ್ರಾಭರದಿಂ ಶೇಷಪರ್ಯಂಕಶಾಯಿಯುಮಪ್ಪ, ತಮೋಗುಣದಿಂ ಕಾಲರುದ್ರನುಂ, ರಜೋಗುಣದಿಂ ಬ್ರಹ್ಮನುಂ, ಮೇಣ್ ಸತ್ವಗುಣದಿಂ ವಿಷ್ಣುವುಮೆನಿಪ್ಪ ಪರಮೇಶ್ವರನಂ, ತಾರಕಬ್ರಹ್ಮನಂ, ನಾರಾಯಣನಂ, ಮನೋವಾಕ್ಕಾಯವೃತ್ತಿಗಳಿಂ ಭಜಿಸುತಿರ್ದಳ್; ಮತ್ತಂ ವಿಷ್ಣುಭಕ್ತರನೆಲ್ಲರಂ ದಾನಮಾನಾರ್ಚನಂಗಳಿಂ ಸಂಭಾವಿಸುತಿರ್ದಳ್. ಇಂತು ದಶಸಹಸ್ರವರ್ಷಂಗಳ್ ಕಳೆಯಲೊಂದು ದ್ವಾದಶೀದಿನದ ವಳುಪ್ರೋಷಣಂಗೆಯ್ದು, ನಿಜಕಾಂತಂವೆರಸು ವಿಷ್ಣುಸನ್ನಿಧಿಯೊಳ್ ಪವಡಿಸಿರಲ್; ಭಾವಕಿಯ ಭಕ್ತಿಗೊಲ್ದು ಭಗವಂತನಂದಿನಿರುಳೊಳ್ ಪುರುಷವೇಷಮಂ ತಾಳ್ದು ಬಂದು— "ತನ್ನತ್ತಣಿನೇಂ ವರಮಂ ಬಯಸುವೆ?" ಎಂದು ಕೇಳ್ದಂತೆಯುಮವರ್ಕೆ ತಾಂ ವಿಷ್ಣುಭಕ್ತಿಪರಾಯಣನುಂ, ಸಾರ್ವಭೌಮನುಂ, ಮಹಾತೇಜಸ್ವಿಯುಂ, ಸ್ವಧರ್ಮನಿರತನುಮಪ್ಪ ಪುತ್ರನಂ ಕರುಣಿಪುದೆಂದು ಮಾರ್ನುಡಿಯಿಂ ಬಿನ್ನಯಿಸಿದಂತೆಯುಂ, ಬಳಿಯಮಾದಿವ್ಯಪುರುಷಂ – "ಅಂತಕ್ಕೆ" ಎಂದೊಂದು ಫಲಮನನುಗ್ರಹಿಸಿ ಅಂತರ್ಧಾನಮಾದಂತೆಯುಂ ಕನಸುಗಂಡೆಚ್ಚೆತ್ತಳ್. ತನ್ನ ಬಳಿಯೊಳ್ ಸ್ವಪ್ನಫಲದಂತೆ ಫಲಮಿರಲ್ ಕಂಡು, ಪದ್ಮಾವತಿ ತಾಂ ಪದ್ಮನಾಭಂ ಕರುಣಿಸಿದ ಪಣ್ಣಂ ಪತಿಗೆ ತೋರ್ದು ಕನಸಿನ ಪರಿಯೆಲ್ಲಮಂ ತಿಳಿಪಿದಳ್. ಆನಂದತುಂದಿಲಸ್ವಾಂತರಾದಾದಂಪತಿಗಳ್ ಪುಂಡರೀಕಾಕ್ಷನಂ

ನೆನೆದು ಪಣ್ಣನಂ ಭಕ್ಷಿಸಿದರ್. ಅಂತು ಭಕ್ಷಿಸಿದ ಕೆಲದಿನಂಗಳ್ ಪೆಣ್ಗೆ ಗರ್ಭನಿಲ್ತು, ಬಸಿರ್ಬೆಳೆದು ಮೇಣೊಂದು ಶುಭಮುಹೂರ್ತದೊಳ್ ಕನಂಬರಿದಂತೆ ಚಕ್ರಲಕ್ಷಣಸಂಪನ್ನನೊರ್ವಂ ಸುಪುತ್ರಂ ಪುಟ್ಟಿದಂ. ಸಂತಸಮನೇವೇೞ್ವೆಂ; ಉಕ್ಕೆವಮಾಯ್ತುರಮನೆಯೊಳುಂ ನೆರೆಪ್ರಜೆಯೊಳುಂ. ದೀನರ್ ಧನಮಂ ಕಂಡಂತಾಗಲ್, ಮಹಾರಾಯಂ ಮೊದಲಿಂ ನಾಲ್ಮಡಿಯಾಗಿ ದಾನಧರ್ಮಾದಿಸತ್ಕಾರ್ಯಂಗಳ ನೆಸಗಿದಂ. ಶುಕ್ಲಪಕ್ಷಚಂದ್ರಮನಂತೆ ದಿನಕ್ರಮಂ ವೃದ್ಧಿಗೊಂಡೊಪ್ಪುವ ಕುಮರಂಗೆ ಜಾತಕರ್ಮಾದಿಸಂಸ್ಕಾರಂಗೆಯ್ದು, ಅಂಬರೀಷನೆಂಬ ಪೆಸರಿಟ್ಟು, ಲೌಕಿಕವೈದಿಕವಿದ್ಯೆಗಳೆರಡರೊಳುಂ ಸಮರ್ಥನೆನಿಪ್ಪ ಸದ್ಗುರುವತ್ತಣಿಂ ವಿದ್ಯಾಭ್ಯಾಸಮಂ ಮಾಡಿಸಿದಂ. ಏಕಪಾಠಿಯಾದ ಆಕುಮಾರಂ ಕುಮಾರನಂತೆ ಚತುರ್ದಶವಿದ್ಯೆಯೊಳುಂ, ಚತುಷ್ಷಷ್ಟಿಕಲೆಗಳೊಳುಂ ಪ್ರವೀಣನಾಗಲಾತಂಗುಚಿತಕಾಲದೊಳ್ ಸೌಂದರ್ಯಶೀಲಸೌಭಾಗ್ಯವತಿಯಪ್ಪ ಕನ್ನೆಯಂ ಪರಿಣಯಮನೆಸಗಿ, ಯುವರಾಜಪಟ್ಟಮಂ ಕಟ್ಟಿ ಕೃತಕೃತ್ಯನಾದೀ ತ್ರಿಶಂಕುಮಹಾರಾಜಂ ಕೆಲಗಾಲದ ಮೇಲೀಪ್ರೌಢವಿಯೊಡೆತನಮಂ ಅಣುಗಂಗೆ ಸಂಪೂರ್ಣಮೊಪ್ಪಿಸಿ, ತಾನಭಿನವಸ್ವರ್ಗಸಾಮ್ರಾಜ್ಯಾಧಿಕಾರಿಯಾದಂ.



ಇತ್ತಲಾದಿಗಂತವಿಶ್ರಾಂತಕೀರ್ತಿಯಪ್ಪ ಅಂಬರೀಷಮಹಾರಾಜಂ ರಾಜ್ಯಪದಮಂ ಮಂತ್ರಿಯೊಳ್ ನಿಲಿಸಿ, ತಾಂ ಭಗವದನುಗ್ರಹಮಂ ಪಡೆದಪೆನೆನುತೆ ಘೋರಕಾನನಮಂ ಸೇರ್ದು, ಭಕ್ತಹೃತ್ಪುಂಡರೀಕಮಧ್ಯಸ್ಥನುಂ, ಬ್ರಹ್ಮವಿಷ್ಣುಶಿವಾತ್ಮಕನುಂ, ಚತುರ್ಭುಜನುಂ, ಶಂಖಚಕ್ರಗದಾಪದ್ಮಶೋಭಿತನುಂ, ಶುದ್ಧಜಾಂಬೂನದವರ್ಣನುಂ, ಸರ್ವಾಭರಣಸಂಯುಕ್ತನುಂ, ಪೀತಾಂಬರಧಾರಿಯುಂ,

ಪುರುಷೋತ್ತಮನುಮಪ್ಪ ನಾರಾಯಣನಂ ಕುಱಿತು, ಸಾಸಿರಕಾಲಂ ಬರೆಗಂ ತಪಸನೆಸಗುತಿರ್ದಂ. ಬೞಿಯಂ ಗರುಡಾರೂಢನಪ್ಪ ಪರಮಾತ್ಮಂ ಭಕ್ತನಂ ಪರಿಕಿಸಲೆಂದು ವೈನತೇಯನನೈರಾವತಮಪ್ಪಂತೆ ಮಾರ್ಪಡಿಸುತೆ ತಾನಿಂದ್ರನಾಗುತೆ ಅಂಬರೀಷಂಗೆ ಕಾಣಿಸಿ ಕೊಂಡಿಂತೆಂದಂ :– "ಎಲೆ ಅಂಬರೀಷ! ಗೆಲವಕ್ಕೆ! ಆನಿಂದ್ರಂ; ನಿನ್ನನುದ್ಧರಿಸಲೆಂದು ಬಂದೆಂ. ಏಂ ವರಮನಿಚ್ಛಿಪೈ? ಕರುಣಿಪೆಂ." ಇಂತುಸಿರೆ; ಚೌದಂತಮನೇರ್ದ ವೈಯಗ್ಗಣ್ಣನಂ ಕಿಸುಗಣ್ಣಿಂ ಕಂಡಾತನುಂ– 'ಅಮರ್ದುಂಡರೊಡೆಯ! ನಿನ್ನಂ ಕುಱಿತಾಂ ತಪಮಾಚರಿಸಿದುದುಮಿಲ್ಲಂ. ಮೇಣ್ ನಿನ್ನತ್ತಣಿನಾವ ವರಮುಮಂ ಬಯಸುವುದುಮಿಲ್ಲಂ. ಎನ್ನೊಡೆಯನಲರ್ಪೊಡೆಯನಲ್ಲದೆ ಬಿಡೌಜನಲ್ತು. ಇಂತೊರೆವೆನೆಂದು ಮುನಿಸುದಾಳದಿರ್. ಬಱಿದೆನ್ನ ತಪಸಿಗೆ ಬನ್ನಮೆಸಗದೆ ಎಹಗೆ ಬಂದೆಯುಹಗೆ ಪಿಂತಿರುಗೈ." ಎಂದು ಪಡಿನುಡಿಗುಡುತುತೆ, ತನ್ನೊಳ್ ತಾಂ ಕಣ್ಣಿಟ್ಟಂ. ಮತ್ತಮಾರಾಯತಪಸಿ ತನ್ನೊಳಿಟ್ಟಿರ್ದ ದೃಢಭಕ್ತಿಯುಂ ಕಾಣುತೆ ಸಂತಸಂದಾಳ್ದು, ಮೇಣವನ ಮಾರ್ನುಡಿಗೆ ಮುಗುಳ್ನಗೆಗೊಂಡು, ಜನಾರ್ದನಂ ತಾಂ ಪ್ರತ್ಯಕ್ಷನಾದಂ. ಆವನ ಮೈವೊಗರಿಂ ಈ ಪುಷ್ಪವಂತರ್ಗೆ ಪೊಳೆಪೊದವಿತ್ತೋ, ಆವನ ಕಣ್ಣೋಟದಿನೀಲೋಕಂ ಪಾವನಮಪ್ಪುದೋ, ಆವನ ಬಾಯಿಂ ವೇದರಾಶಿಗಳೊಗೆದುವೋ, ಮೇಣಾವನ ನವಿರ್ನವಿರೊಳೀಸಕಲಚರಾಚರ ವಸ್ತುಗಳೆಸೆದಿರ್ಪುವೋ, ಆ ವನಜಾಕ್ಷನ ದಿವ್ಯಮೂರ್ತಿಯುಂ ಕಣ್ತಣಿಯೆ ಕಂಡು, ಸಂತಸಮುನ್ನೀರೊಳ್ ಮುೞುಂಗಿ ಮುೞುಂಗಿ, ಮೆಯ್ಮಱೆದೆಟ್ಟುಗೊಂಡು ಇಂತು ಪಾಡಿದಂ :– "ಏ ಪಕ್ಷಿದೇಗ! ಎನ್ನೊಡೆಯ! ಮೇಲೆಸಗೈ. ಆನಂದಮೂರ್ತಿ! ನೀನೆ ಅನಂತಂ,

ನೀನೆ ಹವ್ಯವಾಹಂ, ಪ್ರಭಂಜನಂ ನೀನೆ, ನೀನೆ ಕಮಲಾಕ್ಷಂ, ನಿನ್ನಂ ಮಱುವುಗುವೆಂ; ನಿನ್ನಿಂ ಪೆಱತು ಎನಗಿರ್ಕೆಯಿಲ್ಲಂ. ಅದಱಿನೆನ್ನಂ ಪೊರೆಯೈ. ಮೊದಲೊಳ್ ಸಗ್ಗಿಗರೊಡೆಯನುಂ ತಾನೆಂಬ ಮಾಟ್ಕ್ರಿಯಿಸಂತೆನ್ನಂ ನುಡಿಯಿಸಿದೊಡಂ ತಾಂ ತಿಳಿಯದೆ ಅಸಡ್ಡೆಯುಂ ತೋರ್ದೆಂ. ತಪ್ಪನಿತುಂ ಮನ್ನಿಸಿ ಕಾವುದು." ಎಂದೆಱಗಿದರಸನಂ ಕಂಡು, ದೇವಂ— "ಎಲೈ ಭಕ್ತಶಿರೋಮಣಿಯೆ! ನಿನ್ನ ದಿಟಬಕುತಿಯುಂ ನೋೞ್ಪೆನೆಂದಾರೂಪಿಂ ಬಂದೆನಲ್ಲದೆ ಪೆಱತಿಲ್ಲಂ; ಭಕ್ತಿಯುಂತಿರವೇೞ್ಕುಂ; ಸಂಪೂರ್ಣಂ ಸಂತುಷ್ಟನಾದೆಂ ನಿನ್ನ ಭಕ್ತಿಗೆ; ಮನದ ಬಯಕೆಯನುಸಿರೈ; ಕರುಣಿಪೆಂ." ಎಂದೊರೆದಂ. ಆನುಡಿಗೇಳ್ದಂಬರೀಷಮಹಾರಾಜಂ ಗದ್ಗದ ವಾಣಿಯಿಂ— "ಪರಮಾತ್ಮಸ್ವಾಮಿ! ತ್ರಿಕರಣದೊಳುಮಾಂ ವಿಷ್ಣುಭಕ್ತಿಪರಾಯಣನುಂ ಯಜ್ಞಹವನದೇವಸೇವೆಯೊಳ್ ನಿರತನುಮಪ್ಪಂತೆಯುಂ, ಪ್ರಜೆಗಳ್ ವೈಷ್ಣವರಪ್ಪಂತೆಯುಂ, ಶತ್ರುಗಳ್ ಮಿತ್ರರಪ್ಪಂತೆಯುಂ, ಅನುಗ್ರಹಿಪುದು." ಎಂದು ಬಿನ್ನಯಿಸಿದೊಡನೆಯೆ; "ತಥಾಸ್ತು" ಎಂದು ಮಾಧವಂ ಮುನ್ನಂ ತನಗೆ ರುದ್ರಾನುಗ್ರಹದಿಂ ದೊರೆಕೊಂಡ ಸುದರ್ಶನಮಂ ಮೆಚ್ಚಿನಿತ್ತು, ಋಷಿಶಾಪಂ ಶತ್ರುಬಾಧೆ ರೋಗದುಃಖಾದಿಗಳಂ ದೂರಂ ಮಾೞ್ಪುದೆಂಬ ಪೆಱುಂಬಳೆಯ ಮೈಮೆಯನೊರೆದು, ತಾನಡಗಿಪೋಗೆ; ಚಕ್ರಶಾಯಿಯಪ್ಪ ಚಕ್ರಿಯನುಗ್ರಹದಿಂ ಸಹಿತಮಾ ಚಕ್ರಮಂ ಚಕ್ರವರ್ತಿ ಕೈಕೊಂಡು ನಿಜರಾಜಧಾನಿಯಪ್ಪ ಅಯೋಧ್ಯಾಪಟ್ಟಣಕ್ಕೈತಂದು, ಕರುಣೆಯಿಂ ಪ್ರಜಾಪಾಲನೆಯುಂ, ಶ್ರದ್ಧೆಯಿಂ ಹವ್ಯಕವ್ಯಂಗಳಂ, ಭಕ್ತಿಯಿಂ ದೇವತಾಪೂಜೆಯುಂ ಗೆಯ್ಯುತಂ, ಚಿರಕಾಲಂ ಕಡಲ್ಗಳ್ ಕಡೆಗಳಪ್ಪ ಪೊಡವಿಯೊಡೆ

ತನವಂ ಬಿಡದೆ ನಡೆಯಿಸುತ್ತಿರ್ದಂ. ನೂಱಶ್ವಮೇಧಂಗಳನಸಿತೆ ವಾಜಪೇಯಂಗಳನೆಸಗಿ, ಪೆಸರ್ವಡೆದೀತನ ಕಾಲದೊಳ್ ಮನೆಮನೆಗಳ್ ಸಾಲಿಗ್ರಾಮಾದಿದೇವಪೂಜಾವಾದ್ಯಘೋಷಂಗಳಿಂ, ವೇದಘೋಷಂಗಳಿಂ, ಈಶ್ವರನಾಮಸಂಕೀರ್ತನಘೋಷಂಗಳಿಂ, ಯಜ್ಞಘೋಷಂಗಳಿಂ, ತುಂಬಿರ್ದುವು. ತಿರೆಯುಂ ಮೞೆಬೆಳೆಗಳಿಂ ಚೆನ್ನೊಪ್ಪಿ, ಬಱಗಾಲಮಂ ಕಾಣದಾಯ್ತು. ಪ್ರಜೆಗಳುಂ ರೋಗಾದ್ಯುಪದ್ರವಂಗಳ ಗುಱುತನಱಿಯರ್. ಇಂತಪ್ಪ ಪ್ರಜೆಗಳೇ ಅಗ್ಗಮೊಗರುಂ, ಪೊೞಲೇ ಸಗ್ಗಮುಮಾಮಾರಾಯನೇ ದೇವೇಂದ್ರನುಮಾಗೆ ಚೆಲ್ವಾದುದು.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್

ದ್ವಿತೀಯಾಶ್ವಾಸಂ,

ಸಂಪೂರ್ಣಂ.



# ತೃತೀಯಾಶ್ವಾಸಂ.

---

ಅಂತಿರ್ಪ ಭೂಭೃದ್ವನನೊಳ್ ಸೈಪಿನ ಬಿತ್ತಿನಂತೆ ಶ್ರೀಮತಿಯೆಂಬೊಂದು ಪೆಣ್ಮಣಿ ಪುಟ್ಟಿದುದು. ಬಹುಕಾಲಕೆ ಪೆತ್ತಣಾಗಿಯುಂ ಮುದ್ದುಗೆಯ್ದು ಅರೆಗಳಿಗೆಯಾದೊಡಮಗಲದಾವಗಂ ತೊಡೆಯೊಳಿರಿಸಿಕೊಂಡು ಪಟ್ಟವಣೆಯೊಳಂ ಸೆಜ್ಜೆವನೆಯೊಳಂ ಸೊಗಯಿಸುತಿರ್ದಂ. ಅನ್ನೆಗಮೊರ್ಮೆ ರಾಯನೊಡ್ಡೋಲಗಂಗೊಟ್ಟು ಅಣಾಗಿವೆರಸಿರ್ಪಿನಂ; ಪೊಗೆಯುಱದಗ್ನಿಯವೊಲೊಂದೆಡೆಯೊಳ್, ತಣ್ಪುಗೊಂಡ ನೇಸಱಂಬೋಲ್ ಪೆಱತೊಂದೆಡೆಯೊಳ್, ಬೆಳಗುವ ನಾರದಪರ್ವತರೆಂಬಿರ್ವರ್ ಮುನಿಗಳ್ ಏಕಕಾಲದೊಳಾಗಸದತ್ತಣಿನಂಬರೀಷನರಮನೆಗೆಯ್ತಂದರ್. ಕಂಡಾಗಳ್ ಭಕ್ತಿ ಮೆಱೆಯೆ ಆಸನದಿಂದಿೞಿದೊಡನೆಯೆ ಪೋಗಿ ಕರೆತಂದು ಅರ್ಘ್ಯಪಾದ್ಯಂಗಳನಿತ್ತು, ಗದ್ದುಗೆಯೊಳ್ಕುಳ್ಳಿರಿಸುತಿರ್ವರ್ಗಂ ಮಧುಪರ್ಕಾದಿಗಳಂ ಸಮರ್ಪಿಸಿ, ತಾನುಮವರ ಕೆಲದೊಳ್ ಮಂಡಿಸಿ, ಮೆದುನುಡಿಯಿಂ ಕುಶಲಮಂ ಬೆಸಗೊಳುತ್ತಿಂತುಪಚರಿಸುತಿರ್ದಂ. ಬೞಿಕವರಭ್ಯಾಗತರಿರ್ದರುಂ ರಾಯನ ಸನಿಯದೊಳೊಪ್ಪಿರ್ದ ಬಾಲಿಕೆಯುಂ ದಿಟ್ಟಿಸುತುಂ ತಮ್ಮೊಳ್— ಪಱಮೆಯಂತೆ ಕರ್ಪಿಡಿದ ಮುಂಗುರುಳುಂ, ಪಾವಿನ ಪೆಡೆಯಂತೆ ಸರಿಗೊಂಡ ಜಡೆಯುಂ, ಚಂದಿರನಂತೆ ಸಂತಸಮಂ ಪುಟ್ಟಿಪ ಮೊಗಮುಂ, ಕಾಮನ ಸಿಂಗಾಡಿಯಂತೆ ಬಾಗಿರ್ಪ ಪುರ್ಬುಂ, ನೀರ್ವೂವೆಸೞಂತೆ ನೀಳಮಪ್ಪ ಕಣ್ಣುಂ, ಸಂಪಗೆಮೊಗ್ಗೆಯಂತೆ ಸೊಗಸುದೋರ್ಪ ಮೂಗುಂ, ತೊಂಡೆವಣ್ಣಂತೆ ಕೆಂಪೆಸೆವ ಬಾಯ್ದೆಱೆಯುಂ, ದಾಳಿಂಬಬಿತ್ತಿನಂತೆ

ಸಾಲ್ಗೊಂಡೆಸೆವ ಪಲ್ಗಳುಂ, ಕನ್ನಡಿಯಂತೆ ಪೊಳೆವ ಕೆಕ್ಕೆಯುಂ, ಬೆಳ್ದಿಂಗಳಂತೆ ಪಸರಿಪ ನಗೆಯುಂ, ಬಲಮುರಿಸಂಕಿನಂತೆ ಗುಜ್ಜುಗೊಂಡು ರಂಜಿಪ ಕೊರಲುಂ, ಸೊಂಡಲಂತೆ ದಟ್ಟವಾದ ತೋಳುಂ, ಕೆಂದಳಿರಂತೆ ಕೆಚ್ಚನೆಯ ಮೆದುಗೈಯುಂ, ಗಿಱಿವ್ರಾವಂತೆ ಮೊನೆಗೊಂಡುಗುರುಂ, ಸಿಂಗದ ನಡುವಿನಂತೆ ಬಡತನವೊದವಿದ ನಡುವುಂ, ಮಱಲೆಟ್ಟಲಂತೆ ಬೆಟ್ಟಿತಪ್ಪ ಪೊಱವಾಱುಂ, ದಿಂಡಿನಂತೆ ಬಲಿತು ಪೊಳೆವ ತೊಡೆಯುಂ, ಕೆಂದಾವರೆಯಂತೆ ಬಣ್ಣವೊಂದಿದಡಿಯುಂ, ಬಂದು ಮೇಣೊಂದಱ್ಕನಱಿಜಮುಂ ಪುಟ್ಟಿಪುವು. ಅರಪ್ಪಳೀಕನ್ನೆಯೆಂದು ಸಂಕಿಸುತ್ತೆ, ಅವರೊಳ್ ಕಲಹಾಶನಂ ತಾಂ ರಾಯನೊಡನೆ ಸರ್ವಾಂಗಸುಂದರಿಯಪ್ಪೀಕನ್ನೆ ಆರೆಂದಾರಯ್ಯೆ; ರಾಜಂ ಕೈಮುಗಿದು– "ಜೀಯ! ಇವಳೆನ್ನಣುಗಿ, ಶ್ರೀಮತಿಯೆಂಬ ಪೆಸರ್; ಪ್ರದಾನಸಮಯಮುಂ ಮುಟ್ಟಿಯಿಸಿ ಬಂದುದು; ಆದುದಱಿಂ ಯೋಗ್ಯಪಾತ್ರಮನಾರಯ್ಯಲ್ ತಕ್ಕುದೆಂದು ಬಿನ್ನಯಿಸಿದಂ." ನುಡಿಯುದಂ ಕೇಳುತವರಿರ್ವರಭ್ಯಾಗತರ್ಗಂ ಬಿರ್ದಿನವರಪ್ಪ ಬಯಕೆ ಪುಟ್ಟಿದುದು ನಿಕ್ಕುವವಾಗಲವರಿರ್ವರುಮಾಪೆಣ್ಗೆ ಕಣ್ಣಿಟ್ಟರ್. ಅಂತುಮೊರ್ವನ ಮನಂ ಪೆಱತೊರ್ವಂಗೆ ತಿಳಿಯಲಾದುದು. ಅನಿತಱೊಳ್ ನಾರದಂ ವ್ಯಾಜಾಂತರದಿನಾರಾಜನಂ ಬೇಱೊಂದೆಡೆಗೆ ಕರೆದುಯ್ದೆಕ್ಕಟಿಯೊಳ್ ಹದನನಿಟನುಸಿರ್ದಂ. ಪರ್ವತನುಮಂತೆಯೆ ಕೇಳ್ವಂ. ಅದರ್ಕಂಬರೀಷಂ ಮನಂಬೆರ್ಚುತ್ತೆ ದಾಕ್ಷಿಣ್ಯದೊಳ್ ಸಿಲ್ಕಿ ಬೞಿಕವರಾಲೋಚಿಸುತವರ್ಗೆಂದಂ:— "ತಾಮಿರ್ವರುಮೊಂದೆ ಪೆಣ್ಗೆಯೆ ಬಯಸಿದಪಿರ್. ಮಾರ್ನುಡಿಯಲ್ ಬಗೆ ಪರಿಯದು. ಆದೊಡಂ ನಿಮ್ಮೊಳಾರ್ಗೀ ಬಾಲೆಯೊಲಿವಳವರ್ಗಿವಳನಿತ್ತಪೆಂ, ಸಂದೆಯಮಿಲ್ಲಂ." ಇಂತೊರೆದ ರಾಯನುಕ್ತಿಯಂ ಕೇಳ್ದವರ್

ರುಂ— “ ನಾಳೆ ಬಂದು ಕಜ್ಜಮಂ ಸಜ್ಜುಗೆಯ್ವುಜ್ಜುಗಮನುಸಿರ್ವೆವು. ” ಎಂದು ಬೀೞ್ಕೊಂಡರ್.

ಇತ್ತಲಿವರೊಳ್ನಾರದಂ ತನ್ನ ಬಯಕೆಯೆ ಮೇಲ್ಗೈಯಪ್ಪಂತೆ ಹರಿಯುಂ ಬಲಗೊಳ್ವೆನೆಂದು ಮನೋವೇಗದಿನೊಡನೆಯೆ ವಿಷ್ಣುಲೋಕಕ್ಕೈತಂದು ವೈಕುಂಠಂಗೆ ಬಿನ್ನಯಿಸಿದನಿಂತು :—

“ ಕೇಳ್ಮೈ ಮುಕುಂದ! ನಿನ್ನಿನೆನಗೊಂದು ಮೇಲಕ್ಕುಮಂದಱಿತಾನಿಲ್ಲಿಗೈತಂದೆಂ. ಅಂತದಂ ನೀಂ ಬಲ್ಲೆಯಾದೊಡಂ ಲೋಕರೀತಿಯಿನೊರೆವೆನೇನೆನೆ :— ಅಯೋಧ್ಯಾಪತಿಯುಪ್ಪ ನಿನ್ನ ಭಕ್ತನಂಬರೀಷರಾಯಂಗೆ ಶ್ರೀಮತಿವೆಸರ ಪೆಣ್ಮಗಳುಂಟು. ಕಾರ್ಯಾಂತರದಿನಿಂದಾನಲ್ಲಿಗೆ ಪೋಗಿರೆ, ಸುಶೀಲೆಯಾಬಾಲೆಯುಂ ಕಂಡು ಪರಿಣಯದೆ ವರಿಸಿಕೊಳ್ವುದೆಂಬ ಮನಮೆನಗಾದುದು. ಈಪರಿಯ ಬಯಕೆ, ಅಲ್ಲಿಗೆ ಏಕಕಾಲದೊಳ್ ಬಂದು ಸತ್ಕೃತನಾದ ಪರ್ವತಂಗಂ ಪುಟ್ಟಿದುದು. ಇಂತಪ್ಪ ಬಯಕೆಯಿನಾಮಿರ್ವರುಂ ರಾಯನಂ ಕೇಳೆ, ಇನಿಸುಂ ಪೊೞ್ತು ಜಾನಿಸಿ ಬೞಿಯುಂ— ನಿಮ್ಮೊಳಾರನಿವಳ್ ಮೆಚ್ಚುವಳೋ ಅವರ್ಗವಳೆಂದಂ. ಆನುಡಿಗೆ— ನಾಳೆ ಬರ್ಪೆವೆಂದಿರ್ವರುಂ ಪೊಱಮಟ್ಟೆವು. ಇಂತಿದು ಪೂರ್ವವೃತ್ತಾಂತಂ. ಆವುದಱಿಂ ಸ್ವಯಂವರಕೆ ನಾಳೆ ನೆರವಾಗಲ್, ಪೆಱ ಪರ್ವತಂಗೊಲಿಯದಂತವನ ಮೊಗಮಂ ಮಂಕಡಮೊಗದಂತೆ ಮಾರ್ಪಡಿಸಲಪ್ಪುದು. ಆದೊಡೀಕುಱುಪು ಶ್ರೀಮತಿಗೊರ್ವಳ್ಗೆಯೆ ತೋಱಲಕ್ಕುಮಲ್ಲದೆ ಪೆಱರ್ಗೆ ಕಾಣಿಸಲಾಗದು. ಇನಿತೊಂದುಪಕೃತಿಯನೆಸಗಲ್ವೇೞ್ಕುಂ. ಇಂತು ಕೈಜೋಡಿಸುತೆ ಬಲ್ಬಗೆಯಿಂ ಬೇಡಿಕೊಳ್ವ ಮುನಿಯ ಕಿಬ್ಬಗೆಗೆ ನಕ್ಕು, ದೇವಂ— “ ಅಂತಕ್ಕೆ ” ಎಂದು ಮನ್ನಿಸಿ ಕಳುಪಿದಂ. ಸಮನಂತರದೊಳ್ ಪರ್ವತನುಂ ಪದ್ಮನಾ

ಭನ ಪದಗೊಳ್ಮೆಯುಂ ಪಡೆದು, ಪವಣಱಿತು ಪೆಣ್ಣಂ ಪಿಡಿದಪೆನೆನುತೆ, ಪಾಲ್ಗಡಲೆಡೆಗೆ ಪರಿತಂದಂ. ಬಂದೆಱಗಿದ ತಪೋನಿಧಿಯಂ ಕರುಣಾನಿಧಿಯೊಲ್ದುಪಚರಿಸುತೆ ತನ್ನೆಡೆಗೆ ಬರಲ್ಕಾರಣಮಂ ಬೆಸಗೊಂಡಂ. ತಾನುಸಿರ್ವುದಿದುವೆ ಪ್ರೊಸಬಿನ್ನಪವೆಂದು ಮುನ್ನಂ ನಾರದಂ ಪೇೞ್ದಂತೆಯೆ ಪೂರ್ವೋತ್ತರಂಗಳನಱಕೆಗೆಯ್ದು,— "ದೇವ! ನೀಂ ಪಿರಿಯಂ. ಅರ್ಗೇನೆಣಿಕೆಯಿರ್ಪುದದನೀಯಲ್ತಕ್ಕವಂ. ನಾಳಿನ ಪಂತದೊಳ್ ಬಾಲೆಗೆ ನಾರದನೊಳ್ ಬೇಸರ್ಪುಟ್ಟುವವೋಲ್ ಮೊಗಂ ಕೋಡಗನ ಮೊಗದಂತೆ ಪುಟ್ಟುಗೆ! ಅಂತದನ್ಯರ್ಗೆ ತಿಳಿಯಲ್ಬಾರದು. ಇಂತೊಂದು ದಯೆಗೆಯ್ದೊಡಾಂ ಗೆಲ್ದೆಂ." ಎನೆ; ಕರುಣಾಳು ತಾಂ— "ಆಃ! ಇವರಿರ್ವರ್ಗಂ ಮನಮುಂ ಮೋಸಗುಣಮುಮೊಂದೆ ಗಡ! ತಕ್ಕುದನುಣ್ಗೆ." ಎಂದು ತನ್ನೊಳೆ ಪರಿಭಾವಿಸಿ, "ತಥಾಸ್ತು" ಎನುತೆ, ಈ ಸಮಾಚಾರಮಂ ನಾರದಂಗುಸಿರದಿರೆಂದಪ್ಪಣೆಯಿತ್ತಟ್ಟಿದಂ.

ಮಾಧವನಾಣತಿವಡೆದಿಂಗಡಲಿಂ ತಳರ್ದು ಅಯೋಧ್ಯೆಗೆಯ್ತರ್ಪ ಬಟ್ಟೆಯೊಳ್ ಪರ್ವತಂ ತಾಂ ತನ್ನೊಳೆ— "ಗೆಲ್! ಗೆಲ್! ಪೆಣ್ಣೊಂದೆನ್ನ ಕೊಂಕುೞೊಳ್ ಸಿಲ್ಕಿದುದು. ಅಂತೆಯು ಮಂಗಮುಸುಡಂ ಕಂಡು ಕನ್ನೆ ನಾರದನಂ ಒಲಿವಳೇ! ಉಃ! ಎಂದುಂ ಮೆಚ್ಚಳ್; ಬಳ್ಳಿತಾದುದು." ಎಂದು ಪಲವಂ ಪಂಬಲಿಸುತಿರ್ದಂ. ಪೆಱತೊಂದೆಡೆಯೊಳ್ ನಾರದನುಂ— ಆ ಬಾಲೆ ಪರ್ವತನಂ ಕಂಡೆನಿತು ಹಾಸ್ಯಂಗೆಯ್ವಳೋ, ಮೋಣದರ್ಕವನೆನಿತು ನಾಣ್ಬುವನೋ ಕಾಣ್ಬೆನೆನುತಾಲೋಚಿಸುತೆ ಅಯೋಧ್ಯೆಗೆ ಬರುತುಮಿರ್ದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್

ತೃತೀಯಾಶ್ವಾಸಂ

ಸಂಪೂರ್ಣಂ.

# ಚತುರ್ಥಾಶ್ವಾಸಂ.

---

ಆಲಿಸೈ ಮುನಿಪುಂಗವ! ಅತ್ತಲಂಬರೀಷಂ ನಿಜಸುತೆಯ ಸ್ವಯಂವರಕೆಂದು ಪಟ್ಟಣದೆಲ್ಲೆಡೆಗಳಂ ಮಂಡಪತೋರಣಧ್ವಜಪತಾಕೆಗಳಿಂ ಸಿಂಗರಿಪಂತೆಯುಂ, ಬೀದಿಗಳಂ ಗಂಧೋದಕದಿಂ ಸಾರಣೆಗೆಯ್ದು ರಂಗವಲಿಗಳನಿಟ್ಟು ಪೂಜಲ್ಲಿಗಳಂ ಬಿಟ್ಟು ಸೊಗಯಿಸುವಂತೆಯುಂ, ಅರಮನೆಯಂ ನವರತ್ನಾದಿಗಳಿನಲಂಕರಿಪಂತೆಯುಂ ಆಣೆಗೆಯ್ದು ಮಿಕ್ಕ ಸನ್ನಣದೊಳಿರ್ದಂ.

ಇಂತೊಪ್ಪುವ ನಾಡ ಸೊಬಗಂ ಕಾಣುತೆ ರಿಸಿಗಳಿರ್ವರ್ ಸಂತಸಂಗೊಂಡು ಪೇೞ್ದ ಗಡುವಿಂಗೆ ತಪ್ಪದೈತರುವರನರಸಂ ಸನ್ಮಾನಿಸಿ, ಬೞಿಯಂ ಕುವರಿಯಂ ಸ್ವಯಂವರಮಂಡಪಕೆ ಕರೆತಂದು, ಮಗಳ್ಗೆ— "ಎಲೌ ಬಾಲೆ! ಇವರಿರ್ವರುಂ ನಿನ್ನಂ ಬಯಸಿದಪರ್. ಆದೊಡೆ ಪೆಣ್ಣೊರ್ವಳೊರ್ವಂಗಲ್ಲದೆ ಇರ್ವರ್ಗಮಾಗದುದಱಿಂ ನೀನಾರನೊಲಿವೆ, ಅವರ್ಗೀವೆಂ ನಿನ್ನಂ. ಆದುದಱಿನಿವರೊಳಾರಪ್ಪರವರ ಕೊರಲ್ಗೆ ಈಪೂಸರಮನಿಕ್ಕುವುದು." ಎಂದುಸಿರ್ದಂ.

ಅಯ್ಯನಾಣತಿಯನಾಂತಣುಗಿ ಎನಸುಂ ನಾಣ್ಚಿ ಕರದೊಳ್ ಪೂಮಾಲೆಗೊಂಡು ಪಿಡಿನಡೆಯಂತೆ ಸಹಚರಿಯರ್ವೆರಸು ಮೆಲ್ಲನವರಿರ್ವರ ಸನಿಯಮಂ ಸಾರ್ದು ಕಣ್ಬೊಗರನಿರ್ವರೊಳಂ ಪಸರಿಸಿ ಇನಿಸುಂ ಜಾಸಿಸಿ ಮೋಱೆ ನೆಲನಂ ಕಾಣುತುಸಿಕಮಿರ್ದಳ್.

ಬಾಲೆಯಿಂತು ಸುಮ್ಮನೆ ಸಿಲ್ತಿರೆ; ಕಂಡು ರಾಯಂ— "ಏಂ ಮಗಳೆ! ಮನಬಂದಂಗೆ ಮಾಲೆಯಿಕ್ಕೆನೆ ಮಾಣ್ದ; ಪೆಱತೇನನೆಣ್ಣದಿರ್. ಇರ್ವರುಂ ಜೇದಬಿಜ್ಜೆಗಂಗೆ ಸರಿಮಿಗಿಲೆನಿಪರ;

ಮಾದೇವನಂತೆ ಮೆಯ್ಮೆಯುಳ್ಳರ್; ಸಿರಿಯರಸನಂತೆ ಸೊಗಸುಳ್ಳವರ್; ನಾಡಾಡಿ ಕಿತ್ತಡಿಗಳಲ್ತು; ಸಂದೆಯಮಣಮಿಲ್ಲದೆ ಇವರೊಳ್ ಮನಬಂದವನನಾಯ್ದುಕೊಳ್ವುದು." ಎಂದಱುಹಲಾಬಾಲೆ ಬೆದರ್ದು ಪಿತಂಗೆ–"ಬೊಪ್ಪ! ನೀನೊರೆವಂತೆ ರಿಸಿಗಳಾರುಂ ತನಗೆ ಕಾಣಿಸರ್; ಮಂಗಮುಸುಡಿನವರಾರೋ ತನ್ನಿದಿರ್ಗೆ ನಿಲ್ತಂತೆ ತೋರ್ಪುದು. ಆದೊಡಿವರ ನಡುವೆ ಸರ್ವಾಭರಣಸಂಯುಕ್ತನುಂ, ವಿಶಾಲಾಕ್ಷನುಮಾಜಾನುಬಾಹುವುಂ, ತುಂಗೋರಸ್ಥಲನುಮಪ್ಪ ಷೋಡಶವರ್ಷದ ಪರನೊರ್ವನಂ ಕಾಣ್ಬೆಂ. ಅಂತಿರ್ಪನ ಪೀತಾಂಬರಮುಂ, ಶ್ಯಾಮಾಂಗಮುಂ, ಶುಭಗಾತ್ರಮುಂ ಮನಂಗೊಳ್ವುದು; ಪದ್ಮಲೋಚನಂಗಳನೆನ್ನನೆ ದಿಟ್ಟಿಪಂ; ಮೇಣ್ ನಗುವಂ. ಆಗಳ್ ಕುಂದಕುಟ್ಮಲದಂತಿರ್ಪ ಪಲ್ಗಳ್ ಸ್ಪಷ್ಟಂ ತೋರ್ಪುವು; ಮತ್ತಮಾಪುರುಷಂ ಬಲಗೈಯನೆನ್ನ ಕರಮಂ ಪಿಡಿಯಲೆಂಬೋಲ್ ಮುಂದೆ ನೀಡಿರ್ಪಂ." ಎಂದು ಮಾರ್ನುಡಿದಳ್.

ಬೞಿಯಂ ಬಾಲೆಯ ಭಾಷಣಮಂ ಭಾವಿಸಿ ನಾರದಂ ಕಟ್ಟಚ್ಚರಿಯೊಳ್– "ಎಲೆ ಕನ್ಯಾಮಣಿಯೆ! ಅಂತು ನೀಂ ನೋೞ್ಪವಂಗೆ ತೋಳ್ಗಳೆನಿತಿರ್ಪುವು? ಕಂಡಂತುಸಿರ್." ಎನಲ್ "ಎರಡೆ" ಎಂದಳ್. ಆಗಳ್ಮಗುೞ್ದಂ,– "ಆತನ ವಕ್ಷಸ್ಸ್ಥಳದೊಳೇನಂ ಕಂಡಪೆ? ಮತ್ತಂ ಕರದೊಳೇನಂ ಪಿಡಿದಿರ್ಪಂ?" ಎಂದು ಬೆಸಗೊಂಡೊಡೆ;– "ವಿಶಾಲವಕ್ಷಸ್ಸ್ಥಳದೊಳ್ ದಿವ್ಯಮಾಲಿಕೆಯುಂ, ಶುಭಹಸ್ತಂಗಳೊಳ್ ಕಾರ್ಮುಕಸಾಯಕಂಗಳುಮೆಸೆದಿರ್ಪುವು." ಎಂದಱುಹಿದಳ್.

ಶ್ರೀಮತಿಯ ನುಡಿಗಿರ್ವರುಮಚ್ಚರಿವಡುತಾತ್ಮಗತಚಿಂತೆ

ಯೊಳ್ ಬಹುದೂರಂ ಜಾನಿಸಿ,– ಮಾಯಿಕಮಿದು, ಮಾಧವನಿನಲ್ಲದೆ ಪೆಱರಿನಾಗದೆಂದು, ನಾರದಂ– ಆತನವನಲ್ಲದೊಡೆ ತನ್ನ ಮೊಗಮಿಂತೇಕಾಕೆಗೆ ಕಾಣಲಾದುದೆನುತೆ; ಪರ್ವತಂ– ನಾರದನ ಮೊಗಮಂತಿರ್ಪುದು ತಕ್ಕುದು, ಆದೊಡೆನ್ನತೇಕಿಂತು ತೋರ್ಪುದೆನುತೆ; ಇರ್ವರುಂ ನುಡಿಯುತಿರ್ದರ್.

ಇಂತಿರಲಂಬರೀಷನವರ್ಗೆಱಗುತೆ– "ಪೂಜ್ಯರೆ! ಬಗೆಯಿಾತೆಱದೊಳ್ ಮರುಳ್ಗೊಳಲೇಂಗೈದಿರ್? ಎನ್ನಯ ಕನ್ನೆಯೊಳ್ ಮನಮಿಟ್ಟು ಬಂದಿರ್ಪಿರಾದೊಡೆ ಕೊಂಚಂ ಸ್ವಸ್ಥಮಿರ್ಪುದು. ಪದಣಱಿತು ಪೇೞ್ವೆಂ." ಎಂದೊಡೆ; ನಸುಮುನಿಸಿಂ– "ಮರುಳ್ಗೊಂಡವರಾವಲ್ತು; ನೀನೆ. ಈಪೆಣ್ಣೆಮ್ಮನೊಲಿಯುದೊಲೆಂತೊ ಕಪಟಮುಂ ಕುವರಿಗೂರೆದೋ, ನೀನೆಯೋ ಎಸಗಿರ್ಪೆ." ಎನುತೆ ಮಱುಮಾತಾಡಿದರ್. ಈಬಿಱುನುಡಿಯುಂ ಲಾಲಿಸುತಾಬಾಲೆ–ಇವರ್ ತಾತಂಗೇನಾನುಂ ಶಾಪಮಿತ್ತಪರೆಂದು ತಳಮಳಂಗೊಂಡು ಮುನ್ನಂ ಕಾಣಿಸಿಕೊಂಡ ದಿವ್ಯಪುರುಷನಂ ಮನದೊಳ್ ಜಾನಿಸಿ, ತವಸಿಗಳೊಳೊರ್ವಂಗೆ ಸರಮನಿಕ್ಕುವೆನೆಂದು ಮುಂದಡಿಯಿಟ್ಟಳ್. ದೈವಸಂಕಲ್ಪಮನಾರ್ ಮೀರ್ದರ್. ಅಂತವರೊಳೊರ್ವಂಗೆ ಮಾಲೆಯಿಕ್ಕುವೆನೆನುತೆ ಪೆಜ್ಜೆಯಿಕ್ಕಿದ ಪೆಣ್ ಮಗುೞ್ದುಮಾಸುಂದರಮೂರ್ತಿಯುಂ ಮೋಹಿಸುತೊಡನಾತಂಗೆಯೆ ಸರಮಂ ಹಾಯ್ಕಿದಳ್. ಅನಿತಱೊಳಚ್ಚರಿಗೆ ತಕ್ಕಂತೆ ಆಕನ್ಯೆಯುಂ ಮೇಣಾದಿವ್ಯಪುರುಷನುಂ ಕಾಣಿಸದಾದರ್. ಚಿತ್ತಯಿಸೈ, ಮುನಿಯೆ! ಆಬಾಲೆಯನುಯ್ದವನಾರೆಂದು ಬಲ್ಲೈ; ಸಾಜಮಾದ ಭಗವಂತಂ. ಆತನುಂ ನಿರ್ವ್ಯಾಜಂ ಪಡೆದನಲ್ತು; ಆಪೆಣ್ಗೆಯೆ ಅನಿಶಂ ತಪಮೆಸಗಿ ಪೂರ್ವಸಂಕಲ್ಪಾನುರೂಪಂ ಪೊಂದಿದಂ.

ಇತ್ತಲಿರ್ವರುಂ ದುಃಖಾಕುಲರ್ ವೈಕುಂಠನೊಳ್ ಇಂತೀಪರಿಯಿಂ ನಿಧಾನಿಸ್ಪುದೆಂದು, ಗಳ್ಕನೆ ವೈಕುಂಠಕ್ಕೈತರಲಿತ್ತಲ್ ಶ್ರೀಹರಿ ತಾಂ ಶ್ರೀಮತಿಯುಮಂ ಕುಱಿತು—“ಎಲೆ ಮೋಹನಾಂಗಿ! ನಿನ್ನಿಂ ವಂಚಿತರಾದಾತವಸಿಗಳೀಗಳಿದೆಕೊಳ್ ಬರ್ಪರಿತ್ತಲ್. ಆದುದಱಿಂ ನೀನೆನ್ನಂತರಂಗದೊಳ್ಗುಪ್ತಳಾಗು.” ಎನೆ; ನಸುನಗುತಂತೆಯೆ ಒಳಪೊಕ್ಕಳ್.

ಸಮನಂತರದೊಳ್ ನಾರದನುಂ ಪರ್ವತನುಂ ಪುರಾಣಪುರುಷನಂ ಕಂಡೆಱಗುತವನೊಳ್ ಮೊದಲನೆಯಂ—“ದೇವ! ಇಂದೆಮಗಿರ್ವರ್ಗಂ ಬಳ್ಳುಡಿಯನೊಪ್ಪಂಬಾಸಿದೈ! ಇಂತೆಮ್ಮನೞಲಿಸಿ ಬೞಲಿಸಲ್ಬಹುದೆ? ನಿಶ್ಚಯಂ ನೀನೆ ಆಪೆಣ್ಣಂ ಕಳ್ದು ತಂದವಂ. ಚೀ! ವಿಶ್ವಾಸಘಾತಕಮನಾರ್ಗುಮೆಸಗಬಾರದು. ಸಾಲ್ಗುಂ. ಜೀಯ! ನೀಂ ಪಿರಿಯಂ.” ಎನೆ; ಕಿವಿಮುಚ್ಚಿ ಪುಸಿಮುನಿಸಿಂ—“ಇನ್ನೆಗಂ ನೀಂ ಯೋಗ್ಯನೆಂದೆಣಿಸಿರ್ದೆಂ. ಈಗಳ್ ಸೋರ್ಕೆ ನೀನೆಂತಾನುಂ ಗೞಪುವುವಂ ಕಾಣುತ್ತೆ, ಋಷಿಸ್ವಭಾವಮನೆನಿತುಂ ಲಕ್ಷಿಸೆಂ. ಎಲೆ ಮುನಿಪ! ನೀನುಸಿರ್ವುದು ಸಾಜಮಲ್ಲಂ; ಮೇಣಂತು ಕಾರಣಮುಮಿಲ್ಲಂ.” ಎಂದು ಸಿರಿಯರಸನೊರೆದಂ. ಅವರ್ಕೆ ನಾರದಂ—“ಅಂತಾದೊಡೆನ್ನ ಮೊಗಂ ಮಂಗಮುಸುಡಂತೇಕೆ ವಿಕಾರಮಾಯ್ತು?” ಎಂದು ಕೇಳೆ; ನಾರಾಯಣಂ—“ಆಃ! ಪಲವುಂ ಕಾಲಮೆನ್ನಂ ಭಜಿಸುತಿರ್ದೊಡಂ ನೀನೆನ್ನ ಮೈಮೆಯು ನೆಲೆಗಂಡುದಿಲ್ಲಂ. ಆಂ ಭಕ್ತಾಧೀನನಪ್ಪೆಂ. ಸರ್ವರುಂ ಸಮಂ. ನೀನೆಂತು ಆಪೆಣ್ಣ ಕತದಿಂ ಬೇಡಿದೆ ಅಂತೆ ಈ ಪರ್ವತನುಂ ಕೇಳ್ದಂ. ಅದಱಿನಿರ್ವರ್ಗುಮಿಂತಾದುದು. ದೂಱಗಾರುಮಿಲ್ಲಂ. ಆರ್ ಏಂ ಬೇಳ್ಪರವರ್ಗೆ ಅದನೀವುದೆನ್ನ ಬಿರುದು.

ಆಂ ಸತ್ಯಸಂಧಂ. ಸತ್ಯಬಲದಿಂದೆಯೆ ಚಕ್ರಮಿದು ಕೈಸೇರ್ದು ದು.” ಎಂದಂ.

ನಾರಾಯಣನಾಜ್ಞೆಯುಂ ನಾರದನಾಲಿಸಿ–“ನಿನ್ನಪ್ಪಣೆಯು ನಿತುಂ ನಿಜಮಾದೊಡಂ ಸ್ವಯಂವರಮಂಡಪದೊಳ್ ಎಮ್ಮೊಳೊರ್ವನನಾಯ್ದು ಕೊಳೆ ಬಂದಾಬಾಲೆಗೆ ಎಮ್ಮೆಡೆಯೊಳೊರ್ವಂ ಧನುರ್ಬಾಣಂಗಳನಿರ್ಕೈಗಳೊಳ್ ಪಿಡಿದಿರ್ಪವಂ ಬಾಲಸುಂದರಂ ಗಡ! ಆರೆಂದಾರಯ್ದುದಿಲ್ಲ ; ಅಂತುಮವನೆ ಕಳ್ದುಯ್ದುದು ದಿಟಂ.” ಎಂದು ಪೇಳ್ದಂ.

ಇದರ್ಕೆ ಜನಾರ್ದನಂ–“ಅಕ್ಕುಂ. ಲೋಕದೊಳ್ ಮಹಾತ್ಮರೆನಿಪರೊಳನೇಕರ್ ಮಾಯಾವಿಗಳೊಳರ್. ಅಂತಪ್ಪವರೊಳಾರೊ ಕನ್ನೆಯುಂ ಕಳ್ದುಯ್ದಿರವೇೞ್ಕುಮಲ್ಲದೆ ಎನ್ನಿನಾದ ಕಜ್ಜಮಲ್ತು. ಏತರ್ಕೆನೆ? ಅನೇಗಳುಂ ಚತುರ್ಭುಜನುಂ, ಚಕ್ರಪಾಣಿಯುಮಾಗಿರ್ಪೆನಲ್ತೆ ; ಪುಸಿಯುಸಿರಲ್ ಕಜ್ಜಮಿಲ್ಲ.” ಎನೆ; ರಿಸಿಗಳರ್ವರುಮೊಡಂಬಡುತೆ–“ನಿನ್ನೊಳಾವ ತೆಱದ ಸಂದೆಯಮುಂ ಕಾಣಿಸದು. ಅವಿವೇಕಿಗಳೆಮ್ಮತಪರಾಧಮಿದಂ ಕ್ಷಮಿಸಿ ಕೂರ್ಮೆಯಿಂ ಪೊರೆವುದು.” ಎಂದೆಱಗಿ,–ಅಂಬರೀಷನೆ ಎಮ್ಮಂ ವಂಚಿಸಿರ್ಪನೆಂದು ಕಡಂಗಿ ಮರಳ್ದಯೋಧ್ಯೆಗೆ ತೆರಳ್ದರ್.

ಭಾರದ್ವಾಜ! ಒಡನೆಯೆ ಮುನಿಗಳಂಬರೀಷನೆಡೆಗೆಯ್ತಂದು ರಾಯನೊಡನೆ ಕೋಪದ ಬಿಂಕದಿಂ–“ಎಲೆಲೆ! ಪಿಡಿ ಶಾಪಮಂ. ಎಮ್ಮೊಳೊರ್ವಂಗಾಪೆಣ್ಣನೀವೆನೆಂದು ನಂಬಿಸುತೆ ಬರಿಸಿದ ಕತದಿಂ ಮೋಸ ನುಡಿಗೆ ಪುಸಿದಟವಟದಿಂದನ್ಯಂಗೆ ಕನ್ನೆಯನಿತ್ತೆಮ್ಮನೇಳಿಸಿದ ಕಾರಣದಿಂದೆ ನಿನಗೆ ತಮೋಜ್ಞಮಕ್ಕೆ! ಈಯೋಗದಿನಾತ್ಮಜ್ಞಾನಂ ನಾಱಿತು ಪೋಕೆ!” ಎಂದು ಶಪಿಸಿದಾಗ

ಳೇನೊರೆವೆಂ ; ಅಂಧಕಾರದಂತವನಿದಿರ್ಗೆ ತಪೋರಾಶಿಯಾವಿರ್ಭವಿಸಿದುದು. ಎಂತಾದೊಡಂ ಭಗವದ್ಭಕ್ತರ್ಗೆ ಬವಣೆ ಬರ್ಪುದೆ? ರಥಾಂಗಪ್ರಭಾವದಿಂ ರಾಯಂಗಿನಿಸುಂ ತೊಡರ್ ತೋರ್ದುದಿಲ್ಲಂ. ತಪೋರಾಶಿಯುಂ ಋಷಿಗಳುಮಂ ಬೆಂಬತ್ತಿ ಪೋದುದಾಚಕ್ರಂ. ಇಂತು ಬಹುದೂರಮಟ್ಟುತುಪದ್ರವವನೀಯುತಿರಲವರ್ಗೆ ಪೆಣ್ಣಿನಾಸೆಯುಮಿಲ್ಲಂ ; ಮಣ್ಣಿನಾಸೆಯುಮಿಲ್ಲಂ ; ಮೋಹಶೋವರ್ಗೆ ಸ್ವಾಮಿಯುಂ ಕಾಣ್ಬುದೊಂದೆ ಬಯಕೆ ಪಿರಿದಾಯ್ತು. ಅಂತುಮಿಂತುಂ ಮುನಿವರುಂ ತಪೋರಾಶಿಯುಂ ಪಿಂತಾಪಾಱುಂಬಳಿಯುಂ ಬರೆ ; ಮತ್ತಂ ವಿಷ್ಣುವೆಡೆಗೆ ಬಂದು, ಮಣಿದು,— “ ಜನಾರ್ದನಾ ! ಪದ್ಮನಾಭಾ ! ಪುರುಷೋತ್ತಮಾ ! ಲೋಕನಾಥಾ ! ನೀನೆ ಎಮ್ಮಂ ಕಾವುದು. ” ಎಂದರ್. ಭಕ್ತಾಧೀನಂ ತನ್ನೊಳೆ— ಬಲ್ಲಬಿಲ್ದರಿವರೆನ್ನಂ ; ಅಂಬರೀಷರಾಯನೆಂತಂತಿವರುಂ ಕೇವಲಭಕ್ತರ್ ; ಇನ್ನುಂ ದಣಿಸಲಾಗದು ; ಮುಂತಣಾಟಕದ್ದಿಯಕ್ಕುಮೆನುತೆ ಮನದಂದು, ಚಕ್ರಬಾಧೆಯುಂ ಮೋಹಾಂಧಕಾರಮುಂ ತೊಲಗಿಸಿ, ನಾರದಪರ್ವತರ್ಕಳಂ ಕುಱುತು—“ ತಾಪಸೋತ್ತಮರಿರಾ ! ಪೆಣ್ಗಾಗುತೆ ಸೋಲ್ತಿರ್ಪೈ; ನಂಬಿದನಂ ಪೊರೆಯಲೆಸಗಿದ ಇಂತಪ್ಪ ಕೃತ್ಯಕೆ ಎನ್ನುಮಂ ಮೋಹ ಚಕ್ರಮುಮನೀಗಳ್ ಕ್ಷಮಾಶೀಲರಪ್ಪುದಱಿಂ ಮನ್ನಿಪುದು. ” ಎಂಬುದುಂ ; ಉರಿಗಿಚ್ಚಿಗೆ ನೆಯ್ಯೆಱೆಯೆ ಕೆದರ್ದಂತೆ ಕೋಪಂ ಕೆದಱಿ, ಎಳ್ದುನಿಲ್ತಿರ್ದರುಂ — “ ನೀನೇ ಶ್ರೀಮತಿಯುಂ ಮಾಯೆಯಿಂ ಕಳ್ದು ತಂದವಂ, ನಿಜಂ, ಅಕ್ಕೆ; ಆವ ರೂಪದಿನಾಪೆಣ್ಣಂ ಮೋಸದಿಂ ಕೊಂಡುಯ್ದೆಯೊ, ಅಂತೆ ಇತರ್ಕಳಂ ತಳೆದು ಆಅಂಬರೀಷರಾಜವಂಶದೊಳ್ ದಶರಥಂಗೆ ಪುಟ್ಟು ! ಶ್ರೀಮತಿಯುಂ ಮಗುಳ್ದು ತಿರೆಗೆ ಜನಿಸುಗೆ ! ಮಿಥಿಲಾ

ಧಿಪಂ ಜನಕಂ ಮೇಣ್ ಪೊರೆಗೆ! ಎಂತೆಮ್ಮಂ ವಂಚಿಸಿ ಆಪೆಣ್ಣಂ ಕಳ್ದುಯ್ದೆಯೊ, ಅಂತು ನಿನ್ನ ದ್ವಿತೀಯೆಯುಮವಳನೊರ್ವ ರಕ್ಕಸಂ ಕೊಂಡುಯ್ಗೆ! ಮೇಣೀಗಳವಳ ಸಂಬಂಧದಿನಾಮುಮೆಂತು ದುಗುಡದಿಂ ಬೞಲ್ದೆಮದಱಿಂ ಪಿರಿದು ನೀಂ ದುಃಖಿಂದಾಳ್.” ಎಂದು ಶಪಿಸಿದರ್. ಭಕ್ತರ ನುಡಿಯೆ ತನ್ನ ನುಡಿಯೆಂಬೋಲ್ ಇಂದಿರೆಯರಸನವರ ಶಾಪಮುಂ ಪೊಱೆವೆನೆಂದು—“ಅಕ್ಕುಂ. ನೀಮುಸಿರ್ದಂತೆಯೆ ಅಂಬರೀಷರಾಜವಂಶದೊಳ್ ಯಶಸ್ವಿಯುಂ ಧಾರ್ಮಿಕನುಮಪ್ಪ ದಶರಥಭೂಪಾಲಂಗೆಯೆ ಪಿರಿಯಂ ರಾಮನೆಸರಿಂ ಪುಟ್ಟುವೆಂ. ಆಗಳೀಗಳೀಮಿಕ್ಕಿರ್ದ ತೋಳ್ಗಳೊಳ್ ಬಲದೋಳ್ ಭರತನುಂ ಎಡದೋಳ್ ಶತ್ರುಘ್ನನುಂ ಮೇಣೀಶೇಷಂ ಲಕ್ಷ್ಮಣನುಮಾಗೆ ಸೋದರರ್ ಪುಟ್ಟುವರ್. ಎಂದೆಮ್ಮವತಾರಮಪ್ಪುದು ಅಂದು ನೀವೆಮ್ಮಂ ಕಾಣಲಕ್ಕುಂ. ಅಂದು ಪರ್ಯಂತಮಂಬರೀಷನ ನಾಡೊಳಲ್ಲದೆ ಪೆಱತೆಲ್ಲಿಯುಂ ಯಥೇಚ್ಛಮಿರ್ಪುದು. ರಿಸಿಸಾಪಂ ಪುಸಿಯಾಗದು.” ಎಂದು ಅಂಧಕಾರಮುಂ ಮೇಣ್ ಶಾಪಮಂ ತಿಳಿಪಿದಂ. ಆಗಳಾತಮೋರಾಶಿಯುಂ ಋಷಿಶಾಪಮುಮಡಂಗಿದುವು. ಚಕ್ರಮುಂ ಮುನ್ನಮಾರ್ಗಿರ್ದುದವರೊಳ್ ಸೇರ್ದುದು. ಇಂತೀಪರಿಯುಂ ಕಾಣುತೆ ಪಿತ್ತಮಿೞಿಯೆ ಮುನಿಗಳಿರ್ವರುಂ ಬೆದರ್ದು—“ಏತರ್ಕಾಪೆಣ್ಣಂ ಬಯಸಿದುದು ; ಒರ್ವಂ ಮೇಣೊರ್ವನಂ ವಂಚಿಸಲೇಕೆಳಸಿದುದು ; ಮೇಣಂಬರೀಷಂಗಂ ಜನಾರ್ದನಂಗುಂ ಶಪಿಸಿದುದೇಕೆ?” ಎಂದು, ಚಿಂತಿಸುತೆ,—“ಚಿಃ ! ಮುಂದಿಂತಿರಲಾಗದು. ಇಂದು ಮೊದಲ್ಗೊಂಡು ದೇಹಾಂತಪರ್ಯಂತಂ ಕನ್ಯಾಪರಿಗ್ರಹಂಗೆಯ್ವುದಿಲ್ಲಂ. ಈನುಡಿಗೆ ಭಗವಂತನೇ ಸಾಕ್ಷಿಯಕ್ಕೆ!” ಎಂದು ಪ್ರತಿಜ್ಞೆಗೆಯ್ದು ಮುನ್ನಿನಂತೆ

ತವಮ್ಮಾಶ್ರಮಂಗಳ್ಗೆ ತಪಮನೆಸಗೆ ಪೋದರ್. ಅಂಬರೀಷರಾಯನುಂ ಬಹುಕಾಲಮರಸುಗೆಯ್ದು ಪುಣ್ಯಾತ್ಮಂ ಪುಣ್ಯಲೋಕಮಂ ಪೊರ್ದಿದಂ. ಕೇಳ್ದೆಲೆ, ಮುನಿಪ! ಅಂಬರೀಷನ ಮಾನರಕ್ಷಣಾರ್ಥಮುಂ ನಾರದಪರ್ವತರ ಪ್ರತಿಷ್ಠಾರ್ಥಮುಂ ನರರೂಪಮಂ ತಾಳ್ದ ಪರಿಯುಂ. ಆಃ! ಮಾಯೆ ತೋರ್ದುದರಿಂ ಮಹಾವಿಷ್ಣುವಿಂಗಾದೊಡಂ ಮಾನುಷಜನ್ಮಮಾದುದು ಗಡ! ಇಂತಿರೆ ಕುಊವಾಸಿಸರ್ ಕಪಟಮುಂಗೆಯ್ದೊಡೆ ಆವ ಜನ್ಮಂ ಬರ್ಕುಂ ಪೇಳ್; ಕಪಟಮಾರ್ಗಂ ಸಲ್ಲದೈ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್

ಚತುರ್ಥಾಶ್ವಾಸಂ,

ಸಂಪೂರ್ಣಂ.



# ಪಂಚಮಾಶ್ವಾಸಂ.

---

ಭಾರದ್ವಾಜ! ರಾಘವಂ ಪಂತಿದೇರಂಗೆ ಪುಟ್ಟಿದ ಪರಿಯನಱಿತೈ. ಈಗಳಾಸೀತಾಜನ್ಮಕಥನಮಂ ಬಿತ್ತರಿಪೆಂ. ಕಿವಿಗೊಟ್ಟಾಲಿಸಾ.

ಮುನ್ನಮೆರಡನೆಯ ಯುಗದೊಳ್ ಕೌಶಿಕನೆಂಬೊರ್ವ ವಿಪ್ರನಿರ್ದಂ. ಆತಂ ನಿತ್ಯಂ ಸದಾಚಾರಸಂಪನ್ನಂ, ವಿಷ್ಣುಪರಂ, ಪುಣ್ಯಕ್ಷೇತ್ರಂಗಳಂ ಸಂಚರಿಸುತೆ, ಹರಿಕೀರ್ತನೆಯಂ ಸ್ವರರಾಗತಾಳಲಯಮೂರ್ಛನಾದಿವಿಧಿಯಿಂ ಪಾಡುತೆ, ದೈವನ್ಯಸ್ತಭರಂ ತಿರಿಕೊೞಿಂ ಜೀವಿಸುತಿರ್ದಂ.

ಇಂತಿರ್ಪುದುಮೊಂದು ದಿನಮಂತಪ್ಪ ಕ್ಷೇತ್ರಂಗಳೊಳೊಂದಂ ಸಾರ್ದು, ಭಗವಂತನಂ ಪೊಗೞುತುಮಂತೆಯೆ ಗಾಯನಂಗೆಯ್ಯುತಿರೆ; ಪದ್ಮಾಕ್ಷನೆಂಬೊರ್ವಂ ಪಾರ್ವಂ ಕ್ಷೇತ್ರವಾಸಿ ಅವನ ದೈವಭಕ್ತಿಗಂ ಪಾಡಿನ ಜಾಣ್ಮೆಗಂ ಮೆಚ್ಚುತಾವಗಮಗಲದೆ ಬೞಿಯೊಳಿರ್ದು, ತಾನುಂ ಭಗವದ್ಭಕ್ತನಪ್ಪುದಱಿನವನೊಡನೆ ಪಾಡುತುಂ, ಭಿಕ್ಷಾನ್ನಕೆ ಪಡಿಯಾಗಿ ಕೈಯೋಗರಮಂ ತಾನೆ ತಂದೀವಂ. ಇಂತಾಗಬಡಪಾರ್ವನ ಕೌಶಿಕನ ಬವಣೆ ನಿಲ್ತುದು. ಮೇಣೊರ್ವಂ ಮಾಲವವೆಸರ ವಿಷ್ಣುಭಕ್ತಂ ಆಕ್ಷೇತ್ರದ ದೇಗುಲದೊಳ್ ತೂಗುಂಜೊಡರನುರಿಯಿಸುವಂ, ಸೇವಿಸುವಂ; ಈತನ ಪೆಂಡಿತಿ ಮಾಲತಿ ಆವೆಡೆಯಿಂದೆಡೆಯುಂ ಸಾರಿಸಿ ರಂಗವಲ್ಲಿಯನಿಕ್ಕಿ ಸಿಂಗರಿಸಿ, ಉೞಿದ ಪೊೞ್ತಿನೊಳ್ ಕೀರ್ತನೆಯಂ ಕೇಳುತೆ ಇರ್ಪಳ್. ಕ್ಷೇತ್ರಮಿದು ನಾಲ್ದೆಸೆಯೊಳಂ ಪೆಸರ್ವಡೆಯೆ, ಕುಶಸ್ಥಲಿಯೆ ಮುಂತಪ್ಪ ಪಲವೆಡೆಯ ಯಾತ್ರಿಕರುಂ ಬಂದು ಕೌಶಿಕನನೋಲಗಿಸುತಿರ್ಪರ್.

ಈ ಪರಿಯೊಳ್ ಕೆಲಗಾಲಂ ಪೋಗೆ, ಕೌಶಿಕಮುನಿಗೆ ಬ್ರಹ್ಮಕ್ಷತ್ರವೈಶ್ಯರೆಂಬೀ ಮೂಱುವರ್ಣಂಗಳೊಳಂ ಶಿಷ್ಯರನೇಕರೊದವಿದರ್. ಇಂತು ಗಾನವಿಜ್ಞಾನದೊಳ್ ಪ್ರಖ್ಯಾತನಾದ ಕೌಶಿಕನ ಕೀರ್ತಿಯಂ ಕೇಳ್ದೊರ್ವ ಕಳಿಂಗದೇಶಾಧಿಪನಾಯೆಡೆಗೆ ಬಿಜಯಂಗೆಯ್ದು, ಕೌಶಿಕಂಗೆ ಕಾಣಿಸಿ ಕೊಂಡು, ಸತ್ಕೃತನಿಂತೆಂದಂ:- "ಸುಗುಣರೊಡೆಯ! ನೀಂ ಪಾಡುಂಗಾಱಿಕೆಯೊಳ್ ಬಲ್ಲಿದನೆನಿಪ ಜಸಮಂ ಕೇಳ್ದಲ್ಲಿಗೈತಂದೆಂ. ಆಂ ಕಳಿಂಗಪುರವರಸಂ; ನೀನೆಂತಪ್ಪುದಿಂದೆನ್ನಂ ಪೊಗೞ್ದು ಪಾಡುವುದು. ಬೞಿಕಮಾನುಂ ಪಾಡುವೆಂ. ಎಮ್ಮಿರ್ವರ ಪಾಡ ಬಗೆಯುನಿವರೆಲ್ಲರ್ ಕಾಣ್ಗೆ!" ರಾಯುನಿಂತುಸಿರ್ವುದುಂ; ಕೌಶಿಕಂ- "ಮಹಾರಾಯ! ಎನ್ನ ಜಿಹ್ವಾಗ್ರದೊಳಾವಗಂ ಸರಸತಿಯಿರ್ಪುದಿಲ್ಲಂ; ಮೋಣೋಂರೊರ್ವ ನೆಲಸಿರ್ದೊಡಂ ಶ್ರೀಹರಿಯಿಂ ಪೆಱತನ್ಯನಿಂದ್ರನನಾದೊಡಂ ಪೊಗೞಲಾಱೆ." ಎನಲವನ ಶಿಷ್ಯರ್ ಗೌತಮಂ ಆರುಣಿ ಮೇಣ್ ಸಾರಸ್ವತಂ ಮುಂತಪ್ಪರ್ ಆಗುರುವೆಂದ ತತ್ತ್ವರೂಪಮಂ ಬಿತ್ತರಿಸಿ ಪೇಳ್ದರ್. ಮತ್ತಮವರೊಳ್ ಶ್ರೀಕರನೆಂಬಂ ರಾಯಂಗೆ—"ಪಾರ್ಥಿವಾಗ್ರಣಿಯೆ! ಎಮ್ಮ ಕಿವಿಗಳ್ ಶ್ರೀಹರಿನಾಮಮಂ, ಅಂತಾತನ ಕೀರ್ತಿಯನಲ್ಲದೆ ಪೆಱತೇನುಮಂ ಕೇಳ್ವುದಿಲ್ಲಂ." ಎಂದುಸಿರ್ದಂ. ರಾಯನಿನರ್ಕೆ ಮುನಿಸುಗೊಣ್ಡು ತನ್ನ ಭೃತ್ಯರಪ್ಪ ದ್ವಿಜರೊಳೊರ್ವನಂ ಕರೆದು — "ಎನ್ನಂ ಪೊಗೞ್ದು ಪಾಡೈ. ಆಗಳಾದೊಡಂ ತಿರುಕರಿವರ್ ಕೇಳ್ವರೊ ಎಂತೊ ನೋೞ್ಪೆಂ. ಮೇಣೀಸ್ವಾರಸ್ಯಮನಱಿತಾನೆಂತವೆನ್ನ ಜಸಮಂ ಪಾಡುವರೆಂದೇ ಪೆಂ." ಎನುತೆ, "ಕೇಳ್ವೆಂ." ಎಂದು ತಿಳಿಪೆ; ಅವನಂತು ಪಾಡುವುದುಂ; ಶಿಷ್ಯರೆಲ್ಲರ್ ಕೊಡಂಕೆಗಳಂ ಬೆರಲಿಂ ಮುಚ್ಚಿಕೊಂಡರ್. ಕೌಶಿಕನುಂ-

ಈಪಾಪಿ ರಾಯನೆಂತಾನುಂ ನಿರ್ಬಂಧಿಸುತೆಮ್ಮಂ ತನ್ನಯ ಜಸಮಂ ಪಾಡಿಸದೆ ಬಿಡನೆಂಬವನ ಮನೋವೃತ್ತಿಯನಱಿಯುತೆ ಒಡನೆ ತಂತಮ್ಮ ತುದಿನಾಲಗೆಯುಂ ಕತ್ತರಿಸಿಕೊಂಡರ್. ಮತ್ತಂ ತನ್ನಂ ಗಣಿಸದೆ ಇಂತಪ್ಪ ಕೃತ್ಯಮೆಸಗಿದರಂ ಕಾಣದೆ, ಪಿರಿದುಂ ಕನಲ್ದು, ಶಿಷ್ಯವರ್ಗಸು ಕೌಶಿಕನನಾನಾಡಿಂ ಪೊಱಮಡಿಸುತವರ ವಿತ್ತಮನಪಹರಿಸುತೆ, ಇಂತವರ್ಗೆ ಬಲ್ಬನ್ನಮನಾರಾಯನಿತ್ತಂ. ಸಾಧುಗಳಪ್ಪುದಱಿನನಿತುಂ ಬನ್ನಮಂ ಸೈಸುತೆ, ಎಂದಿನೋಲ್ ಹರಿಕೀರ್ತನೆಯುಂ ಮಾಡುತೆ, ಉತ್ತರಾಭಿಮುಖಮಾಗಿ ತೆರಳ್ದರ್.

ಬೞಿಕಂ ಪಲಗಾಲದ ಮೇಲಿವರೆಲ್ಲರುಂ ಮೆಯ್ಯೞಿಯೆ, ಯಮಲೋಕಕಸಿತಱೊಳ್ ದ್ರುಹಿಣನೈತಂದು — ಇವರೆಲ್ಲರ್ ನಿಚ್ಚಂ ವಿಷ್ಣುವಂ ಗಾನಯೋಗದಿಂ ಪೂಜಿಸುತಿರ್ದರ್. ಅದಱಿಂ ದೇವತ್ವಮಂ ಒಯುಸುವರೆಂಬಾಗಳಂಬರದತ್ತಣಿನಾರೊ— ಕೌಶಿಕ! ಪದ್ಮಾಕ್ಷ! ಮಾಲತಿ! ಇಂತೆನುತೆ ಪೆಸರ್ವಿಡಿದು ಕರೆದಂತೆಗಲ್; ಅವರೆಲ್ಲರ್ ಕಣ್ಗದೃಶ್ಯರಾಗಿ ಸತ್ಯಲೋಕಮಂ ಸಾರ್ದರ್. ಸ್ವಾಗತರಾದ ಕೌಶಿಕಾದ್ಯರಂ ವಿಧಿ ವಿಧಿಯಿಂ ಪೂಜಿಸುತಿರ್ದಂ. ಆಗಳೇನೆಂಬೆಂ? ಮೇಲಣೊಂದು ಕೋಲಾಹಲಂ ಕೇಳಿಸಿದುದು. ಇದನಱಿತು ಹಿರಣ್ಯಗರ್ಭಂ ದೇವತೆಗಳನುೞಿದು ಕೌಶಿಕಾದ್ಯರಂ ಕೂಡುತೆ ವಿಷ್ಣುಲೋಕಕ್ಕೈತಂದಂ.

ಬಳ್ಳದನಾಗಿರ್ಪ್ಪೆ, ಭಾರದ್ವಾಜ! ಆಶ್ವೇತದ್ವೀಪಮಂ ಬಣ್ಣಿಸಲಾರ್ನೆಱೆವರ್? ಸೊನ್ನೆ ಬೆಲೆವಣಿಗಳಲ್ಲದೆ ಪೆಱತಿಲ್ಲಂ; ಓಲಗದೊಂದು ಮಂಡಪದ ಸೊಗಸನಿರ್ದಂತೆ ವರ್ಣಿಸಲ್, ಇರ್ಛಾಸಿರ ನಾಲಗೆಯ ಮಾಸೇಸಂಗುಂ ತೀರದು. ಬಜ್ಜರದ ಸಾಸಿರ ನೊಗವಾಡಂಗಳನೊಪ್ಪುವ ಸಾಹಸ್ರಯೋಜನವಿಸ್ತೀರ್ಣರತ್ನಮಂಡಪ

N. 4

ದೊಳ್ ಕಲ್ಯಾಣರೂಪಂ ಕಲ್ಯಾಣಸಿಂಹಾಸನಾಸೀನನಾಗಿರೆ ; ಜ್ಞಾನವೃದ್ಧರ್, ಚತುರ್ಭುಜರ್, ವಿಷ್ಣುಚಿಹ್ನಸಮಾಪನ್ನರ್, ಸಾರೂಪ್ಯಪದವಿಗೈದಿದ ಅಷ್ಟಾಶೀತಿಸಹಸ್ರಪುಣ್ಯಾತ್ಮರ್, ಸೇವಿಸುತಿರ್ಪರ್; ನಾರದಾದ್ಯರ್ ಪೊಗೞುತಿರ್ಪರ್. ಇಂತು ಮೆಱೆವಿರ್ಪ ಭಗವಂತನಂ ಕಾಣುತೆ, ಭಯಭಕ್ತಿಯಿಂ ಕೌಶಿಕಹಿರಣ್ಯಗರ್ಭಾದ್ಯರ್ ದಿಂಡುಗೆಡೆದರ್. ಕಾಲ್ಗೆಱಗಿದನಿಬರಂ ಕಟಾಕ್ಷಿಸಿ ಕರುಣಾಳು ಕುಳ್ಳಿರಿಸಿ, ಕಡೆಯೊಳ್ ಪೊಂಬಸಿಜನೊಡನೆ– "ಎಲೆ ದೀರ್ಘಾಯುವೆ! ಕೌಶಿಕನಿವಂ ಯಶಸ್ವಿಯುಮೆನ್ನ ಭಕ್ತನುಮಪ್ಪಂ. ಎನ್ನನಲ್ಲದನ್ಯರ ಕೀರ್ತಿಯಂ ಕೇಳೆನೆಂದುಂ ಪೇೞೆನೆಂದುಂ ಕಿವಿಯಂ ಮುಚ್ಚಿಕೊಂಡಂ, ಮೇಣ್ ನಾಲಗೆದುದಿಯಂ ಪೋೞ್ದುಕೊಂಡಂ. ಈತಂ ಮಾಲವಂ, ಮೇಣ್ ಇವಳ್ ಮಾಲತಿ, ಇವರೆನ್ನ ಕ್ಷೇತ್ರದೊಳ್ ಸೇವಿಸುತಿರ್ದರ್. ಪದ್ಮಾಕ್ಷಂ ತಾಂ ಭಕ್ತಂ, ಅನ್ನದಾನಮಂ ಯಥೇಚ್ಛಂಗೈದಂ. ಇವರ್ಗೆಲ್ಲಂ ತಕ್ಕ ಗತಿಯಂ ತೋಱುಪೆಂ." ಎನುತೆ, ಕೌಶಿಕಂಗೆ— "ನೀಂ ದಿಗ್ಬಲವೆಸರ ಗಣಾಧಿಪನಾಗುತೆ ಆನೆನಿತು ಕಾಲಮಿರ್ಪೆನನಿತುಂ ಕಾಲಂ ಸೊಗದೊಳಿರ್ಪುದು." ಎಂದು ಸಾಮೀಪ್ಯಪದವಿಯನಿತ್ತು ; ಮಾಲತೀಮಾಲವರ್ಗೆ — ದಿವ್ಯಸುಂದರಮೂರ್ತಿಗಳಾಗಾಯುನಮಂ ಕೇಳೆ, ಲೋಕಮಿರ್ಪನಿತು ಕಾಲಮಿರ್ಪುದೆಂದು ಸಾಲೋಕ್ಯಮಂ ಕರುಣಿಸಿ; ಪದ್ಮಾಕ್ಷಂಗೆ — ಧನಕ್ಕೊಡೆಯಂ ಕುಬೇರನಾಗಿ ಮೆಱೆದಿರ್ಪುದೆಂದು ದಿಗಧೀಶಪದವಿಯಿತ್ತು, ಉೞಿದವರಂ ಯಥೋಚಿತಂ ಮನ್ನಿಸಿ, ಭಕ್ತರಂ ಪೊರೆಯುತಿರ್ದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ಪಂಚಮಾಶ್ವಾಸಂ ಸಂಪೂರ್ಣಂ.

# ಷಷ್ಠಾಶ್ವಾಸಂ.

---

ಸಮನಂತರದೊಳ್ ವಿಷ್ಣುಸಾನ್ನಿಧ್ಯಂಬಡೆದ ಕೌಶಿಕನುಕ್ಕೆವದಱ್ತಿಗೆ ವಿಪಂಚೀಗುಣತತ್ತ್ವಜ್ಞರುಂ ವಾದ್ಯವಿದ್ಯಾವಿಶಾರದರುಮಪ್ಪವನ ಶಿಷ್ಯರಾಗಳ್ ಸೂಱೆಱುತು ಪಾಡಲ್ ತೊಡಂಗಿದರ್. ಅಂದಮಾಗೆ ಮೆಲ್ಪುವಡೆದ ತನಿಸೊದೆಯ ಸೋನೆಯೋಲ್ ಕಿವಿಗಳ್ಗನಿದಂ ಕಱೆಯೆ; ಪಾಡಿನೊಳ್ಪಂ ಕೇಳ್ದು ಅಗಣಿತಚೇಟಿಯರ್ ನೆರೆದರ್. ಅಂತು ಕಂಬಿಗಳಂ ಪಿಡಿದು ಸಿರಿಯ ಪಡಿಯಱ್ತಿಯರುಂ ಸಿರಿಯರಸನ ಪಡಿವಳರುಮೊದವಿದರಾಯೆಡೆಯ ಬಾಗಿಲೊಳ್.

ಅಂತಪ್ಪ ಬಿನದಮಂ ನೋಡೆ, ಅಲರಿಚಂ, ಮುಗಿಲ್ದೇರಂ ಮೊಂತಪ್ಪ ಬಿಡುಗಣ್ಣರುಂ, ನಾರದಾದಿಋಷಿಗಳುಂ ಸಾರ್ತಂದು ಒಳಗೆ ಪುಗೆ ಗಲಬೆಗೆಯ್ದರ್. ಆಗಳ್ ಬಾಗಿಲವರ್ ತಡೆದು ಪಿಂದಟ್ಟೆ, ನಾಲ್ಮೊಗನಣುಗಂ ಮುಂತೆ ನುರ್ಗಿದಂ. ಪಡಿಯಱ್ತಿಯರಿವನಂ ನೂಂಕಿದರ್. ಮೊಗಮಂ ಕಿಱಿದುಗೆಯ್ದು ಎಲ್ಲರುಂ ಪಿಂಜರಿಯೆ; ಬೊಮ್ಮನವರ್ಗೆ—"ಅಪ್ಪುದಪ್ಪುದು, ಸಾಜಂ, ಆಣ್ಮನಿದಿರ್ಗೆ ಪೋಗಿ ನಿಲಲಾಮೆನಿತರವರ್?" ಎಂದು ಸಂತಯಿಸೆ ಸೊರ್ಕುಡುಗಲವರೆಲ್ಲರ್ ಪೊಱವಾಗಿಲೊಳ್ ನಿಲ್ತರ್.

ಆಸಿತಱೊಳ್ ತುಂಬುರನೈತಂದು ಪೊಱದೆಸೆಯೊಳ್ ದೇವರ ದರ್ಶನಕೆ ಕಾದಿರ್ಪನೆಂಬುದುಂ; ಸಿರಿಯರಸನವನಂ ಮಾನಪೂರ್ವಕಂ ಕರೆಯಿಸಿಕೊಂಡು ಒಱಿಯೊಳ್ ಕುಳ್ಳಿರಿಸಿ, ಬಱಿಕಂ ಕೌಶಿಕನ ಸಂತಸಕೆ ಪಾಡಿಸುತೊಲ್ದು ಮನ್ನಿಸಿ, ರತ್ನಾದಿಗಳಂ ಪಾರಿತೋಷಿಕಮನಿತ್ತು ಕಳಪೆ, ತನ್ನೆಡೆಗೆ ಪೊರಟಂ. ಮೋಕ್ಷ ಸಗ್ಗ

ಗರ ಪಿರಿಯಂ ಮೊದಲಪ್ಪ ಅಗ್ಗಿಮೊಗರುಂ ನಾರದನೊರ್ವನುೞಿದೆಲ್ಲ ರಿಸಿಗಳುಂ ತಮ್ಮೆಡೆಗೆ ತೆರಳ್ದರ್. ಅಂಚೆವೇರನಣುಗಂ ಸಿರಿಯರಸಂ ತುಂಬುರನನೆ ಆದರಿಸಿ ತನ್ನಂ ಮನ್ನಿಸದಿರ್ದುದಂ ಇನಿಸುಂಬೊೞ್ತು ಜಾನಿಸುತೆ ಬೇಗುದಿಗುದಿದು ತನಗೆ ತಾಂ— ಸುಡು ತನ್ನೀಬಾೞ್ಕೆಯಂ. ಅಂತಿರ್ಪ ಮುದಿತುಂಬುರಂಗೆ ಸನ್ಮಾನಮಪ್ಪೆಡೆಯೊಳೆನಗೆ ದುಮ್ಮಾನಮಾದುದು ಗಡ! ಕಟಕಟಾ! ಸಿರಿಯ ಪಡಿಯಱತಿಯರಿಂ ನೂಂಕಿಸಿ ಕೊಂಡೀನಾಣಿಲಿ ಮೆಯ್ಯಿದರ್ವೇಂ ಫಲಂ? ಅಃ! ವಿಷ್ಣುದೂತರಾತುಂಬುರನಂ ಕೈಪಿಡಿದು ಕರೆದುಯ್ಯೆ, ಪಿಂಮೆಯ್ಯೊಳೇಂ ನೋಂತನೊ! ಎನುತೆ ಬಲ್ಬಗೆಯೊಳ್ ಹಂಬಲಿಸಿ, ಮತ್ತಂ ಕೋಪಕೆ ಮೆಯ್ಯಿತ್ತು,— ಆವಳಾಣತಿಯಂತೆ ನಡೆವರಾವಳ ದಾಸಿಯರೆನ್ನಂ ಪೊಯ್ದು ನೂಂಕಿದರೊ, ಆಲಕ್ಷ್ಮಿ ರಕ್ಕಸಿಗೆ ಪುಟ್ಟುಗೆ! ಲೋಗರೇೞಿಸಂತೆ ಎನ್ನ ನಟ್ಟಿಸಿದಂತವಳುಮಂ ಪಡೆದಬ್ಬೆ ಪೆಱಗಟ್ಟುಗೆ! ಎಂದು ಬಿಱುನುಡಿನುಡಿದಂ. ಅಚ್ಚರಿಯೆನುತಚ್ಚರರ್ ಮುಂತಪ್ಪರ್ ಅೞಲಿದರಾಗಳ್; ಮುಪ್ಪೊೞಲುಂ ನಡುಗಿದುದು. ಇಂತೀಪರಿಯನಱಿದು ಲಕ್ಷ್ಮೀವೆರಸು ನಾರಾಯಣಂ ಮುನಿಯೆಡೆಗೆ ನಡೆತಂದು ತಲೆವಾಗಿ ನಿಂದಿರ್ದಂ. ಮತ್ತಂ ಮಾಲಕುಮಿಯುಮಂಗೆ— "ಪ್ರಸನ್ನನಾಗೈ ಮುನಿಯೆ! ಅಱಿವಿಲ್ಲದಾದ ಕಜ್ಜಕೆ ಮುನಿದು ನೀನೆನ್ನಂ ಸಪಿಸಿದೊಡಂ ತೊವಳಾಗದು. ನಿನ್ನೊಳಾನಿಂತು ಬೇೞ್ಪೆಂ. ರಕ್ಕಸಿಯು ಬಸಿಱೊಳೊರ್ಮ್ಮೆದಲೊಳ್ ಪುಟ್ಟುವುದರ್ಕೆ ಪಡಿಯಾಗಿ ಕಾಡೊಳಿರ್ಪ ತವಸಿಗಳ ನೆತ್ತರೊಳಾದೊಡಮೀಗಳ್ ಮಱುಗೊಳ್ವೆಂ. ಅಂತಿರ್ಪ ನೆತ್ತರಂ ಕೊಂಚಂ ಕೊಂಚಂ ಪಿಡಿದು ಕಳಸಂ ತುಂಬಲಾವಳ್ ಕುಡಿವಳಾರಕ್ತದಿನಾನುಂ ಪಾವನಮಾಗೆ, ಅವಳ್ಗೆಯೆ ಪುಟ್ಟುವೆಂ."

ಎಂಬುದುಂ; ಮುಯ್ಯಂ ತೀರಿಸುತೊಡನೆಯೆ ಪಗೆಯುೞಿವ ಕೋೞ್ಗದಂತೆ ಮುನಿಸಂ ಬಿಸುಟ್ಟು, ಇವಳ ಬಯಕೆಯುಂ ದಾರುಣಮೆನುತೆ, "ತಥಾಸ್ತು." ಎಂದಂ.

ಆಗಳ್ ಹೃಷೀಕೇಶನೀತನನಿನ್ನುಂ ತಿರ್ದಿದಲ್ಲದೆ ಪೊರ್ದುಗೆಯಾಗದೆನುತವಂಗೆ — "ಮುನಿಪುಂಗವ! ಕೇಳಾದೊಡೆ ತುಂಬುರನಂ ಮನ್ನಿಸಿ ತನ್ನನೇಳಿಸಿದರೆಂಬ ಬಗೆಯಿಂ ಕನಲ್ದಿಂತುಗೆಯ್ದೈ. ನೀಡುಂ ಮೇಣಿಸೆ ನೀಂ ತಪ್ಪಿದವಂ, ದಿಟಂ. ಎಂತೆನೆ :— ಚಾಗಭೋಗದೊಳುಂ, ದಾನಮಾನದೊಳುಂ, ಧರ್ಮಕರ್ಮದೊಳುಂ, ನಡೆನುಡಿಯೊಳುಂ, ಬಿಜ್ಜೆಬಿನ್ನಣದೊಳುಂ, ತುಂಬುರನತ್ತಣಿಂ ನೀಂ ಪಿರಿಯನೆಂಬುದು ಸಾಜಮಾದೊಡಂ ಅಂತಪ್ಪ ಪೆರ್ಮೆಯಾಗರ್ಗಂ ಸಲ್ಲದೈ. ಮೇಣಾಂ ಭಕ್ತಿಪೂರ್ವಕಮೆನ್ನನೆ ಪೊಗೞ್ವ ಗಾಯನಕೆ ಸೋಲ್ವನಿತು ಪೂಜೆ ತಪಸ್ಸು ದಾನ ತೀರ್ಥಾಟನಂಗಳ್ಗೆ ಮೆಚ್ಚೆಂ. ಇದರ್ಕೆ ನಿದರ್ಶನಂ ಕೌಶಿಕನಂತು ತುಂಬುರಂ. ಇಂತೀಭೇದಮಂ ಲೋಗರಱಿಯಲೆನುತುಂ ತಾನೆಸಗಿದೆನಲ್ಲದೆ ನಿನ್ನಂ ಶಿಕ್ಷಿಸವಲ್ಲಂ. ನೀನಿಂತು ಪರಿಭಾವಿಸದೆ ಸಪಿಸಿದೊಡಂ ಆಂ ಮುನಿವರಲ್ತು; ಎಮ್ಮೀಲೀಲಾವಿನೋದಕಿದೊಂದು ಸಾಯುಮೆ ತೋರ್ದುದೈಸೆ." ಎನುತೆ ಬುದ್ಧಿಯೊರೆದಂ. 12364

ನಾರದನೀನುಡಿಗೇಳ್ದಱಿವು ಪುಟ್ಟೆ, ಒಡೆಯನಡಿಗೆ ತಲೆವಾಗುತ್ತಿಂತೆಂದಂ :— "ದೇವ! ಅಪರಾಧಿ ತಾಂ ನಿಶ್ಚಯಂ. ಮತಿಹೀನನಾಗಿ ತಾನಂತುಗೆಯ್ದೊಡಂ ಮನ್ನಿಸಿ ಕಾವುದು. 'ತಿರೆಯೊಳ್ ಕಾಲ್ಕೆಡೆ ಬಿೞ್ದೊಡಂ ತಿರೆಯನೇ ಆಧಾರಮಂ ಗೆಯ್ವ ಪೋಲ್' ಎಂಬ ತೆಱದೆ ನಿನ್ನೊಳಾನನ್ನೆಯಂಗೆಯ್ದೊಡಂ ನೀನೇ ಪೊರೆವುದು. ಮತ್ತಂ ತುಂಬುರಕೌಶಿಕರೋಲ್ ಪಾಡುಂಗಾಱಿಕೆಯೊ

ಳಾಂ ಪ್ರತಿಷ್ಠಿತನಪ್ಪಂತೆ ಬಟ್ಟೆದೋಱುಸ್ವೆ." ಎನುತೆ ದೈನ್ಯಂಬಿಡಿದು ಬೇಡುವ ಮುನಿಗೆ ಮತ್ತಮೆಂದಂ :— " ಅಂತು ಮನಮಿರ್ದೊಡೆ ತೋಱುವೆಂ. ಉತ್ತರದೆಸೆಗೆ ಮಾನಸಮೆಂಬೊಂದು ಸರಸಿಯುಂಟು. ಅದರ್ಕೆಯುಂ ಮುಂತೆ ಬಡಗಣ್ಗೆ ಇರ್ಪ ಶೈಲದೊಳ್ ಗಾನಬಂಧುವೆಂಬೊರ್ವನುಲೂಕರಾಜನಿರ್ಪಂ. ಅವಂಗೆ ನೀಂ ಶಿಷ್ಯನಾದೊಡೆ ನೀಂ ತುಂಬುರನಂತೆ ಗಾನವಿದ್ಯಾಪಾರಂಗತನುಂ ಪ್ರತಿಷ್ಠಿತನುಮಪ್ಪಯ್. ಪೋಗು." ಎಂಬುದುಂ ; ಮನೋವೇಗದಿನಾಯೆಡೆಗೆ ತೆರಳ್ದಂ.

ಅಂತೇರ್ಪಟ್ಟ ತಾಣದೊಳ್ ಗಂಧರ್ವರುಂ, ಕಿನ್ನರರುಂ, ಅಪ್ಸರಸರುಂ ನೆರೆದು ಗಾನಮಂ ಜಾಣ್ಮೆಯಿಂ ಪಾಡುತೆ, ಕೆಲರ್ ಕಲಿಯುತೆ, ಕೆಲರ್ ಕೇಳುತೋಲಗಿಸುತಿರೆ ; ಉಲೂಕಂ ವೇದಪಾರಾಯಣಂಗೆಯ್ವ ಸಚ್ಛಿಷ್ಯರಿಂ ಪರಿವೇಷ್ಟಿತನಾದಾಚಾರ್ಯನಂತೆ ಕಣ್ಗೊಳಿಸಿದಂ. ಆಗಳ್ ನಾರದನೈತರ್ಪುದಂ ಕಂಡಾಗಾಯನಾಚಾರ್ಯಂ ಶಿಷ್ಯರ್ವೆರಸು ಭಕ್ತಿಮಿಗೆ ಮಣಿದು ಮನೆಯೊಳ್ಕುಳ್ಳಿರಿಸಿ ಮತ್ತಮಿಂತು ಬೆಸಗೊಂಡಂ :— " ತೇಜಸ್ವಿಯೇ ! ನಿನ್ನ ದರ್ಶನದಿಂ ಪಾವನನಾದೆಂ. ಆದೊಡೆ ನಿರ್ನೆರಂ ನೀಂ ಬರ್ಪನಲ್ತು ; ಏಂ ಕಾರಣಮಿತ್ತಲ್ಬರವಾದುದು ? ಎಮ್ಮತ್ತಣಿನಪ್ಪ ಕಜ್ಜಮಾವುದು ಕರುಣಿಪುದು." ಅದರ್ಕೆ ನಾರದಂ ಪಡಿನುಡಿಗುಡುತೆ—ನಾರಾಯಣನ ಸನ್ನಿಧಿಯೊಳ್ ತನಗೊದವಿದವಮಾನಮುಮಂ, ತುಂಬುರಂ ಪಡೆದ ಸಮ್ಮಾನಮುಮಂ, ತಾಂ ಸಪಿಸುದುದಂ, ಮೇಣ್ ತನಗೆ ಹರಿ ಬುದ್ಧಿದಿಳಿಪಿದುದನೆಲ್ಲಮಂ ಪೇೞ್ದು ಮತ್ತಂ, ' ಉಲೂಕಪತಿಯೇ ! ವಿಷ್ಣುಮಾಹಾತ್ಮ್ಯಂ ಬಣ್ಣಿಸೆ ತೀರದೈ, ಜಪತಪಂಗಳ್ಗೆ ಮೊಲಿಯುದವಂ ತುಂಬುರಕೌಶಿಕರ ಗಾಯನಕೆ ಸೋಲ್ತಂ ಗಡ! ಸಾಜಂ.

ಸತ್ತೆಯಿಂ ಪೊಡೆ ಪಾಡುವೃಮಗೆ ಪಾಸಟಿಯಿಲ್ಲಂ." ಎಂಬುದಂ; ಗೂಗೆರಾಯಂ ತನ್ನಿರವುಮುನಿವಂಗ ಪೇೞೆ, ಪಿರಿದುಂ ನಂಬುಗೆ ಯುಕ್ತಮೆನುತೆ ಕರೆದವನಂ ದಣಿವಾಱುವನ್ನೆಗಂ ಎನ್ನಯ ಪರಿಯುನುವಂ ಪೇೞ್ವೆನೆಂದು ತೊಡಂಗಿದಂ :—

"ಮುನ್ನ ವಿಶಾಪ್ರೊಡವಿಯೊಂದೆಡೆಯೊಳ್ ಭುವನೇಶನೆಂಬೊರ್ವಂ ನಾಡೆಱೆಯುಂ ಬಹುಕಾಲಮಾಕಾಲದ ರಾಯರೊಳ್ ಜಸಂಬಡೆದು ಅರಸುಗೆಯ್ಯುತಿರ್ದಂ. ಆತಂ ಸತ್ಪಾತ್ರಂಗಳೊಳ್ ವಸ್ತ್ರದಾನಂ ಸುವರ್ಣದಾನಂ ಕನ್ಯಾದಾನಂ ಗೋಪ್ರದಾನಂ ಮುಂತಪ್ಪ ದಾನಂಗಳಂ ಗೆಯ್ದುದರ್ಕೆ ಮಿತಿಯಿಲ್ಲಂ. ಎನಿತ್ತೋ ದೇಗುಲಂಗಳ್ ನಿರ್ಮಿತಮಾದುವಾದೊಡಂ ಆಯೆಡೆಯೊಳ್ ಹರಿಯುಂ ವೇದಮಂತ್ರಂಗಳಿನೆ ತುತಿಸಲ್ತಕ್ಕುದಲ್ಲದೆ ಆರಾನುಂ ಗಾಣಮಂ ಪಾಡಿ ತುೞಿಲ್ಗೆಯ್ವೊಡವರ್ ಕೊಲೆಗೆ ಪಕ್ಕಾಗುವರೆಂಬ ಡಂಗುರಮಿರ್ದುದು. ಆದೊಡೆ ಪೆಣ್ಗಳ್ ಮೇಣ್ ತುೞಿಲಾಳ್ಗಳ್ ಅವನ ಜಸಮಂ ಪಾಡುವೆಡೆಯೊಳ್ ನಿರ್ಬಂಧಮಿಲ್ಲಂ. ಇಂತಿರೆ ಹರಿಯ ಕೀರ್ತನೆಗೆಯೆ ತಡೆಯಾದುದು. ಅಂತಿರ್ಪ ಪ್ರೊಡವಿಯಾಣ್ಮನ ನಾಡೊಳ್ ಹರಿಮಿತ್ರನೆಂಬ ಪ್ರಸಿದ್ಧವೈಷ್ಣವವಿಪ್ರನಿರ್ಪಂ. ಇವನೊರ್ಮೆ ನೆರೆಯೊಳಿರ್ಪ ಪೊೞ್ಚಡೆಯುಂ ಸಾರ್ದು ಮಣಲಿಂ ಹರಿಯ ದಿವ್ಯಮೂರ್ತಿಯುಂ ಗೆಯ್ದು, ಷೋಡಶೋಪಚಾರಂ ಯುಕ್ತಮಾಗೆ, ಪೂಜೆಸಿ ಮೇಣ್ ರಾಯನ ಕಟ್ಟಾಣತಿಯುಂ ಮಱೆದು ಅಂತರಾತ್ಮಂ ಪರಮಾತ್ಮನೊಳ್ ಬೆಱೆರ್ಪೋಲ್ ವಿಧಿಯಿಂ ಶ್ರೀಹರಿಯ ಗುಣಾನುವಾದಮಂ ಪಾಡುತಿರ್ದಂ. ಅಸಿತಱೊಳ್ ರಾಯನಾಳ್ಗಳ್ ಈತೆಱನಂ ಕಾಣುತುಂ ಪೂಜೆಯುಂ ಪಾೞ್ಗಿಡಿಸುತವನಂ ಪಿಡಿದು, ಆತಿರೆಯರಸನೆಡೆಗುಯ್ದು ದುಮುವನವನಂ ವಿಚಾರಿಸುತದರ್ಕೆ ಮುಸಿಸುಗೊಂಡು, ಸರ್ವಧನ

ಮನಪಹರಿಸಿ, ತನ್ನ ನಾಡಿಂ ಪಾರ್ವನಂ ಪೊಱಮಡಿಸಿದಂ. ಕೆಲಗಾಲಂ ಪೋಗಲಾರಾಯುಂ ಕಾಲಧರ್ಮ್ಮವನೆಯ್ದಿ ; ಲೋಕಾಂತರದೊಳುಲೂಕಜನ್ಮಂ ಪ್ರಾಪ್ತಿಯಾದುದು. ಈಪರಿಯೊಳವಂಗೆ ಪಕ್ಕಿವೆಯ್ ಬರೆ, ಕಂಡ ಕಂಡೆಡೆ ತೊಳಲುತುಂ, ಎಲ್ಲಿಯುಂ ತಿಸಿಸು ದೊರೆಯದಿರೆ; ಬಲ್ಪುೞಲ್ದು, ಎಂತುಂ ಸೈಸದೆ, ಮೇಣೊಂದು ದಿನಂ ಮುಮ್ಮೆಯ್ಯ ಸೈಪಿನೆಸಕದಿಂ ಜವನ ದರ್ಶನಮಾಗೆ, ತಾನಿಂತು ಬೆಸಗೊಂಡುದು :—' ಎಲೈ ಧರ್ಮ್ಮರೂಪ ! ದುರ್ಗತಿಯನೆಯ್ದಿದೆನಗೆ ಪಸಿವಿಂ ಬೞಲ್ಕೆಯಿಂತೇಕಾದುದೊ ? ಮೇಣುಣಿಸೆನಗಾವೆಡೆಯೊಳುಂ ಪುಟ್ಟದಿರಲೇಂ ಕಾರಣವೊ ? ಇಂತೀಜನ್ಮವಾಗಲಾಂ ಮುನ್ನಂ ಗೆಯ್ದುದೇನೊ ? ಮುಂತಾದೊಡಮೀಬನ್ನಮಂ ದಾಂಟಿ ಪೋಪುದರ್ಕೆ ಬಟ್ಟೆಯಾವುದೊ ? ಪೇೞ.' ಎಂಬುದುಂ ; ಪಕ್ಕಿಯೊಳ್ ದಯೆ ಪುಟ್ಟಿ ಕಾಲಂ—' ಕೇಳ್ವುದು. ಪಿಂತೆ ನೀಂ ರಾಯಂ. ಆಗಳ್ ಗೀತನಾಟ್ಯಲಯೋಪೇತವಾಗಿ ಹರಿಯುಂ ಸಿಜ್ಜಂ ಪಾಡಿ ತುತಿಪ ಹರಿಮಿತ್ರವೆಸರ ಪಾರ್ವನಂ ನಿರ್ನೆರಂ ನಾಡಿಂ ಪೊಱಮಡಿಸುತೆ ತದ್ಧನಮನಪಹರಿಸಿದ ಕತದಿಂ ಮಹಾಪಾತಕಂ ಜನಿಸೆ, ಕ್ಷುದ್ಬಾಧೆಯಿಂತಾದುದು. ಮೇಣ್ ನೀನೆಸಗಿದನಿತುಂ ಸೈಪ್ರಾಯಮೊಂದೆ ಪಾತಕಕ್ಕೆ ಬೆದರ್ದು ಪಡಲಿಟ್ಟುದು ; ಜನ್ಮಮುಮಿಂತಾದುದು. ಆದುದಱಿಂ ಪಕ್ಕಿಯೆ ! ನೀಂ ಬಡಗಣ್ಗೆ ಗುಹೆಯತ್ತಣ್ ಪೋಗು. ಮತ್ತಂ ಮುನ್ನಿನ ನಿನ್ನೊಡಲಂ ಪಸಿದಾಗಳ್ ನಿಚ್ಚಂ ಬಗಿದು ತಿನುತಿರ್. ಇಂತು ನರಕಯಾತನೆಯುಂತೆ ಕಲ್ಪಾಂತರಂ ಕಳೆಯೆ, ತಿರೆಯೊಳ್ ಸೋಣಗನಾಗಿ ಪುಟ್ಟುವೆ. ಆಮೆಯ್ಯೊಳುಂ ಬಹುಕಾಲಮಿರ್ದು, ಪಾತಕಂ ಸವೆಯೆ, ಮತ್ತಂ ನರಜನ್ಮಂ ಬಪ್ಪುದು. ' ಎಂದು ತಿಳಿಪಿ, ತಾಂ ಕಣ್ಮಱೆಯಾದಂ. ಚಿತ್ತಯಿಸ್ಯೆ

ಮುನಿಯೆ! ಆದುದಱಿಂ ಪೂರ್ವದ ರಾಜನೀಗಳೊಂ ಗೂಗೆಯಾಗಿ ರ್ಪೆಂ. ಮಾನಸಸರ್ವತಕ್ಕೈತಂದು ದಂಡಧರನೊರೆನಂತೆಸಗೆ, ಸವನಿಸುವನ್ನೆಗಂ ಪಾಡುವಚ್ಚರರುಂ, ಓಲೈಪ ಹರಿದೂತರುಂ, ಸುತ್ತಿರೆ; ಗಾಳಿದೇರೊಳ್ ಬೆಂಗದಿರನಂತೊಪ್ಪಿ ವೈದಿಕನೊರ್ವನೈತರುತಿರಲ್, ರಾಯನ ಪೆಣವ ಕೆಲದೊಳಿರ್ಪೆನ್ನಂ ದಿಟ್ಟಿಸುತೆ-- 'ಪಕ್ಷೀ! ಈಪೆಣಂ ಭುವನೇಶವಸರಾಣ್ಮನೊಡಲೆಂದು ತಿಳಿವೆಂ; ಆವೊಡುಣಲೆಂದೇಂ ನೋಳ್ಪೆ?' ಎನುತೊರಯೆ; ಕೈಜೋಡಿಸುತೆ, ತನ್ನಿರವಂ ಮೇಣ್ ಜವಂ ಪೇಳ್ದುದಂ ಸವಿಸ್ತರಂ ವಿಪ್ರಂಗೆ ಕೇಳಿಸಿವೆಂ. ಆಗಳ್ ಭೂಸುರನೆನ್ನೊಳ್ ಕರುಣಂಬೆತ್ತು, ಇಂತನುಗ್ರಹಿಸಿದಂ :—'ನೀನೆನಗೆ ಗೆಯ್ದ ತಪ್ಪಂ ಮನ್ನಿಸಿರ್ಪೆಂ. ಅಂತದಱಿನಾಪೆಣಂ ಕಾಣದೆ ಪೋಕೆ! ಪಸಿವುಮಡಸದಿರ್ಕೆ! ಮೇಣ್ ಕಲ್ಪಾಂತರದೊಳ್ ಕುನ್ನಿಯುಪ್ಪುದುಮಾಗದು! ಇಂದು ಮೊದಲ್ಗೊಂಡು ಗಾನಯೋಗಂ ಪ್ರಾಪ್ತಿಯಕ್ಕೆ! ಇದಱಿಂ ದೇವವಿದ್ಯಾಧರಗಂಧರ್ವಾದಿವರ್ಗಕೆ ಗಾಯನಾಚಾರ್ಯನಾಗು! ಮುಂತೆ ನಿನಗೆ ಲೇಸಪ್ಪುದು.' ಎಂದು ದೇವರ್ ಮೆಚ್ಚುವಪ್ಪೊಲ್ ವರವನಿತ್ತು ಎನ್ನನಿಂತುದ್ಧರಿಸುತುಂ, ತಾಂ ಹರಿಯೆಡೆಗೆ ತೆರಳ್ದಂ. ಇಂತಲ್ತೆ ಸತ್ಪುರುಷರ ಲಕ್ಷಣಂ." ಎನುತೆ ಪೂರ್ವೋತ್ತರವೃತ್ತಾಂತಮಂ ತಿಳಿಪಿದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್

ಷಷ್ಠಾಶ್ವಾಸಂ,

ಸಂಪೂರ್ಣಂ.

---

# ಸಪ್ತಮಾಶ್ವಾಸಂ.

---

ಭಾರದ್ವಾಜ! ಇಂತು ತನ್ನಿರವಂ ಪೇಳ್ದು ಗಾನಬಂಧು ನಾರದಂಗೆ ಮತ್ತಂ — " ಈ ಕಿನ್ನರರೀವಿದ್ಯಾಧರರೀಯಪ್ಸರರೀಗಂಧರ್ವರೆನ್ನಿಂ ಗಾನಬಿಜ್ಜೆಯನಱಿಯಲೆನುತ್ತೈತಂದಿರಲಿವರ್ಗಾನಾಚಾರ್ಯನಾದೆಂ. ಈಬಿಜ್ಜೆ ತಪಕ್ಕಂ ಶಕ್ತಿಗುಮೊಳಗಲ್ಲಂ. ಆದೊಡೆ ಶ್ರಮದಿನುಂ ಶ್ರದ್ಧೆಯಿನುಂ ಬಹುಕಾಲಕೆ ಪೊಂದಲಕ್ಕುಂ." ಎನುತ ನುಡಿಯೆ; ನಾರದಂ ತಲೆವಾಗಿ — " ಅಂತೆಯೆ ಅಭ್ಯಾಸಿಪೆಂ." ಎಂಬುದುಂ; ವಾಸುದೇವಂಗೆ ಮಣಿದು ಅನುಕ್ರಮದಿಂ ಗಾನಶಾಸ್ತ್ರಮಂ ಪೇೞಲಾರಂಭಿಸಿದಂ :—

" ದೇವರ್ಷಿಯೆ! ಗೀತದೊಳುಂ, ಆಹಾರದೊಳುಂ, ಧನಧಾನ್ಯವ್ಯವಹಾರದೊಳುಂ, ಆಯವ್ಯಯದೊಳುಂ, ನಾಣ್ಚಿಕೆಯಾಗದೆಂಬರದು ಕಾರಣದಿನೀಬಿಜ್ಜೆಗೆ ಲಜ್ಜೆ ಸಲ್ಲದೈ. ಮತ್ತಂ ಕುಂಚಿತಮಾಗಿಯುಂ, ಗೂಢಮಾಗಿಯುಂ, ಪಾಡುವುದಾಗದು. ಕೈದಿರಿಪಿ, ಕಿಱುವಾಯ್ಗೆಯ್ದು, ಜೋಲ್ವಾಲಗೆದೋರ್ದು, ಪಾಡುವುದುಮೊಳ್ಳಿತಲ್ತು. ತನ್ನ ಮೆಯ್ಯಂ ತಾಂ ಕಾಣ್ಬುದುಂ, ಬಿಱುದಿಟ್ಟಿಯಿಂ ನೋೞ್ಪುದುಂ, ತೋಳ್ಗಳಂ ಮೇಲೆತ್ತುವುದುಂ, ಆಗಸಮಂ ನೋೞ್ಪುದುಂ ಗಾಯನಕೆ ಸಲ್ಲದು. ನಗೆ, ಬೆದರ್ಕೆ, ಪಸಿವು, ನಡುಕಂ, ದುಗುಡಂ, ಪೆಱತಣಿಕೆ, ನೀರಳ್ಕೆ ಇಂತೇೞ್ಬಗೆಗೆ ಪಾಡು ಪಾೞಾಗದು. ಒಕ್ಕೈಯಿಂ ತಾಳಂದೋರ್ಪುದುಂ ಕತ್ತಲೆಯೊಳ್ ಪಾಡುವುದುಂ ದೋಷಂ. ಇಂತು ದೋಷಂಗಳಂ ನಿರ್ಣಯಿಸಿ ಪಾಡಲ್ತಕ್ಕುದು."

ಈತೆಱದೊಳ್ ಗಾನಬಂಧು ಭೇದಾಭೇದಂಗಳಂ ತಿಳುಪುತಿರೆ; ನಾರದಂ ದಿವ್ಯಸಾಹಸ್ರವರ್ಷಪರ್ಯಂತಮಭ್ಯಾಸಿಸುತಿರ್ದು, ಗೀತಪ್ರಸ್ತಾವದೊಳುಂ, ವೀಣಾದಿವಾದ್ಯದೊಳುಂ, ಸಂಪನ್ನನಾಗುತೆ ೩೬೬೬೦ ಲೆಕ್ಕದ ಸ್ವರಭೇದಂಗಳನಱಿತು ನೈಪುಣ್ಯಮಂ ಪಡೆದಂ. ನಾರದಂ ದೇವಾದ್ಯರ್ ಮೆಚ್ಚೆ, ತಾಂ ಗಾನವಿದ್ಯಾಪಾರಂಗತನಾದೆನೆಂದು ಬಗೆದೊರ್ಮೆ ಗಾನಬಂಧುವಂ ಕುಱಿತು– "ಧ್ವಾಂಕ್ಷಶತ್ರುವೇ! ಎಂತೊ ನಿನ್ನಯ ದಯೆಯಿಂ ಗಾಣಬಿಜ್ಜೆಯೊಳನಿತು ಬಲ್ಲಿದನಾದೆಂ, ಸಾಲ್ಗುಂ. ಆವೊಡೀಮೇಲ್ಗೆಯಿಂ ಪಡಿಮೇಲೆನ್ನತ್ತಣಿನಪ್ಪುದಿರ್ಪುದು, ಅಂತದಂ ಸಲಿಸುತೆ, ನಿನ್ನೊಲ್ಮೆಯುಂ ಪಡೆಯಲ್ತಕ್ಕುದುದಱಂ ನಿನ್ನಯ ಬಯಕೆಯುಂ ಕೂರ್ಮೆಯಿಂ ಬೆಸಸುವುದು." ಎನೆ; ಪಕ್ಷಿರಾಜಂ ಪ್ರಸನ್ನನಾಗುತೆ– "ತಪಸಿಯೆ! ಪದಿನಾಲ್ಕು ಮನುಗಳ್ ಮುಗಿಯಲ್ ಬ್ರಹ್ಮದೇವಂಗೊಂದು ದಿನಮಕ್ಕುಂ. ಆಗಳ್ ಮೂಲೋಕಂ ಸಂಪ್ಲವಮಪ್ಪುದು. ಅಂದುಪರ್ಯಂತಂ ಎನ್ನಯ ಜಸಂ ಪರ್ಬಿರಲೆಂಬುದೊಂದೆಯೆ ಬಯಕೆಯಲ್ಲದೆ ಪೆಱತೊಂದಂ ಬಗೆಯೆಂ." ಎಂದಂ. ಆನುಡಿಗಾಮುನಿಸಂ– "ಅಂತಪ್ಪುದೇಂ ದೊಡ್ಡಿತ್ತೈ. ಸಾಜಮಾಗಿ ಕಲ್ಪಾಂತದೊಳ್ ನೀನೆ ಗರುಡನಪ್ಪೈ. ಅಂದು ಶ್ರೀಹರಿಯನುಗ್ರಹಂ ನಿನ್ನೊಳಾಗೆ ಸಾಯುಜ್ಯಪದಂ ದೊರೆಕೊಳ್ವುದು." ಎಂದಱಪಿ, ಮತ್ತಂ ತಾಂ ಬೀೞ್ಕೊಂಡಂ.

ಬರೆವರೆ ಬಿಜ್ಜೆ ತನ್ನೊಳಗಾದುದೆಂಬ ಪೆರ್ಮೆಯಿಂ ತನ್ನಯ ಜಾಣ್ಮೆಯಿಂ ತುಂಬುರನಂ ಗೆಲ್ವೆನೆಂಬ ಮನದಿಂ ನೆಟ್ಟನವನ ಬೀಡಿನೆಡೆಗೈತಂದಂ. ಅಚ್ಚರಿಯೆಲ್ಬುಱಾಗೆ ಕೆಲರ್ಗೆ ಪೆಱಗಾಲ್; ಕೆಲರ್ಗೆ ಕಾಡುಗೈ; ಗಂಟುಗಲ್ ಕೆಲರ್ಗೆ; ಸೆಡೆಮೂಗು

ಕೆಲರ್ಗೆ; ಪಲರ್ಗೆ ಬಿರಿದಲೆ, ಸುರಿವಾಯಿ ಪಲರ್ಗೆ, ಪಿಱ್ದೆ*ಯರೆ ಬರ್ಗೆ, ಅರೆಬರ್ಗೆ ಪೇರೊಡಲ್, ಇಂತು ಬಲ್ಬಗೆಯೊಳ್ ವಿಕೃತಾಂಗರಪ್ಪ ಸಾಸಿರಗಟ್ಟಲೆಯ ಸ್ತ್ರೀಪುರುಷರಾತುಂಬುರನ ಮನೆಗಿದಿರೊಳ್ ಬಿಱ್ದೆದೆದಾಡುವುದಂ ಕಂಡು–ಅವರಾರೆನುತವಂ ಬೆಸಗೊಂಡಂ. ಅವರ್ಕವರ್–"ಕೇಳಣ್ಣ! ಆವಾದೊಡೆ ರಾಗಂ ಮೇಣ್ ರಾಗಿಣಿಗಳಪ್ಪೆವು. ಎಮ್ಮಾಯವಸ್ಥೆಯಂ ಪೇೞ್ವುದೇಂ. ಪೊಡವಿಯೊಳೊರ್ವಂ ನಾರದಂ ಗಾಣಸಾತ್ರದ ಬೆರಂ ಪಿಡಿದೆತ್ತಿ ಪೆಸೆಂಬ ಪೆರ್ಕಳಿಕೆಯಿಂದೋರೊರ್ವರ್ ಪಾಡುತಿರಲೆಮಗೀಪಾಡಾದುದು. ಎಂತೆನೆ–ಸಾಜವಾಗಿ ಗಾಯನದೊಳ್ ಜಾಣ್ಮೆಯಿಲ್ಲಮವಂಗೆ. ಆದೊಡಂ ಅಹಂಕಾರಂ ಪಿರಿದಿರ್ಪನಿಂ, ಭಿನ್ನಸಂಧಿಯಿಂ ಪಾಡಲೆಮ್ಮತು ಅಂಗಮಿಂತು ಛಿನ್ನಭಿನ್ನಮಾದುವಕ್ಕಟಾ! ಕಮಲಿನಿ ಬೆಳ್ದಿಂಗಳಿಂ ಬಾಡಿದೊಡಂ ಬಾಲಾತಪದತ್ತಣಿಂ ಮರಲ್ದಪ್ಪವೋಲ್ ಇಂತೆಮಗವನಿಂದೀಗತಿಯಾದೊಡಂ ಅಭಿಮಾನದಿಂ ತುಂಬುರಂ ಮೇಣ್ ಪಾಡಲೆಮ್ಮ ಭಿನ್ನಾಂಗಂಗಳ್ ಸೊಗಸಾಗಿ ಪುಟ್ಟುವುವು. ಎಲೈ! ಎಮ್ಮಂ ನೋಯಿಸುವಂ ನಾರದಂ; ಸಲಪುವಂ ತುಂಬುರಂ." ಎಂಬುದುಂ; ಸೊರ್ಕುಮನಮುೞಿದು, ದುಗುಡದಿಂ ಪೆೞದೆಯೆ, ಆತಾಣದಿಂ ತೆರಳ್ದಂ.

ಮುನಿಕುಲಲಲಾಮ! ಆಲಿಪುದು. ಮತ್ತಮೊಡನೆ ನಾರದಂ ಹರಿಯುಂ ಕಂಡೀಪರಿಯನಱವೆನೆನುತೆ, ಶ್ವೇತದ್ವೀಪಕ್ಕೈತಂದು, ಜನಾರ್ದನಂಗೀವೃತ್ತಾಂತಮಂ ಪರಿವಿಡಿಯಿಂ ಪೇೞ್ವಮಂ; ಮಾಧವಂ–"ಸಾಜಂ. ಇನ್ನುಂ ಗಾನವಿದ್ಯೆಯೊಳ್ ತುಂಬುರಂಗೆ ನೀನೆಣೆಯಾದುದಿಲ್ಲಂ. ಗಾನಬಂಧುವತ್ತಣಿಂ ಬಿಜ್ಜೆ ನಿನಗೆ ಸಂಪೂರ್ಣಂ ದೊರೆತುದಿಲ್ಲಮಾದುದಱಿಂ ನಿನ್ನಂ ತುಂಬುರಂಗೆ ಪಾಸಟ

ಯಾಗೆ ಮುಂತೆ ವೈವಸ್ವತಮನ್ವಂತರದ ಇರ್ಪತ್ತೆಂಟನೆಯ ಯುಗದ ದ್ವಾಪರಾಂತ್ಯದೊಳ್ ಯದುಕುಲದೊಳ್ ವಸುದೇವದೇವಕಿಯರ್ಗೆ ಕೃಷ್ಣನೆಸರಿಂ ಅವತರಿಪುದುಂಟು. ಆಗಳ್ ನೀನೆನ್ನಂ ಕಂಡು, ಈಪರಿಯೆಲ್ಲಮಂ ತಿಳಿಪಲಾಂ ನಿನ್ನಂ ತುಂಬುರಂಗೆ ಸರಿಮಿಗಿಲೆನೆ ಬಿಜ್ಜೆಯೊಳ್ ಪ್ರವೀಣನಪ್ಪಂತೆ ಕರುಣಿಸುವೆಂ. ಅಂದುಪರ್ಯಂತಂ ಯೋಗಸಾಧನೆಯಂತೆಪ್ರೋಲ್ ದೇವಗಂಧರ್ವಾದ್ಯರಿಂ ಯಥಾಮತಿ ಗಾನಮನಭ್ಯಾಸಿಸುವುದು." ಎನುತೆ ಸೈಪಿಟ್ಟು, ಕಳುಪಿದಂ. ಮತ್ತಮಾನಾರದಂ ನಾರಾಯಣನಾಜ್ಞೆಯಂ ಶಿರದೊಳಾಂತು, ಪೋಬಮಟ್ಟು ಬರುತೋರೊಂದೆಡೆಯ ಬೀಣೆಬಿನ್ನಣಿಗರೊಡನಭ್ಯಾಸಿಸುತೊರೊರ್ವರ್ ಅಚ್ಚರರಿನಱಿಯುತೆ, ಮೋಗೋರೊರ್ವರ್ ದೇವಗಾಯಕರಿಂ ಕೇಳುತೆ, ಪೆಱತೋರೊರ್ವರ್ ತಾನೆ ಮನದೊಳೆಣಿಸುತೆ, ಬಲ್ಬಗೆಯೊಳ್ ಜತನದಿಂ ಬಿಜ್ಜೆಯೊಳ್ ಪಜ್ಜೆಯಿಡುತಿರ್ದಂ. ಅಂತಿರ್ಪುದುಮೊಂದುದಿನಮವಂ ಸತ್ಯಲೋಕಕ್ಕೈತಂದು ನಾಲ್ಮೊಗನೋಲಗದೆ ಸೇರ್ದು ಪಾಡುತಿರೆ; ಅಂಚೆದೇರಂ ಮನಮೆಚ್ಚಿ ಗಾನಯೋಗದೊಳವಂಗೆಣೆಯಿಲ್ಲೆನುತೆ ಪೊಗಳ್ದಂ. ಬಡನೆಮೆ ನಾರದನ ಬಗೆಯೊಳ್ ಅದುವೆ ಪೆರ್ಚಿತ್ತು ಮಗುಳ್ದಂ ಬೇಗೊಂಡುದು. ಆಕ್ಷಣಂ ಬೊಮ್ಮನಿಂ ಸನ್ಮಾನಂಬಡೆದು, ಕೆಮ್ಮನೆ ತುಂಬರನಂ ಗೆಲೆ ಬಗೆಗೊಂಡು ಬಂದಂ; ಆದೊಡೀಬಾಱಯುಂ ನಾರದನಂ ಮನ್ನಿಸಿದನಿಲ್ಲಂ. ಈಪರಿಯೊಳ್ ತಿರಸ್ಕೃತನಾದ ನಾರದಂಗೆ ನಾಣ್ಮಮ್ಮಡಿಯಾಗೆ ಕಿಚ್ಚುಮನಮಂ ಪಿಡಿದಾಗುತೆ, ತನ್ನೊಳೆ ತಾನೆಂತಾನುಂ ಸಾಧಿಸದೆ ಬಿಡೆನೆನುತೆ, ಚಲಂಬಿಡಿದು, ಮುಂತಪ್ಪ ಅವತಾರದ ಪೊೞ್ತಂ ಕಾಯುತಿರ್ದಂ.

ಇತ್ತಲ್ ನಾರಾಯಣಂ ಕಂಸಮುಂತಪ್ಪ ರಕ್ಕಸರಂ ಮಡುಹಿ, ತಿರೆಯ ತಿಣ್ಣಮಂ ತವಿಸೆ, ಅಗ್ಗಿವೊಗರ ದೂಱಿಂಗೆ ದ್ವಾರಕೆಯೊಳ್ ದೇವಕಿಯ ಬಸಿಱೊಳ್ ಕೃಷ್ಣನೆಸರಿಂ ಮೈಗೊಂಡು ಪುಟ್ಟಿ ಬಳೆಯುತ್ತಿರ್ದಂ. ಅಂತಿರ್ಪುದುಂ ಪಿಂತೆ ನುಡಿಯಿತ್ತುದಂ ನೆನೆದು, ನಾರದಂ ಹರಿಹರಿಯೆನುತ್ತೆ ಕೃಷ್ಣನೆಡೆಗೈತಂದೆಱಗಿ, ಮುನ್ನಿನಿರವನೆಲ್ಲಮಱಿಸಿದಂ. ಆಗಳ್ ಮಾಧವಂ ನಸುನಗುತ್ತೆ ಎಣ್ಬರ್ ಪೆಂಡಿರೊಳ್ ಮೊದಲ್ ಜಾಂಬವತಿಯಂ ಕರೆದು– "ಎಲೆ ಪೆಣ್ಮಣಿಯೆ! ಈ ಮುನಿಪಂ ಗಾನವಿದ್ಯಾರ್ಥಿಯಾಗಿ ಬಂದಿರ್ದಂ. ಇವಂಗೆ ನೀಂ ಬಲ್ಲನಿತು ಪೇೞ್." ಎನೆ; ಮುಗುಳ್ನಗೆಗೊಂಡು ತಕ್ಕಂತೆ ಬಿತ್ತರಿಸಿದಳ್. ಈ ಸಂದರ್ಭದೊಳೊರ್ಕಾಲಂ ಸಮೆಯೆ; ನಾರದಂಗೆ ಮೇಣ್ ಬಿಜ್ಜೆಯಂ ಪೇೞೆ ಸತ್ಯಭಾಮೆಯುಂ ಗೊತ್ತುಗೆಯ್ದಂ. ಅಲ್ಲಿಯುಂ ವರ್ಷಮೊಂದಂ ಕಳೆಯೆ, ಮೂಱನೆಯ ಸೂೞ್ ರುಕ್ಮಿಣಿಯ ಎಡೆಗಟ್ಟುವುದುಂ; ಆಗಳ್ ಪಚ್ಚವಣ್ಣವಾಗೆ ನೆರೆದ ಪಡಿಯಱಿಯರ್– ಇವಂಗಿನ್ನೆವರಂ ಸ್ವರಜ್ಞಾನಮೆ ಪುಟ್ಟುತಿಲ್ಲಮೆಂದು ತಳ್ಳಿದರ್. ಅಂತುಮಿಂತುಮಾತಾಣದೊಳಮೊರ್ಕಾಲಂ ಪೋದುದು. ಆದೊಡಮಾರುಮೊ*ರ್ದೆಗೊಂಡರಿಲ್ಲಂ. ಇಂತು ಸಾಸಂಗೆಯೊಡಂ ಬಿಜ್ಜೆ ಸೇರ್ವುದಿಲ್ಲೆಂಬ ನಂಬುಗೆ ತನ್ನಿಂ ತಾನೆ ತಲೆದೋಱೆ, ನಾರದಂಗೆ ತುಂಬುರನಂ ಗೆಲ್ವುದೆಂಬ ಪಿಱಿಯಂ ಮನಮಿೞಿದುದು. ಸೊರ್ಕು ಸಿರ್ಕುಗೊಂಡುದು; ಪೆರ್ಮೆ ಪೆಱಸಾರ್ದುದು; ಹರಿಯುಂ ಮೆಚ್ಚಿಪ ಬಗೆಯೊಂದೆಯೆ ಮಿಗಿಲಾದುದು. ಇಂತೀ ಪರಿಯಱುತ್ತು ಅಮೇಯಿಯುಂ ಕೃಷ್ಣಂ ತಾನೆ ಗಾನಯೋಗಮನಱುಪೆ ನೆರವಾದಂ. ಈ ಪೊಸಗುರುವತ್ತಣಿಂ ಬಿಜ್ಜೆಗೇಳೆ, ನಾರದಂಗೆ ಕರತಲಾಮಲಕದಂತೆ ಸಮಸ್ತಂ ಹೃದಯಂಗಮಮಾಗುತುಂ ಬ್ರಹ್ಮಾನಂದಂ ಪುಟ್ಟೆ

ನಾಟ್ಯವಾಡಿದಂ. ನಾರದನ ದಿಟಮನಮನಾಜನಾರ್ದನಂ ಬಗೆಗೊಂಡು– "ನೀನೀಗಳ್ ತುಂಬುರಂಗೆ ಸರಿಪಾಟಿಯಾದೈ." ಎಂದಮರ್ದು* ನುಡಿಯಿಂ ಪರಸಿದಂ.

ಬಲ್ಲೈ ಭರದ್ವಾಜ! ಗಾನಯೋಗದಾದ್ಯಂತಮುಮಂ ಅಹಂಕೃತಿಗೊಡರ್ಪುದಲ್ಲಂ; ಮಚ್ಚರಕೆ ಬೆಚ್ಚಿ ಬರ್ಪುದಲ್ಲಂ; ಬಿಱುಮನದಿಂ ಪಲಕಾಲಂ ಸಾಧಿಸಿದೊಡಂ ಸರಿಗೊಳ್ವುದಲ್ತು; ಭಗೀರಥಪ್ರಯತ್ನಕುಮೆಳಗಾಗದು; ಮತ್ತಮೇಂ ಹರಿಯು ಕೂರ್ಮೆಗಡಲೊಡೆದೊರ್ಮೆಯೆ ಮೇಲ್ವಾಯ್ದೊಡೈಸೆ? ಆದುದಱಿಂ ಲೋಗರ್ ಪರಮೇಶನಂ ಕಟ್ಟುಂಬಗೆಯಿಂ ಪಿಡಿದು, ಅಱುವಗೆಯಂ ತೊಱೆದು ಹರಿಯೊಳೆರೆ ಮನಂಗೊಂಡಿರಲ್ ನಾರದಂಗೆ ಗಾನಯೋಗಮೊಡನೆ ಸಮಸಿಸಿದಂತೆ, ಸರ್ವಂ ಸಮನಿಕುಂ ಕಣಾ! ಮತ್ತಮಾನಾರದಂ ಹರಿಯೊಲ್ಮೆಯಿನೆ ತುಂಬುರಂಗಣೆಯೆನಿಸುತೆ ಅಂದಿಂದಿಂಗುಂ ತ್ರಿಲೋಕದೊಳಂ ತ್ರಿಮೂರ್ತಿಗಳೊಳಂ ಸಮ್ಮಾನಂ ಬಡೆದಿರ್ದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್

ಸಪ್ತಮಾಶ್ವಾಸಂ

ಸಂಪೂರ್ಣಂ



# ಅಷ್ಟಮಾಶ್ವಾಸಂ.

ವಿಪ್ರೋತ್ತಮನೇ! ಕೇಳ್. ನಾರದನ ಶಾಪಕೆಂತಾಮಾಲಕುಮಿ ಮುನಿಗಳ ರಕ್ತದಿಂ ರಕ್ಕಸಿಯ ಬಸಿಱೊಳಾದಳ್, ಮೇಣವಳೀತಿರೆಯಣುಗೆಯಾದಳಾಬಗೆಯನೀಗಳ್ ಪೇೞ್ವೆಂ. ಎಂತೆನೆ:—

ಈಜಂಬೂದ್ವೀಪಕೆ ತೆಂಕಲ್ಗೆ ಲಂಕೆಯೆಂಬೊಂದು ದೀವಿಯಿರ್ಕುಂ. ಅದರ್ಕೊಡೆಯಂ ರಕ್ಕಸರೊಳ್ ಸಂದ ಈರೈವೊಗಂ ರಾವಣಂ. ಒರ್ಮೆ ತನಗೆ ಮುಪ್ಪೊೞಲೊಡೆತನಮುಂ ಬರ್ಪಂತೆ ಮೇಣ್ ಮುದಿವಱಿವುಂ ಬಾರದಂತೆ ವಿಧಿಯುಂ ಬಲಿಗೊಳ್ವುದೆಂದು ಬಗೆದಂದು, ಪುಣ್ಯಭೂಮಿಯೊಳ್ ಪಿರಿದುಂ ಕಾಲಂ ತಪಂಗಯ್ಯುತಿರೆ; ತತ್ತಪಃಪ್ರಭಾವದಿಂ ಮೂಲೋಕಮುಮುರಿಗೊಂಡುದು. ಇಂತಱಿತು ಬ್ರಹ್ಮಂ ತಾನಸುರೇಂದ್ರಂಗೆ ಪ್ರತ್ಯಕ್ಷನಾಗುತ್ತಿಂತೆಂದಂ:—"ಪೌಲಸ್ತ್ಯ! ಆಲಿಸು, ಬಲ್ದಣಿದೆ. ಇಂದು ಮೊದಲ್ಗೊಂಡು ತಪಸಂ ತವಿಸೈ. ಈಯುಗ್ರತಪಸಿನತ್ತಣಿಂ ಲೋಕಂ ಬೇವುದು; ಇದಱಿಂ ಬೇಡುವುದು ಮನದಿರವಂ. ಕರುಣಿಪೆಂ." ಎಂಬುದುಂ; ಕೈಕಸಿಯಣುಗಂ ಕಣ್ಣೆತ್ತಿ ಕಮಲಾಸನಂಗೆ ಕಾಲ್ಗೆಱಗಿ ಕೈಜೋಡಿಸಿ ಕಡೆಗೆಂದಂ:—"ದೇವ! ನೀನೆ ಮಾದೇವಂ, ನೀನೆ ಮಾಧವಂ, ದಿಟಂ. ಏಗಳ್ ನೀಂ ಮೈದೋರ್ದೆಯೋ, ಆಗಳೆ ಎನ್ನ ಕಾಮಿತಮೆಲ್ಲಂ ಕೈಗೂಡಿದತ್ತಾದೊಡಂ ಬಾಯ್ಬಿಟ್ಟು ಬೇಡ್ವೆನೊಂದಂ. ಏನೆನೆ:—ಸರ್ವಾಮರತ್ವಮಂ ನೀಂ ದಯೆಗೆಯ್ವುದು." ಎಂಬುದುಂ; ದ್ರುಹಿಣಂ ನಿರಾಕರಿಸಿ—"ಪೆಱತೊಂದನೇನಾನುಮಿಚ್ಛೈಪುದು." ಎಂದಂ. ಅದರ್ಕೆ ದಶಾಸ್ಯಂ

ಎಱೆಕೆಯಿಂ— “ ಸಗ್ಗಿಗರ ಪಿರಿಯ ! ಎಮ್ಮವರುಂ, ನಿಮ್ಮವರುಂ, ಯಕ್ಷರುಂ, ನಾಗರುಂ, ಗಂಧರ್ವರುಂ, ಪಿಶಾಚರುಂ, ತನ್ನಂ ಕೊಲಲ್ಬಾರದು. ಮತ್ತಂ ಎಂದೆನ್ನ ಮಗಳನೆ ದುರ್ಮತಿಯಿಂ ಬಯಸುವೆನೆಂದು ಮಿೞ್ತುವೆನ್ನಂ ಮುಟ್ಟುಗೆ ! ಇಂತಾವೊಡಂ ವರಮನೀವುದು. ” ಎನೆ ; — ಅಪ್ಪುದೆಂದು ತಿಳಿಪಿ, ಪಿತಾಮಹಂ ಪೋದಂ.

ಒರಂತೆ ರಾವಣನುಂ ತನಗಾರುಂ ಮುಪ್ಪೊೞಲೊಳುಂ ಎಣೆವಾರರೆನುತೆ ದರ್ಪದಿಂ ದಿಗ್ವಿಜಯಾರ್ಥಂ ಪೊಱಟಂ. ಏನೊರೆವೆನೀರಕ್ಕಸನ ಬೀರಮಂ ? ಸಗ್ಗಮಂ ಸಾರ್ದು ಮುಗಿಲ್ದೇರನ ನಟ್ಟು, ಬರ್ದಿಲರಂ ಸೋಲಿಸಿ, ಕನ್ನೆವೆಣ್ಗಳಂ ಸೆಱೆವಿಡಿವಂ. ಒರೊಂದೆಡೆಯೊಳ್ ಅಚ್ಚರಿಯರನೊಚ್ಚತಂ ಕೊಂಡುಯ್ವಂ. ಮೇಣೊರ್ಮೆ ಕೀೞ್ಗೆಳೆಗೆ ದಾೞಿಯಿಡುತೆ, ಪಾಯ್ದು ಮಾಸೇಸನ ಭಂಡಾರಮನಪಹರಿಸಿ, ನಾಗಕನ್ನೆಯರಂ ಪಿಡಿದು ತರ್ಪಂ. ಎಣ್ದೆಸೆಯಾಣ್ಮರಂ ಗದ್ದಿಸುವಂ. ಆಂ ಪೇೞ್ವೆನವನುಪಟಳಮಂ. ಇಂತಾಗೆ ಲೋಕದೊಳಿರ್ಪ ದ್ರವ್ಯಮೆ ಅವನ ಬೊಕ್ಕಸಂ ; ದೆಸೆಯಾಣ್ಮರೆ ಊೞಿಗದವರ್ ; ದೇವಗಂಧರ್ವಸ್ತ್ರೀಯರೆ ದಾಸಿಯರ್ ; ಮನಂಗೊಂಡ ಪೆಣ್ಗಳೆ ಪೆಂಡಿರ್ ; ಲೋಕಮೆ ಅವನ ರಾಜ್ಯಮಾಗೆ ಪೆಱತೇಂ ಪೇೞ್ವುದೈ. ಈತೆಱದಿರಲೊಂದಾನೊಂದು ದಿನಮಾ ಖಳಂ ದಂಡಕವನಕ್ಕೈತಂದು, ಆ ತಾಣದ ರಿಸಿಗಳಂ ದಿಟ್ಟಿಸಿ, ಬಗೆಯೊಳ್— ಈ ಮುನಿವಾರ್ಪರಂ ಗೆಲ್ಲದಿರಲಾನೀಮುಪ್ಪೊೞಲೊಡೆಯನಾಗಿಯುಮಲ್ತು ; ಮೇಣಿಂತಿವರನೞಿಸಿದೊಡಂ ಜಸಂ ಬರ್ಪುದಿಲ್ಲಂ ; ಆದುದಱಿನೆಂತಾನುಂ ಗೆಲ್ಮೆಗೆಯ್ಮೆಯುಂ ಕಾಣ್ಬುದು, ಎಂದು ಬಗೆದು, ಆ ಮುನಿಗಳನೆಲ್ಲರಂ ಪಿಡಿತಂದವರ್ಗೆ— ತಾಂ

ದಿಗ್ವಿಜಯಾರ್ಥಂ ಬಂದಿರ್ಪೆನೆಂದುಂ, ಅದಕ್ಕೋಸುಗಂ ಜಯಲಾಭಾರ್ಥಂ ನೆತ್ತರಂ ಕುಡುವೆಡೆಯೊಳ್ ನೆತ್ತರ್ವನಿಯುನಾನುಂ ಕುಡವೇಳ್ಕುಂ, ಅಲ್ಲದೊಡೆ ನೆತ್ತರನೇ ಕೊಳ್ವೆನೆಂದುಂ, ತಿಳಿಪಿದಂ. ಆಗಳವರ್ ನಿರ್ಬಂಧದಿನೊಪ್ಪೆ; ದುರಾತ್ಮನವರೊಳೋರೊರ್ವನ ಮೈಯಚುರ್ಚುತೋರೊರ್ವನ ಕೆನ್ನೀರನೊಟ್ಟೈಸಿ; ಗೃತ್ಸಮದನೆಂಬೊರ್ವಂ ತನಗೆ ಸಹಸ್ರಪುತ್ರರಿರ್ದೊಡಂ, ಮಗಳ ಬಯಕೆಯಿಂ ಸಿರಿಯೆ ಅಣುಗಿಯಾಗಿ ಪುಟ್ಟಲ್ವೇಳ್ಕುಮೆಂದು ದಿನದಿನಂ ಪತ್ನಿವೆರಸು ವಿಧಿಪೂರ್ವಕಮಿಟ್ಟು, ಕುಶಾಗ್ರದಿಂ ಪಾಲೆಱೆದು ಪೂಜಿಸೆ ಪೊಂಗಳಸದೊಳ್ ಈತನೆಱೆಯುದವೋಲ್ ತುಂಬಿಸುತೆ; ಗೆಲ್ಲದ ಗುಱುತೆಂದು ಸಂತಸದಿಂ ತನ್ನ ಲಂಕೆಯತ್ತಲ್ ಕೊಂಡುಯ್ದಂ.

ಅಂತು ತನ್ನ ಬೀಡಿಂಗೆಯ್ತಂದು, ಪಟ್ಟಮಹಿಷಿಯಪ್ಪ ಮಂದೋದರಿಯಂ ಕರೆದು— “ಎಲೆ ಮಡದಿ! ಇದೆಕೊಳ್, ಕೊಡಂ. ರಿಸಿಗಳ ನಂಜುನೆತ್ತರಿಂ ತುಂಬಿರ್ಕುಂ. ಮೂಜಗಮಂ ಗೆಲ್ದ ಗುಱುತಿಂಗೆಂದು ತಂದಿರ್ಪೆಂ. ಜೋಕೆಗೆಯ್ವುದು. ತುಡುಗೊಂಡು ಕುಡಿಯದಿರ್; ಮೋಣಾಗ್ರಮನೊರೆಯದಿರ್.” ಎಂದೆಚ್ಚಱಿಸುತೆ, ಆಕೆಯ ಕೈಯೊಳಿತ್ತು, ತಾನೆಂದಿನಂತೆ ... ಲಂಪಟತ್ವದಿಂ ಪೊರಟು, ಮಂದರಂ ಮುಂತಪ್ಪ ಬೆಟ್ಟುಗಳೆಡೆಯೊಳ್ ದೇವಗಂಧರ್ವಾದಿನಾರಿಯರೊಡನೆ ವಿಹರಿಸುತಿರ್ದಂ.

ಮುನಿಕುಲಲಲಾಮ! ಕೆಲಗಾಲಮೀತೆಱಿಂ ಪೋಗೆ; ರಕ್ಕಸನ ಈ ನಡತೆ ಮಂದೋದರಿಗೆ ಸೊಗಯಿಸಿತಿಲ್ಲಂ. ಎಱೆಯನಾವಗಂ ಪೆಱವೆಣ್ಗಳೊಳೆ ಎಱಕಂಗೊಂಡು ತನ್ನಂ ಕಾಣನೆಂಬ ಪುರುಡಿಂ ನಿಚ್ಚಂ ಬೇಗುದಿಗೊಂಡು ತನಗೆ ತಾಂ— ಚೀ! ಸುಡು ಪೆಣ್ಣಬಾಳ್ಕೆಯಂ. ಆಂ ಕೈದಾಱಿಯ ಪೆಂಡತಿಯಿರಲ್, ಓಪಂ

ಪರನಾರಿಯರೊಳಾಗಳುಂ ಮೆಱೆಯುತಿರ್ಪುದೆನೆ ತಾನಿರ್ದುಂ ಪೋದೇ! ಲೋಗರ ನಿಂದೆಗೆಡೆಯಾಗೆನೆ! ಬಱಗುವೊಂದು ಕುಂದಲ್ತೇ! ಇರ್ಕೆ. ಮುಂತೆ ಗತಿಗಾರುಂ ಬೇಡಮೇ! ಪೆಱವೆಣ್ಗಳಣುಗಗೆಯೆ ಪಟ್ಟಂಗಟ್ಟುವನೇ! ಅಕ್ಕಟಾ! ಇನಿತೆಲ್ಲಮಂ ಬ*ರ್ದುಂಕಿದಾನೆಂತು ಕಂಡು ಸೈರಿಪೆಂ! ಅಕ್ಕೆ. ಇದರ್ಕೆ ಮರ್ದಱವೆನೆನುತೆ, ಮುನ್ನಂ ರಾವಣಂ ತಂದಿತ್ತ ರುಧಿರಮಂ ನಂಜುನೆತ್ತರೆನುತೆಯೆ ಬಗೆದು, ಕುಡಿದಳ್. ಕೆಂಡಗಿರ್ಚನಿಡೆ ಮನೆ ಸುಡುಗುಮೊಂದು ಖಂಡ ಮಾಣಿಕ್ಯಮನಿಡೆ ಸುಡುಗುಮೋ? ನಂಜಾದೊಡಲ್ತೆ ಸಾವುಮು, ಅ*ಮರ್ದಾದೊಡೇಂ? ಬಱಕಮಾಕಾಂತೆಯೊಳಾನೆತ್ತರೆ ಬಿತ್ತಾಗೆ, ಬಸಿಱ್ ಕಡಂದುಱುಗೂಡಿನೋಲ್ ದಿನಕ್ರಮದಿಂ ಬಳೆಯುತಿರ್ದುದು. ಇಂತಿರೆ, ಮಂದೋದರಿಗೆ ದುಗುಡಮೊಣ್ಮಡಿಯಾಗೆ— ಪತಿಯೆನ್ನನೇಳಿಸಿದನೆಂದಿಂತೆಸಗೆ, ಲೋಗರುಮೇಳಿಸುವುದಾಯ್ತು ಗಡ! ಬಾವಱದು ಬಲ್ವಣ್ಣಮುದು. ಅಃ! ನಾಣಿಲಿ ಜೀವಮಿನ್ನುಂ ಪೋಗದು; ಏಮೆಂ? ಎಂದು ಪರಿಪರಿಯೊಳೆಚಿಸಿ, ಮತ್ತಮಾ ಪದಿಬದೆ, ದೇವರಿಚ್ಛೆಯುನಾರ್ ವಿರಾಱಲಾರ್ಪರೆನುತೆ, ತನಗೆ ತಾಂ ಸಂತೈಸಿಕೊಂಡೊಡನೆ ವಿಮಾನಮನೇರ್ದು, ಯಾತ್ರಾರ್ಥಂ ಪೊರಟಳ್. ಬರೆವರೆ, ಮುಂತೆ ಕುರುಕ್ಷೇತ್ರದೊಳ್ ರತಿಯತ್ತಣಿಂ ನಾಲ್ಮಡಿ ಸೊಬಗಿನ ಪೆಣ್ಗೂಸುಂ ಪಡೆವುದುಂ; ಕಲ್ಮನಂಗೊಂಡು ಕೂಸಂ ಪೇಳಗೆಯೊಳ್ ಕ್ಷೇತ್ರದೊಳ್ ನೆಲದೊಳ್ ಬೈತಿಟ್ಟು, ಎಂತಾನುಂ ಮುಂತಣ ಅಪವಾದಂ ತಪ್ಪಿತೆಂದು ನಿಜಪುರಿಗೆ ತಿರುಗಿದಳ್.

ಬಹುದಿನಮಿಂತು ಕಳೆಯಲೊಂದು ದಿನಂ ಮಿಥಿಲೆಗೊಡೆಯಂ ಜನಕನೆಂಬೊರ್ವಂ ರಾಜರ್ಷಿ ತಾನಾಕ್ಷೇತ್ರಕ್ಕೈತಂದು

ಜನ್ನಮಂ ಗೆಯ್ಯಲೆಂದು ನೆಲನಂ ಶೋಧಿಸುತಿರೆ; ಪುಣ್ಯದಿನೀಪೇಳಗೆ ದೊರೆಯೆ; ಬಾಯ್ದೆಱೆಯುಲಚ್ಚರಿಗೆ; ಜೀವಂಗೊಂಡ ಚಿತ್ರಪುತ್ತಳಿಯಂತೆ ರಂಜಿಸ ಬಾಲೆಯಂ ಕಂಡಂ. ಒಡನೆಯೆ ಗಗನದತ್ತಣಿಂ ಪೂಮಳೆ ಅವಳ ಮೇಲೆ ಕಱೆದುದು. ಮೇಣ್, "ಎಲೈ ರಾಯ! ಪೆಱತೆಣ್ಣದಿರ್. ಇವಳ್ ಸಾಕ್ಷಾಲ್ಲಕ್ಷ್ಮಿ, ಪುಣ್ಯವಿಶೇಷದಿಂ ದೊರೆಕೊಂಡಳ್. ಇವಳಂ ಮನೆಗುಯ್ದು ಮಗಳೆಂದೆ ಪಾಲಿಸು." ಎಂದು ಬಾನ್ನುಡಿಯೊಂದಾದು.

ಜನಕಮಹಾರಾಯಂ ಸಂತಸಂಗೊಂಡು ಮನೆಗುಯ್ದು, ನೇಗಿಲಿನೆಬ್ದ ಬಂದುದಱಿಂ ಸೀತೆಯೆಂಬ ಪೆಸರಿಟ್ಟು, ಕರುಣೆಯಿಂ ಪಾಲಿಸುತೆ, ಕೈಕೊಂಡ ಜನ್ನಮಂ ಪೂರೈಸಿ, ಸಪ್ತಾಂಗದೊಳ್ ರಾಜ್ಯಮುಮಂ ಕಾಣುತೆ, ಸದಾಸಂತೋಷದೊಳಿರ್ದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್

ಅಷ್ಟಮಾಶ್ವಾಸಂ

ಸಂಪೂರ್ಣಂ.

---

# ನವಮಾಶ್ವಾಸಂ.

---

ಈಗಳ್ ನಿನಗೆ ಸೀತಾರಾಮರ್ಕಳ ಪುಟ್ಟು ಪಟ್ಟಾದುದೆ? ಶಿಷ್ಯೋತ್ತಮನೆ! ಮುಂತಣ ಕಥೆಯನಿನ್ನೊರೆವೆಂ, ಕೇಳ್. ಕಾಲಾನುಕೂಲಮಿವರ್ಗೆ ಪರಿಣಯಂ ಪಿರಿದೆನೆ ಮಿಥಿಲೆಯೊಳ್ ನಡೆವುದು. ಜನಕಮಹಾರಾಯನಳಿಯಂಗುಡುಗೊಱೆಯುಮಂ ಮಗಳ್ಗೆ ಬಳುವಳಿಯುಮಂ ಸರ್ವರ್ ಮೆಚ್ಚಲಿತ್ತು ದಿಬ್ಬಣಮಂ ಕಳಿಪಿದಂ.

ಇಂತು ಶ್ರೀರಾಘವಂ ಸೀತಾಸಮೇತಂ ನಿಜಪುರಿಗೆ ದಿಬ್ಬಣಂ ತೆರಳ್ದುವರೆ; ಸುತ್ತಿ, ಮೌರಿ, ಡೋಲು, ತಂಬಟೆ, ಈರಣ, ಡಕ್ಕೆ, ಪರಿಗೆ, ಕೊಂಬು, ಕಾಳೆ, ಜೇಗಟೆ, ಮದ್ದಳೆ ಮುಂತಪ್ಪ ಬದ್ದವಣಂಗಳ ಬಿಜ್ಜುಸರಂ ಎಲ್ಲೆಡೆಯೊಳಂ, ಕಡಲ್ಗೆ ಪೆರ್ಮೊರೆಯೆನೆ, ಎಣ್ದೆಸೆಗೆ ಗಜದ ಬೃಂಹಿತಮೆನೆ, ಆಗಸಕೆ ಮೊಳಗೆನೆ, ಮಾರ್ದನಿಗುಟ್ಟಿದುದು.

ಬಡಸೀಪರಿಯಱಿತು ಆರ್ಚೀಕನನುಗಂ ಪರಶುರಾಮಂ ಬಿಲ್ಗಣೆಗಳಂ ಪಿಡಿದು ಬಂದು, ಅವರನಡ್ಡಂಗಟ್ಟಿದಂ. ಆಗಳ್ ದಶರಥರಾಮಂ ಪರಶುರಾಮನೊಡನೆ—“ಸ್ವಾಗತಮೆ! ನಿನ್ನಯ ದರ್ಶನದಿಂ ಪಾವನರಾದೆವಾಂ. ಈಗಳೆಮಗೆ ಗೋಚರಿಸಲೇನಾನುಂ ಕಾರಣಮಿರಲಾಕಜ್ಜಮಂ ಪೇೞ್ವುದು.” ಎಂಬುದುಂ; ಕೊಡಲಿಯುಮಂ ಗರ್ವದಿಂ—“ಪೆಱತೇಂ, ಕ್ಷತ್ರಿಯ! ಇದೆ ಕೊಳ್, ಕ್ಷತ್ರಕಾಲಮೆಸರ ಬಿಲ್. ಇದರ್ಕೆ ಪೆದೆಯೇಱಿಸಲಾರ್ಪೊಡೆ ಕಾಣ್ಬುದು.” ಎಂಗುಂ. ರಾಘವಂ ಪಡಿನುಡಿಯೊಳ್ ಭಕ್ತಿಯಿಂ—ಬಟ್ಟೆಯೊಳ್ ತಡೆವುದು ನ್ಯಾಯಮಲ್ಲೆಂದುಂ, ಕ್ಷತ್ರಿಯರ್ಗೆ ದಿಮ್ಮಿದರೊಳ್ ಪೊಣರ್ಕೆ ಸಲ್ಲದೆಂದುಂ, ಮೇಣವ

ಜೊಳಂ ಇಕ್ಷ್ವಾಕುಕುಲದವರ್ಗೆಮಗೆ ದೋಸಂ ತಟ್ಟುವುದೆಂದುಂ ಪೇೞೆ; ರೇಣುಕಾತ್ಮಜಂ—"ಎಲೆ ರಾಘವ! ನುಡಿಬಿನ್ನಣಂ ಸಾಲ್ಗುಂ. ಪಿಡಿ ಎನ್ನಕೋದಂಡಮಂ." ಎಂದು ಮಗುೞ್ದುಂ ಗರ್ಜಿಸಿದಂ. ಉತ್ತರಕ್ಷಣದೊಳೆ ದಶರಥರಾಮಂ ಬಿಲ್ಲಂ ಕೊಂಡು ಲೀಲೆಯಿನೆ ಹೆದೆಯುಂ ಕೊಪ್ಪಿಗೇಱಿಸಿ, ಟಂಕಾರಂಗೆಯ್ಯೆ; ಭಾರ್ಗವನಚ್ಚರಿಯಾಗೆ; ಲೋಕಂ ಕಡೆಗಾಲದ ಸಿಡಿಲ್ದನಿಗೆತ್ತು ತಲ್ಲಣಂಗೊಂಡುದು. ಮತ್ತಂ ಶ್ರೀರಘುರಾಮಂ ಭೃಗುರಾಮಂಗೆ—"ವಿಪ್ರಾಗ್ರಣಿಯೆ! ಪೇೞ್ದಂತೆಸಗಿದೆಂ. ಇನ್ನೇಂ ಮನದ ಬಯಕೆ? ಕರುಣಿಪುದು." ಎಂಬುದುಂ; ಪೆರ್ಮೆಯಿಂ—"ಅಂತಾದೊಡೆ ಆನೀವ ಕೋಲಂ ಬಿಲ್ಗೆ ಜೋಡಿಸುತೆ ಆಕರ್ಣಾಂತಂ ಸೆಳೆದಿಸುವುದು." ಎಂದು ಬಂದು ಬಾಣಮನೀಯಲ್ಕೋದಂ. ಆಗಳ್ ಸೀತಾರಾಮಂ ನಸುಮುನಿಸಿಂದಿಂತೆಂದಂ—"ಕೇಳ್, ನಿನ್ನಯ ನುಡಿಗೆ ರೋಸಂ ಪುಟ್ಟುವುದಾದೊಡಂ ಬರ್ಮಗೆ ಮನ್ನಿಪೆಂ. ಆದೊಡೆ ನೀಂ ದರ್ಪಿಷ್ಟಂ. ಬೊಮ್ಮನೊಲ್ಮೆಯಿಂ ರಾಜನ್ಯರಂ ಗೆಲ್ದೆನೆಂಬ ಹಮ್ಮನುೞಿ. ಆನಾರೆಂದು ಬಲ್ಲೈ. ನಿಜರೂಪಮಂ ತೋಱುವೆಂ. ಅಂತು ನೋಡೆ ದಿವ್ಯದೃಷ್ಟಿಯುಮನೀವೆಂ." ಎನುತೆ ಪೇೞ್ದೊಡನೆಯೆ. ಭಾರ್ಗವಂಗೆ ಪೊಸನೋಟಂ ಪುಟ್ಟಿದುದು. ಮುನಿಕುಲೋತ್ತಮ! ಅನಂತರಂ ಪರಶುರಾಮನೇಂ ಕಾಣ್ಬಂ? ದ್ವಾದಶಾದಿತ್ಯರುಂ, ಏಕಾದಶರುದ್ರರುಂ, ದಶಯೋಗಿಣಿಯರುಂ, ನವಗ್ರಹಂಗಳುಂ, ಅಷ್ಟವಸುಗಳುಂ, ಸಪ್ತಶರಧಿಗಳುಂ, ಷಟ್ಶಾಸ್ತ್ರಂಗಳುಂ, ಪಂಚತತ್ತ್ವಂಗಳುಂ, ಚತುರ್ವೇದಂಗಳುಂ, ತ್ರಿಮೂರ್ತಿಗಳುಂ, ದ್ವಿಜಾತಿಗಳುಂ, ಏಕರೂಪನೊಳ್ ತೋರ್ದುವು. ಇಂತೀವಿಶ್ವರೂಪಮಂ ಕಣ್ದಣಿಯೆ

ಕಾಣ್ಬನ್ನೆಗಂ; ವಿಶ್ವರೂಪಂ ಭಾರ್ಗವನಿತ್ತ ಬಾಣಮುಂ ಸೆಳೆದೆಸೆವೊಡೆ, ಕಣೆ ಅವಂಗೆ ತಗಲ್ದು ಮೂರ್ಛೆವೋದಂ. ಅಂತುಮಿಂತು ತೆಪ್ಪಳ್ತು ನೋೞ್ಪುದುಂ; ನಿಸ್ತೇಜನಾಗಿ ಒಂದು ವರ್ಷಮಂತೆಯೆ ಇರ್ದಂ. ಸೊರ್ಕುಡುಗಿ ದುಃಖಿಪ ಪರಶುರಾಮಂ ಪಿಂತೆ ಸತ್ಯಯುಗದೊಳ್ ಅಜ್ಜಂ ಭೃಗುಋಷಿ ತಾಂ ತಪಂಗೆಯ್ದ ವಧೂಸರ [ವೆಂಬ ಪುಣ್ಯನದೀತೀರಕೆಯ್ದಿ, ನಿಶ್ಚಲಭಕ್ತಿಯೊಳ್ ತಪವೆಸಗುತೆ, ಮುನ್ನಿನೋಲ್ ತೇಜಸ್ವಿಯಾಗಿರ್ದಂ. ಕೇಳ್ಮೈ, ಇತ್ತಲ್ ರಾಘವಂ ಸರ್ವರೊಡನೆ ಪುರಜನರ್ ಪೊಗೞೆ ಸುಖದೊಳಗಯೋಧ್ಯೆಗೆಯ್ತಂದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್

**ನವಮಾಶ್ವಾಸಂ**

ಸಂಪೂರ್ಣಂ.



# ದಶಮಾಶ್ವಾಸಂ.

---

ಇಂತೀಸರಿವೆೞ್ ರಘುಪುಂಗವನಯೋಧ್ಯೆಯೊಳಿರ್ಪುದುಂ; ದಿನಗತಿಯೊಳೆಂತಾನುಮೊಂದು ಹೇತುವಿಂ ಈರೇೞ್ಗಲಂ ವನವಾಸಂ ಪ್ರಾಪ್ತಿಯಾಗೆ; ಸೀತಾಲಕ್ಷ್ಮಣಸಮೇತಂ ದಂಡಕಾರಣ್ಯದತ್ತಲ್ ಪೊಱಟಂ. ಆಲಿಸ್ಮೈ! ಈತೆಱದ ಬನ್ನಮೊದಪಿದೊಡಂ ಪ್ರೇಮನಂಗುಂದಿದನೇ! ಅಲ್ಲಿ ಗೋದಾವರೀತೀರದೊಳೆಲೆವನೆಗೆಯ್ದು ಕಾಡೇ ನಾಡಾಗೆ, ಎಲೆವನೆ ಯರಮನೆಯಾಗೆ, ಸಂತಸದೊಳಿರ್ದಂ. ಲಕ್ಷ್ಮಣನಣ್ಣನನ್ನೆಯ್ಯನಂತೆ, ಸೀತೆಯಂ ಮಾತೆಯಂತೆ ಭಾವಿಸಿ ಸಿಚ್ಚಂ ಸೇವಿಸುತಿರ್ಪಂ. ಸೀತೆಯುಂ ಪತಿಯೆ ಗತಿಯೆಂದು ಬಗೆದಾವಗಂ ಪೂಜಿಸುತಿರ್ಪಳ್. ಇಹಗಿಹಗೆ ರಾಘವಂಗೆ ಸೀತೆಯೊಳ್ ಪ್ರೀತಿಯುಂ ಲಕ್ಷ್ಮಣನೊಳ್ ಕಾರುಣ್ಯಮುಂ, ಸೀತೆಗೆ ಪತಿಯೊಳ್ ಭಕ್ತಿಯುಂ ಮೈದುನನೊಳ್ ದಯೆಯುಂ, ಲಕ್ಷ್ಮಣಂಗೆ ಅಣ್ಣನೊಳ್ ವಿಶ್ವಾಸಮುಂ ಅತ್ತಿಗೆಯೊಳ್ ವಿನಯಮುಂ ಅನ್ಯೋನ್ಯಮಾಗಿರ್ದುವು. ರಾಘವನೋರೊರ್ಮೆ ಮಡದಿಗೆ ವನದಿರವಂ ಬಿತ್ತರಿಪಂ; ಕಣ್ಗೆದಿರೊಳ್ ಬರ್ಪ ಬಗೆಬಗೆಯ ಮಿಗಂಗಳಂ ಬಣ್ಣಿಪಂ; ಪಲವಣ್ಣದ ಪಕ್ಕಿಗಳಂ ತೋಱಿಪಂ; ಪೂವಳ್ಳಿಗಳ ಪೆಸರನೊರೆವಂ. ಸೀತೆ ಪತಿ ಬೇಂಟೆಯಾಡಿ ಬರೆ; ಕೈಯ ಬಿಲ್ಲಂ ಕೊಂಡಿಟ್ಟು, ಆಸನಮನಿತ್ತು ಪಚರಿಸುವಳ್. ಮೇಣ್ ಲಕ್ಷ್ಮಣಂ ಪಣ್ಗಳಂ ತಿಱಿತಂದು, ಇವರ್ಗಮರ್ಪಿಸಿ, ತಾನಿರುಳೊಳವರ್ಗೆ ಕಾವಲಾಗಿರ್ಪಂ.

ಈಪರಿಯೊಳವರ್ ಪುರದೊಳೆಂತಂತೆ ಸೊಗದೊಳಿರ್ಪುದುಂ; ಕೆಲಗಾಲಂ ಪೋಗೆ, ದುಷ್ಟರಕ್ಕಸಂ ರಾವಣಂ ಗಂಡಸರ್

ಪೂಜಿಗಿರ್ಪ ಪೊೞ್ತಿಂ ಕಾದು, ಕವರ್ತೆಯೊಳ್ ಪರ್ಣಶಾಲೆಯಿಂ ಸೀತೆಯುಂ ಕಳ್ದು ಲಂಕೆಯುತ್ತಲ್ ಕೊಂಡುಯ್ದಂ.

ಇತ್ತಲ್ ರಾಮಲಕ್ಷ್ಮಣರ್ ಬೇಂಟೆಯಾಡಿ ಮರಳ್ದೆಲೆವನೆಗೆ ಬಂದು ನೋಡೆ, ಸೀತೆ ತೋರ್ದುದಿಲ್ಲಂ. ಒಡನೆ ಕಣ್ಗಿಟ್ಟಲೆ ಬಂದು ಮೂರ್ಛೆವೋಗಲಿರ್ವರುಂ ; ಮೊದಲ್ ಚೇತನಂಗೊಂಡೆಲ್ದ ಲಕ್ಷ್ಮಣನ ಶೈತ್ಯೋಪಚಾರದಿಂ ರಾಘವಂ ಧಾತುಗೊಂಡರೆಗಳಿಗೆಪರ್ಯಂತಂ ಮೋನಮಿರ್ದು, ಮೇಣ್ ತಾಂ ತಮಗೆ ದಿಟಂಗೆಯ್ದು ಪುಡುಕಲ್ ಪೊರಟರ್. ಇಂತು ಪೊರಟು ಪೞುವೊಳ್ ಪುಡುಕಿ, ಕಣಿಯೊಳ್ ಕಂಡು, ಕೊಳವುಂ ಕಲಂಕಿ, ಅಡವಿಯೆಲ್ಲಮನಱಿಸಿಮೊಡವುರಸಿ ಮಱಿಸಿ ಪೋಗೆ ; ಪೋಗಿ, ಕಂಡ ಕಂಡೆಡೆಯೊಳ್ ಕಂಡಕಂಡವರಂ ಬೆಸಗೊಂಡೊಡಂ, ಆರುಂ ಸದುತ್ತರಮಿತ್ತರಿಲ್ಲಂ. ಕೇಳ್ಗೈ, ಮುನಿಪ! ಎಂತೆಂತು ಮಡದಿಯ ವಾರ್ತೆ ಪುಟ್ಟತಿಲ್ಲಮಂತಂತು ಮೋಹಮಿರ್ಮಡಿಸೆ ; ವನಮನೆಲ್ಲಮಂ ಸೀತೆಗೆತ್ತು ಪೂಗೊಂಚಲಂ, ಬಳ್ಳಿಯುಂ, ಪಣ್ಣಂ ಎಣ್ಣದೆ ಪಿಡಿವಂ, ಅಪ್ಪುವಂ, ಮುದ್ದಿಪಂ. ಈತನ್ನ ಮರುಳ್ತನಂ ತನಗೆಯೆ ಅಱಿವಾಗೆ ಸಾಜ್ಜುವಂ. ಎಂತಾದೊಡಂ ಸೀತೆಯ ಸುೞುವು ಕಾಣದಿರೆ, ಎರ್ದೆಗುಂದಿ ಪೆಣ್ಣಂ ಪೆಣ್ಣನ ಗುಣವುಂ ನೆನೆನೆನೆದು ಬಾಯ್ವಿಟ್ಟೞಲ್ ತೊಡಂಗಿದಂ. ಇಂತು ಮಱುಗುವಾತನ ಕಣ್ಣೀರೆ ಪೊಚ್ಚವಾಗೆ ಪರಿದುದು. ಮೇಣ್ ಕಣ್ಬೆಳುಂಕೆ ಬೆಟ್ಟವಾದುದು. ಏನಾದೊಡವಾರಾರೇವರ್ ?

ರಾಮಲಕ್ಷ್ಮಣರಿರ್ವರುಂ ಬಲ್ದುಗುಱದಿಂ ಮುಂತೆ ಮುಂತೆ ಋಶ್ಯಮೂಕಪರ್ವತಶಿಕರಪ್ರಾಂತದೊಳ್ ಬರೆವರೆ ; ಆಬೆಟ್ಟನೋಡೆ

ಯುಂ ಸುಗ್ರೀವನೆಂಬೊರ್ವಂ ಗುರುವಾಣರಂ ಇವರಂ ಇವರ ಠೀವಿಯನಿವರ್ಪಿಡಿದ ಬಿಲ್ಗಣೆಗಳ ಬಲ್ಪಂ ದೂರದೆ ಕಂಡು, ಕಟ್ಟಚ್ಚರಿಯಿಂ ತಾಂ ತನ್ನ ಬಱಿಯುವವರೊಳಿಂತೆಂದಂ :— " ನೋಳ್ಪುದು ಬಟ್ಟೆವಿಡಿದೈತರ್ಪೀಕಿಱುಜೌವನಿಗರಂ. ನಡೆವ ಭಂಗಿಯುಂ ನೋಡೆ ತಿರುಕುಳಗಳಂತೆಯುಂ, ಪಿಡಿವ ಧನುರ್ಬಾಣಂಗಳಂ ನೋಡೆ ಕ್ಷತ್ರಿಯರಂತುಂ, ಬಿಡುವ ಸೊಬಗಂ ನೋಡೆ ಅಮ*ರ್ದರ್ಗಣಿಗಳಂತುಂ, ತೋರ್ಪರ್. ಆರಪ್ಪರಿವರ್? ಏಂ ಪಗೆಯಣ್ಣಂ ವಾಲಿಗೆ ನೆರವಾಂತೆಮ್ಮೊಳ್ ಪೋರಲ್ ಬಂದರೆಯೆ? ಅಲ್ಲದೊಡೇಂ ಕಜ್ಜಂ? ಆರಾದೊಡಮವರನಾರಾದೊಡಮಾರಯ್ದು ಬರ್ಪಿರೆ?"

ಆಗಳಾತನಾಪ್ತರೊಳಾಂಜನೇಯಂ ಆಣ್ಮನಾಣೆಯನಾಂತಾವೀರರ್ಕಳಾರೆಂದಾರಯ್ಯೆ ಪೋದಂ. ಮತ್ತಾ ಹನುಮಂತನವರ್ಗೆ ಕಾಣಿಸಿಕೊಂಡು– " ನೀವಾರ್?" ಎಂಬುದುಂ ; ರಾಘವಂ ಮುನ್ನಂ ಭಾರ್ಗವಂಗೆಂತಂತೆ ನಿಜರೂಪುದೋಱಿದಂ. ಕ್ರಮದಿಂ ಶಂಖಚಕ್ರಗದಾಪದ್ಮಂಗಳಿಂ ಶೋಭಿಪ ನಾಲ್ಕೈಗಳುಂ, ತೊಳಗಿಪೂದೆಂಡೆಯಿಂ ಮೆಱೆವ ಕೊರಲುಂ, ಸಿರಿವಚ್ಚಲಚ್ಚಣದಿನೊಪ್ಪ*ವೆರ್ದೆಯುಂ, ಬೆಳ್ವಟ್ಟೆ ಬಿಗಿದ ನಡುವುಮಿಂಬಾಗೆ; ಎಡಬಲದೊಳ್ ಚೌರಿಯುಂ ಬೀಸುವ ಲಕ್ಷ್ಮೀಸರಸ್ವತಿಯರುಂ, ಇದಿರೊಳ್ ತುತಿಸುವ ಸನಕಸನಂದನಾದ್ಯರುಂ, ಸುತ್ತಮಿರ್ದು ಸೇವಿಪ ಸಿದ್ಧವಿದ್ಯಾಧರಗಂಧರ್ವಾದ್ಯರುಂ, ಮನಂಗೊಳೆ; ಶುಭಗಾತ್ರನಪ್ಪ ಪರಮಾತ್ಮನಂ, ಮೇಣ್ ಸಾಸಿರ ಪೆಡೆಗಳಿಂ ರಾಘವನ ಮೇಲೆ ಸತ್ತಿಗೆಯೊಲೆತ್ತಿ ನಾಗರ್ಕಳಿಂ ಸನ್ನುತಿಗೊಳ್ವ ಮಾಸೇಸನಂ ಕಾಣ್ಬುದುಂ; ಅಚ್ಚರಿಗಚ್ಚರಿವೋಱ್; ತನಗೆ ಕಾಣಿಸಿದ ಬ್ರಹ್ಮಾಂಡನಾಯಕನಂ ಬಲ್ವಗೆಯೊಳ್ ಪೊಗಟ್ದು, ಆನಂದಾಬ್ಧಿಯೊಳ್

ಮುೞುಂಗಿ, ವಿಶ್ವಮೂರ್ತಿಯಿಂ ತತ್ತ್ವೋಪದೇಶಮಂ ಕೊಂಡು ನಲಿದಾಡುತಿರ್ದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ದಶಮಾಶ್ವಾಸಂ
ಸಂಪೂರ್ಣಂ.

---

# ಏಕಾದಶಾಶ್ವಾಸಂ.

---

ಶ್ರೀರಾಮಚಂದ್ರನುಂ ಮಾನುಷಮಾತ್ರನಾಗಿ ಹನುಮನೊಡನಿಂತೆಂದಂ :— "ಕೇಳ್ವುದು, ತಿರೆಯೊಳ್ ನೆಗೞ್ತೆವಡೆದ ಅಯೋಧ್ಯೆಯೆಂಬ ಪೊೞಲೊಡೆಯನಪ್ಪ ಪಂಕ್ತಿದೇರಂಗೆ ಅಣುಗರಾಂ. ಎಂತಾನುಮೊಂದು ಕಾರಣದಿಂ ಈಯಡವಿಗೆಯ್ತರೆ ಎನ್ನಾಪೆಣ್ಣಂ ಜಾತಿಯಿಂ ರಕ್ಕಸಂ ರಾವಣಂ ಕಳ್ದುಯ್ದಂ. ಆದೊಡಂ ತಾದುಟ್ಟಂ ದಿಟ್ಟಗೊಟ್ಟದನಿಲ್ಲಂ. ಇಂತಾಗಲೀಸುೞಿವೞಿಯೆ ಪೊರಟಂತಿತ್ತಣ್ಗೆ ಎಮ್ಮ ಬರವಾದುದು. ಎಮ್ಮೊಳ್ ನಿನಗೆ ದಯೆಯುಂಟಾದೊಡೆ ನಿನ್ನೊಡೆಯನಪ್ಪ ಸುಗ್ರೀವನೊಡನೆಮ್ಮಂ ಕೆಳೆಯರನಾಗಿಪುದು. ಅಂತೆಸಗಲ್ನೀಂ ತಕ್ಕವನೆಂಬುದಂ ಬಲ್ಲೆಂ." ಈನುಡಿಗೇಳ್ದು ಅಣುವಂ ಕೈಮುಗಿಯುತೆ— "ಜೀಯ! ನಿನ್ನ ಮಡದಿಯಂ ರಾವಣನುಯ್ದನೆಂಬೀನುಡಿಯನಾಂ ವಿಶ್ವರೂಪಮಿದನೆಂತಱಿತೆನಂತೆಯೆ ಬಗೆವೆಂ. ಇದರೊಡಂ ಆಣ್ಮನಾಣೆಯಂತೆ ನಡೆವುದು ಊಳಿಗದವರ್ಗೆ ನ್ಯಾಯಂ. ಎನಗೆ ನೀನುಂ ಸುಗ್ರೀವನುಮೊಡೆಯರಪ್ಪಿರ್. ಅಂತಾಗೆ ನಿಮ್ಮ ಮನಂಗಂಡಂತೆ ಆಂ ವರ್ತಿಪೆಂ, ದಿಟಂ. ಅದಱಿಂದೀಗಳ್ ಗುರುವಾರ್ಣರನೆಡೆಗೆ ಬಿಜಯಂಗೆಯ್ದು ಅವರುಮನೆಮ್ಮವರುಮಂ ಪಾವನಂಗೆಯ್ವುದರ್ಕೆ ಪೊಱಮಡುವುದು." ಎಂಬುದುಂ;— "ಅಕ್ಕೆ" ಎನೆ; ಆಂಜನೇಯಂ ರಾಮಲಕ್ಷ್ಮಣರನಿರ್ವರುಮಂ ಪೆಗಲೊಳ್ ಪೊತ್ತೊಡನೆ ಕೊಂಡುಯ್ದವರಿರವನೊರೆಯೆ; ಸುಗ್ರೀವಂ ತಡೆಯದೆೞ್ದು ಪಾಸಿತ್ತು ಕುಳ್ಳಿರಿಸಿ ಮನ್ನಿಸಿದಂ.

ಕೇಳ್, ಮುನಿನಾಥ! ಬಱಿಕವಾನರಂ ತನ್ನಣ್ಣಂ ವಾಲಿ ಮಡದಿಯಪ್ಪ ರುಮೆಯನಪಹರಿಸಿದ ಪರಿಯಂ, ಮತ್ತಮೋಗಳುಂ ತನಗೀವ ಕೋಟಲೆಯುಂ ಸವಿಸ್ತರಂ ಬಿನ್ನೈಸಿ, ತನಗಿದಱೊಳ್ ಸಾಯನಪ್ಪನೆಂದು ದೇವರ್ ಬಳ್ಳಿರವಾಗುತೆ ನಿಜಪತ್ನಿಯುಂ ಮಗುಳ್ದು ತಂದಿತ್ತೊಡೆ, ತಾನುಂ ಸೀತೆಯುಂ ಪುಡುಕಿ ತರ್ಪುದಱೊಳ್ ಸಾಯನಪ್ಪನೆಂದು ದೇವರೊಳ್ ಬೇಡಿಕೊಳ್ವುದುಂ; ರಾಘವಂ ವಾಲಿಯುಂ ಲೀಲಾಮಾತ್ರಮೆನೆ ಕಾಲನೆಡೆಗಟ್ಟಿ ಬಾಲೆಯುಂ ಮೇಣ್ ವಿಶಾಲರಾಜ್ಯಮುಂ ಸುಗ್ರೀವಂಗಿತ್ತಂ.

ಇಂತಾಗಲ್ ಸುಗ್ರೀವಂ ವೀರರ ಸಾಸಕೆ ಪೊಗೞ್ದು ಬಡನೆಮ ಸೀತೆಯುಂ ಪಿಂ ತರ್ಪ ಕಜ್ಜಮನಣಿಗೆಯ್ದು, ಪಲವೆಡೆಯ ವಾನರರಂ ನೆರೆಯಿಸಿದಂ. ಮೇಣಾರಾಘವಂ ಲಂಕೆ ತೆಂಕಗಡಲಾಚೆಗಿರ್ಪುದೆಂದು ಬಗೆದಂದು ಸೋದರಂಗೆ — "ತಮ್ಮ! ಈಗಳೀತಡಿಯೊಳ್ ನೆರೆದೆಮ್ಮೀಬಲಂ ಕಡಲ್ದಾಂಟಿ ಪೋಪಂತೆಸಗೈ." ಎಂಬುದುಂ; ಲಕ್ಷ್ಮಣಂ ಕಡಲ್ಗೆ — "ಎಲೆ ಕಡಲೆ! ಎಂತಿರ್ಪಯುಂತೆಮೆ ಕವಲದಿರ್ಪುದೀಬಲಂ ನಿನ್ನಂ ದಾಂಟಿ ಪೋಪನ್ನಂ." ಎನುತೆ ನುಡಿಯೆ; ನುಡಿಯಂ ಕಡೆಗೊತ್ತಿದಂ ಕಡಲೊಡೆಯಂ. ಮತ್ತಂ ಸೌಮಿತ್ರಿ ಕೋಪದಿಂದರೆಚಣಂ ಬಿಱುದಿಟ್ಟಯಿಂದಿಟ್ಟಿಸುತೊಡನೆಯೆ ಮುನ್ನೀರೊಳ್ ಪಾಱ ಬಿಟ್ಟಂ. ಏನೆಂಬೆನಾತನ ಮೆಯ್ಯಿಂ ಇಂಗಡಲ್ನೀರ್ ಬೇಗುದಿಗೊಂಡು ಬತ್ತಿದುದು; ಜೀವಾದಿಗಳ್ ಬೆಂದುವು; ಆಗಸವಟ್ಟೆಯೊಳ್ ಬಿಡುಗಣ್ಣರ್ ಬೆದರ್ದರ್; ಕಪಿಸೇನೆಯಚ್ಚರಿಗೊಂಡುದು. ಆಗಳ್ ಅಣ್ಣಂ ರಾಮಂ —"ಇಂತು ನೀಂ ಗೆಯ್ವುದು ತಕ್ಕುದೆಂದಾಂ ಬಗೆಯೆಂ." ಎಂದು ತಮ್ಮಂಗೆ ಬುದ್ಧಿವೇೞ್ದು,— ಅಕ್ಕೆಯೆಂತಾದೊಡಂ ಕಡಲಂ ತುಂಬಿಸವೇೞ್ಕುಮೆ

ರಕ್ಕಸನೊಳ್ ಬಂದಿಯಾದಳ್! ಪಲನುಡಿಯಿನೇಂ? ರಾಘವ! ನಿನ್ನ ಭಯಪ್ರಸಾದದತ್ತಣಿನೀಸುರರುಂ ನರರುಮೊಣಿಕೆಯಿಲ್ಲದಿರ್ಪರ್." ಎನುತೆ ಬಲ್ಬಗೆಯೊಳ್ ಪೊಗೞುತಿರ್ದರ್.

ಆಗಳ್ ರಾಮಚಂದ್ರನೊತ್ತಿನೊಳ್ ಪಟ್ಟವಣೆಯೊಳ್ ಕುಳ್ಳಿರ್ದ ಸೀತೆ ತವಸಿಗಳ್ಗೆ—"ಎಲೆ ಪೂಜ್ಯರೆ! ಎಮ್ಮರಸನ ವಿಷಯುವಾಗಿ ಸೀಮಿಂತಪ್ಪಣೆಯಿತ್ತುದು ನಿಜ್ಜುಯಂ ನಾಣ್ಣುಡಿಯುಕ್ಕುಂ. ಪತರ್ಕನೆ? ದುಟ್ಟಂ ಕೈಕಸಿಯುಣುಗಂ ರಕ್ಕಸನಾದೊಡಂ ರಕ್ಕಸರೊಳ್ ಪಿರ್ಕಳನಲ್ತು." ಎಂಬುದುಂ; ಅವರೊಳೊರ್ವರೊರ್ವರ ಮೊಗಮಂ ದಿಟ್ಟಿಸುತೆ—"ಇದೇನಿಂತಿವಳೊರೆದಳ್? ನೋಡೆ ಪುಸಿಯೊರೆವಳಲ್ತು, ಪೆಱತೇನಾನುಮಚ್ಚರಿಯಿರ್ಕುಮೋ?" ಎನುತಾಡಲಸಿತಜೊಳ್ ಬಾಲೆ ಬಾಗಿ ಬಾಮುದಿಂಬಲ್ಲಿದರ್ಗೆಂದಳ್—"ಸ್ವಾಮಿ! ಸಟೆಯೊರೆದಳೆಂದೆಣ್ಣದಿರಿ. ಅಪ್ಪಣೆಯಿತ್ತೊಡೀಯಿರವನೊಂದುಱುಯುದೊರೆಯೆ ಬಲ್ಲೆಂ." ಎನೆ; "ಅಂತಕ್ಕೆ." ಎಂಬುದುಂ, ಪೇೞಲೊಡಂಗಿದಳ್.

"ಎಲ್ಲರುಂ ಲಾಲಿಪುದು. ಆನಿೞಮುನವನ್ನನ ಕೈಪಿಡಿವಮೊದಲ್ ಎನ್ನಯ ಜನಕನಪ್ಪ ಜನಕನೆಡೆಯೊಳಿರ್ದುದಂ ಬಲ್ಲಿರಿ. ಅಂತಾಯೆಡೆಯೊಳ್ ಬಳೆಯುತಿರ್ಪುದಂ, ಮಕ್ಕಳಾಟಿಕೆಯಾದೊಡಂ ಮಱೆತುದಿಲ್ಲಂ. ಒಮ್ಮೆ ಎಮ್ಮರಮನೆಗೆ ಅತಿಥಿರೂಪದೊಳೊರ್ವಂ ಪಾರ್ವಂ ಬರೆ, ಅಯ್ಯನೊಯ್ಯನೆ ಎೞ್ದು, ಮನ್ನಿಸಿ ಪಾಸಿತ್ತು ಕುಳ್ಳಿರಿಸಿದಂ. ಆಗಳಾಭೂಸುರಂ ಬೊಪ್ಪಂಗೆ—'ನೀನೊಪ್ಪಿದೊಡೆ ನಿನ್ನೀಯರಮನೆಯೊಳ್ ನಾಲ್ಕಾಲಮಿರಲಿಚ್ಚೈಪೆಂ.' ಎಂಬುದುಂ; ತಾತನೊಲ್ಲೆನೆಂಬನೆ, ಸಂತಸದಿನೊಪ್ಪಿ, ತನ್ನಬೀಡೊಳ್ ನಿಲ್ಲಿಸುತೆ, ಎಂತುಂ ಕುಂದುದೋಱದವೋಲ್ ಸಾಕುತೆ ಪಗಲುಮಿ

ರುಱುಮುವನನಗಲದೆ ಬೞಿಯೊಳಿರಲಾನುಂ ಪಿತನುಂ ಬಿಟ್ಟುದಿಲ್ಲಂ. ಇಂತಾಗಲೆಮಗ ತಾಂ ತಿರಿದಱುವ ಪುಣ್ಯಕ್ಷೇತ್ರಮನುಂ ಬಣ್ಣಿಪಂ. ಈ ತೆಱನೊಳ್ ಕೆಲಗಾಲಂ ಪೋಗೆ, ಅವನೊಳೆನಗೆ ಸಲಿಗೆಯುಂಟಾಗಲೊರ್ವಳ್ ಓರೊರ್ವರ್ ಅವನ ಸೇವೆಗೆಯ್ಯುತಿರ್ದೆಂ. ಇಂತುಮೊರಬ್ರಾಗರ್ಲಂ ಸವೆಯಲಾನೆಸಗಿದ ಸೇವೆಯೊಳ್ ಮೆಚ್ಚುಗೆಯುಂಟಾಯ್ತು. ಬನ್ರ್ಗಳ್ ಪೊೞ್ತುೞಿಯೊಳುಪ್ಪವಡಿಸಿ, ಕಾಲ್ಯಮಂ ತೀರ್ಚಿ, ಎನ್ನಂ ಕರೆದಿಂತೆಂದಂ:— ' ಮಗಳೆ! ಇತ್ತಲ್ ಬಾ. ಕಂಡುದೊಂದಚ್ಚರಿಯಂ ಪೇೞ್ವೆನೇನೆನೆ; ಮೊಸರ ಜೇನೆಯ್ದ ಕಡಲ್ಗಾಕಡೆಯೊಳ್ ಇಂಗಡಲೆಂದೊಂದು ಮುನ್ನೀರಿರ್ಕುಂ. ಅದಱ ನಡುವೊಂದು ಪುಷ್ಕರವೆಸರ ದ್ವೀಪವೆಸೆಗುಂ. ಆಪುಷ್ಕರದ್ವೀಪದೊಳ್ ಅಲರಿಚಂಗೆಡೆಯುಪ್ಪ ಮೋಱೆ ಪಯಿಂಭಾಸಿರೆಸಱಂ ಕೂಡಿ ಕಿಚ್ಚಿನೋಲ್ ಬೆಳಗುತಿರ್ಪ ಪುಷ್ಕರವೊಂದಿರ್ಕುಂ. ಅಂತಿರ್ಪ ದ್ವೀಪವರ್ಷಂಗಳ ಮಧ್ಯದೊಳ್ ಎಣ್ದೆಸೆಯೊಳಂ ಬಿಡುಗಣ್ಣರ ಬಡಗಿಯುವಂ ಕಟ್ಟಿದ ಎಣ್ದೆಸೆಯೊಡೆಯರ ಅರಮನೆ ತೋರ್ಕುಂ. ಇತ್ತಲ್ ಸುಮಾಲಿಯೆಂಬ ರಕ್ಕಸಂಗೆ ಕೈಕಸಿಯೆಂಬೊರ್ವಳಣುಗಿಯುಂಟು. ಈಕೆಗೊಡುಗೂಸಂ ವಿಶ್ರವಸ್ಸೆಂಬವಂಗೆ ಮದುವೆಗೆಯ್ದಂ. ದಿನಂ ಪೋಗಲ್ ಇವಳಿರ್ವರಂ ಗಂಡುಮಕ್ಕಳಂ ಪೆತ್ತಳ್. ಇವರೊಳ್ ಪಿರಿಯನೊರ್ವಂ ಸಾಸಿರಮೊಗದವಂ, ಕಿಱಿಯಂ ಪದಿಮೊಗದವಂ; ಇವರ್ ಪುಟ್ಟಿದಾಗಳಾಗಸದತ್ತಣಿಂ ಮಱುನುಡಿಯೊಂದು — ಈಯಿರ್ವರ್ ತನಯರ್ ಲೋಕಮಂ ಬಾಧಿಸರಪ್ಪರ್; ಈಕಾರಣಂ ರಾವಣರೆಂದು ಪೆಸರಿಕ್ಕುವುದು. ಎಂದು ಪುಟ್ಟಿದುದು. ಈತೆಱದೊಳ್ ಮಕ್ಕಳ್ ಬಳೆಯುತಿರೆ; ಕಿಱಿಯಂ ತನಸಿಂ ಬೊಮ್ಮನನೊಲಿಸಿ ವರಮಂ

ಪಡೆದು, ಮುಪ್ಪೊಱಲುಂ ದಾೞಿಯಿಡುತ್ತೆ, ಕಟ್ಟಕಡೆಗೆ ಐಗಳಂಗೆ ಕೆಳೆಯನಪ್ಪ ಪೊನ್ನೊಡೆಯನಾಳ್ವ ಪೊಱಲಪ್ಪ ಲಂಕೆಯುಂ ಪೊಕ್ಕು, ಸೂಱೆಗೊಂಡು ಮೋಣವನನಟ್ಟಿ ತಾನಾಣ್ಮನಾದಂ.

"ಅಣ್ಣನ ಬೀರವಂ ಪೇೞ್ವುದೇಂ? ಎಳವರೆಯದೊಳ್ ಆಟಕೆಂದು ಸೂರ್ಯಚಂದ್ರಮರಂ ತಾಳವಾಗೆ ಪಿಡಿವಂ; ಕಡಲಂ ಕಲಂಕುವಂ; ಮತ್ತಂ ಬಿಣ್ಪಿನಾಳ್ಪೋಪದೊಳೆ ದೆಸೆಯಾಣ್ಮರನಟ್ಟಿ ಮರಳ್ದು ಬಂದು ಪಿಡಿಯದೋಲ್ ಕಾಪಿಡುತೆ ತಾನಿಂದಿರನರಮನೆಯುಂ ತನ್ನ ಬೀಡಾಗೆ ಕೊಂಡದಱೊಳ್ ತನ್ನ ಬಳಗಂ ಕೂಡೆಯಾವ್ವೀಪವನಾಳುತ್ತಿರ್ಪಂ. ಈತನಿರ್ಪೆನಾಡಂ ಬಣ್ಣಿಸಲಳವೆ? ತಾನೋರೊರ್ವರ್ಪೋರೊಂದೆಡೆಯುಂ ಪೋಗ್ಯದಾಯೆಡೆಯ ಸಾರವಸ್ತುಗಳನುಯ್ದು, ತನ್ನ ಪೊೞಲಂ ತುಂಬುವಂ. ಪಲಸು, ಕಾಂಗು, ತೆಂಗು, ಮಾಮರಂ, ಪನೆಮರಂ ಮುಂತಪ್ಪ ಮರಂಗಳಾವಗಂ ಫಲಂಗಳಿಂ ತುಂಬಿರ್ಕುಂ. ಜಾಜಿ, ಬಕುಳಂ, ಬಂದುಗೆ, ಗೋರಂಟೆ ಮುಂತಪ್ಪ ಪೂಗಿಡುಗಳ್ ಸೊಗಯಿಸುಗುಂ. ಪುರುಳಿ, ಗುಬ್ಬಿ, ಕರ್ಬಕ್ಕಿ, ಮೊದಲಪ್ಪ ಪಕ್ಕಿಗಳ್ ಮೆಲ್ದನಿಯಿಂ ಪಾಡುಗುಂ. ಮಿಗಂಗಳ ಭೇದಮಂ ಬಣ್ಣಿಸಲ್ ಬಾರದು. ನೀರೆಡೆ ತೋರ್ದೆಡೆಯೊಳುಂಟು; ಪಾೞ್ನೆಲಂ ಕಿೞ್ನೆಲಂ; ಲೋಗರಂತು ಬನ್ನಮಂ ಕಂಡರಲ್ತು; ಪಸಿರಿಗೆ ಸರಿಯಿಲ್ಲಂ; ರನ್ನಂಗಳ್ಗೆ ನೆಲೆಯಾಗಿರೆ, ಪುರದ ನೆರೆವನಗಳಂ ದಾಂಟಲಾರದಾದಿತ್ಯಂ ತೆಂಕು ಬಡಗು ಬೞಿಯೊಳ್ ಬಾನೆಡೆಯೊಳ್ ಪೋಪನಪ್ಪಂ. ಇಂದಿರನ ಅಮರಾವತಿಯುಂ, ನಾಗೇಸನ ಭೋಗವತಿಯುಂ, ಸಿರಿಯರಸನ ಶ್ವೇತದ್ವೀಪಮುಂ ಇವರ್ಕೆ ಪಾಸಟಿಯಲ್ಲಂ. ಕೇಳ್, ಬಾಲ! ಪಿರಿಯನಪ್ಪ ಸಾಸಿರಮೊಗದವನ ಬಲ್ಪುಪೆರ್ಮೆಗಳ್ಗೆ ಬೆದರ್ದು, ರಕ್ಕ

ಸರ್ ಮಱುವ್ರೊಕ್ಕು ಸೇವಿಸರ್; ನಾಗರ್ ಸಾಗುವರ್; ನಾಲ್ಮೊಗದವಂ ಪಂಚಾಂಗಮನೋದುವಂ; ಐಗಳಂ ಪಡಿಯುೞಂ. ಗುಣದೊಳ್ ಪುರುಡೇಂ? ಅಮರ್ದಾಣಿಗಳವನಡಿದಾವರೆಯ ಬಂಡುಣಿಗಳ್. ಇಂತಿರೆ ಕುಱುಮಾನಿಸರೆಮ್ಮಂ ಲೆಕ್ಕಿಸನೇ? ಪೆಣ್ಣೆ! ಆಯಿರ್ವರ ಪೆಸರನೆ ಕೇಳ್ದೊಡಂ ರೋಮಾಂಚಂ ಪುಟ್ಟುಗುಂ; ಅವಱೊಳುಂ ಪಿರಿಯನಿಂ ಪಿರಿದು. ಎಂತಿವರ ಪುಟ್ಟೊ, ಪುಟ್ಟಿಗೆಂತೆಂತು ಪೆಸರೊ, ಪೆಸರ್ಗೆಂತೆಂತು ಮೊಗಂಗಳೊ, ಮೊಗಂಗಳ್ಗೆಂತೆಂತು ಮೆಯ್ಯೊ, ಮೆಯ್ಗೆಂತೆಂತು ಬಲಮೊ, ಬಲಕ್ಕೆಂತೆಂತು ಬೀರಮೊ, ಮೇಣಾಬೀರಕಿನ್ನೆಂತೆಂತು ಪೆಂಪೊ, ಕಾಣೆಂ; ಕೇಳೆಂ. ಶಿವಶಿವಾ!' ಎನುತ್ತೆ, ಕಟ್ಟಚ್ಚರಿಯಪ್ಪೀಕಥೆಯುಂ ಎನಗೆ ತಾಂ ತಿಳಿಪಿ, ಗಡುದಾಂಟಿ ಜಾತ್ರೆಗಾಗೆ ಪೋದನಂ."

ಎಂಬಲ್ಲಿಗೆ ಅದ್ಭುತರಾಮಾಯಣದೊಳ್

ದ್ವಾದಶಾಶ್ವಾಸಂ

ಸಂಪೂರ್ಣಂ.

## ತ್ರಯೋದಶಾಶ್ವಾಸಂ.

" ಕೇಳ್ವುದೆಲ್ಲರ್. ಇಂತೀವಾರ್ತೆಯಂ ಕೇಳುತೆ, ನೀವೀಗಳಚ್ಚರಿಗೊಂಡಂತಾನುಮಾಗಳಂತೆಯೆ ಕಟ್ಟಚ್ಚರಿಗೊಂಡೆಂ. ಪೇೞ್ವುದೇನೀಗಳುಮೆನ್ನ ಮನದೊಳ್ ತಗುಳ್ದಕ್ಕರ್ಂ. ಆದೊಡೆ ಬಯಲ್ನುಡಿಯೆಂದಾನಿಪಸಿನ್ನೊರೆಯೆಂ. ಏಕೆನೆ ? ದಶಕಂಠಂ ಪೂರ್ವಂ, ಪಿಂತೆ ಪೇೞ್ದಂತೆ ದುಷ್ಟನುಂ, ಪಾಪಿಯುಂ, ಸಾಸಿಯುಮಪ್ಪನೆಂದು ಕೇಳ್ದುಂ ಕಂಡುಮುಂಟು. ಎನ್ನುಮನಿನಿತು ಬನ್ನಕೆ ಗುಱಿಗೆಯ್ದನಲಾ! ಇಂತಿರಲ್ ಈತನಣ್ಣಂ ಸಹಸ್ರಕಂಠಂ, ಜಗದೇಕವೀರಂ, ರಾಕ್ಷಸಾಧಿಪಂ; ಇನ್ನೆನಿತು ಪರಾಕ್ರಮಿಯೊ ? ಎನಿತು ಬಲಾಢ್ಯನೋ ? ಮೇಣೆನಿತ್ತು ಕ್ರೂರನೊ ? ಆರಱಿವರ್. ಕಿಱಿಯರಸನಂ ಗೆಲ್ವುದರ್ಕೆಯೆ ಎಮ್ಮರಸಂಗಿನಿತ್ತು ಬವಣೆ, ಬೇನೆ, ದಣುವು, ತೊಡರ್ ಮುಂತಪ್ಪೆಡರೊಡರೆ; ಪಿರಿಯರಕ್ಕಸನಂ ಮುಱಿವ ಸ್ಯೈಪನೆಣಲ್ ಬಹುದೆ? ಅಹಂತಿರ್ಕೆ. ಮತ್ತಮವನಂ ದಿಟ್ಟಿಸಲುಂ ತೀರುವುದೆ ನಿಶ್ಚಯಂ. ಈಪಿರಿಯರಾವಣನೆಂತಿರ್ಪನೋ ? ಆತನ ಇರ್ಭಾಸಿರಂ ತೋಳ್ಗಳ ಬಲ್ಪೆಂತೋ ? ಅರೆಗಳಿಗೆಯಾದೊಡಂ ಗೆಲ್ವರ್ ಮೂಜಗದೊಳಗಾರುಮಿಲ್ಲದೆ ಪೋವರೇ ? " ಎನುತೆ ಚುರ್ಚಿ ನುಡಿವುದುಂ ; ಸೀತೆ ಪೇೞ್ವುದನಿತ್ತುಂ ಸಾಜಮೆನುತೆ ತಲೆದೂಗಿದರ್ ಕಿತ್ತಡಿಗಳ್.

ಭಾರದ್ವಾಜ! ಆಲಿಸ. ಮಡದಿಯೆಂತೆಂತು ಸಹಸ್ರಕಂಧರನ ಬಲ್ಪಂ ಪೊಗೞ್ವಳಂತಂತು ಕೋಪಂ ಪೆರ್ಚಿದುದು ; ಕಣ್ಗಳ್ ಕೆಂಪಾದುವು ; ಮೈನವಿರ್ ನಿಮಿರ್ದತ್ತು ; ಕುಡಿಮೀಸೆ ಕುಣಿದುದು ; ಪಲ್ಗಳೊಂದನೊಂದು ಕಡಿಗೊಂಡುವು ; ಮೊಯ್ಯುಬ್ಬಿದುದು ; ಭುಜಂಗಳಲುಗಿದುವು ; ಒಡನೆಯೆ ರಾಘವಂ ಸಿಂಹನಾದಮಂ

ಗೆಯ್ದು,—" ಅಂತಪ್ಪ ರಕ್ಕಸನಂ ಗೆಲ್ವ ಬಲ್ಮೆಯಿರ್ಕುಮೊ ಕಾಣ್ಬೆಂ; ಈಗಳ್ ಗಂಡುಗಪಿಗಳೆಲ್ಲರ್ ಪೊರಡಲಕ್ಕುಂ." ಎನುತಾಜ್ಞೆಯಿತ್ತು ದಿವ್ಯಪುಷ್ಪಕಮಂ ಬರಿಸಿದಂ.

ಅನಿತಱೊಳ್ ಕಟ್ಟಪ್ಪಣೆಯುಂ ಕೇಳ್ದು ಮೆಯ್ವೆರ್ಚಿ, ನೀಲಂ, ನಳಂ, ಜಾಂಬವಂ, ಹನುಮಂ, ಸುಷೇಣಂ, ಸುಗ್ರೀವಂ, ಅಂಗದಂ ಮುಂತಪ್ಪ ಮರ್ಕಟನಾಯಕಪ್ರಮುಖರುಂ, ಭರತಂ, ಲಕ್ಷ್ಮಣಂ, ಶತ್ರುಘ್ನಂ, ಮೇಲಪ್ಪ ವೀರರುಂ, ಪಡೆವಳರುಂ, ಮಂತ್ರಿಗಳುಂ, ಮುನಿಮಿರ್ದ ತವಸಿಗಳುಂ, ಪೆರ್ಬಲದೊಡನೆ ಪೊಱಮಟ್ಟರ್. ಇವರ್ಗೆ ನೆರವಾಗಿ ವಿಭೀಷಣನುಂ ರಕ್ಕಸವಡೆಯೊಡನೆ ಪೊಱಮಟ್ಟಂ. ರಾಘವನುಂ ತಡೆದುದಿಲ್ಲಂ. ಸತಿವೆರಸು ಪುಷ್ಪಕಮನೇರ್ದಂ. ಇಂತೆಲ್ಲರುಂ ಪೊರಟು ಪುಷ್ಪಕಮನೇಱಲ್; ಬೇಗದೊಳ್ ಪರ್ದು ಪಿರಿದು, ಪರ್ದಿಂ ಗಾಳಿಯೆ ಬೇಗಂ, ಈಪುಷ್ಪಕಂ ಗಾಳಿಯಿನುಂ ಪಿರಿದು ವೇಗವಾಗೆ ಪಾಱೆ; ನಾಡೆಲ್ಲಂ ಕಂಡು ಕಾಣದಂತಾಯ್ತು. ಇಂತಾವಿಮಾನಂ ಕಡಲ್ಗಳಂ ಕಳೆದು, ಮಾನಸೋತ್ತರಪರ್ವತದೆಡೆಗೆ ಬರೆ; ವೀರರೆಲ್ಲರುಂ ಸಿಂಹನಾದಂಗೆಯ್ಯೆ; ಬೆಟ್ಟಂ ಬಿರಿದುದು; ಕಡಲ್ ಕದಡಿದುದು; ಪಗಲೊಳ್ ಮೀನ್ಗಳ್ ಜಗುಳ್ದು ಬೀಳ್ದುವು; ಔತ್ಪಾತಿಕಮಿಂತಾಗಲಿವಱಡಿಯುಱಿಯದೆ ನಾಡೊಡೆಯನಪ್ಪ ಸಹಸ್ರಕಂಠ ರಾವಣಂ ಕಣ್ಗೆಟ್ಟು— ಏನಿದೇನೆಂಬನಿತಱೊಳ್, ಪೊೞಲ್ಗಾಪಿನವರ್ ಪೊಡಮಟ್ಟು ಪೇಳ್ದರ್. " ಜೀಯ್ಯ! ಆರೆಂದಱಿತುದಿಲ್ಲಂ. ಕೆಲರ್ ಕುಱುಂಗಾಲ್ಗಳ್, ಕೆಲರ್ ನಿಡುಮೊಗದವರ್. ಇವರ್ಗೆ ಬಾಲಮೊಂದಿರ್ಕುಂ. ಪೆರ್ವಡೆವೆರಸು ಬಂದಿರ್ಪರ್. ಬಲ್ಗಾಸಿಗಳ್ ಕಣಾ! ಎಮ್ಮಂ ನೋಯಿಪರ್, ದೇವರೇ ನೋಡಲಕ್ಕುಂ." ಇಂತು

ಬಿನ್ನಯಿಸೆ; ರಾವಣಂ ಕನಲ್ದು — "ಏಂ ಕುಱುಬಾಳ್ಗಳ್, ಬಾಲಮುಳ್ಳರ್, ಎಮ್ಮ ನಾಡಂ ಪುಗುವರ್! ಅಚ್ಚರಿ! ಎತ್ತಣವರ್? ಮತ್ತಂ ಪಿರಿದು ಬೊಬ್ಬಿಱಿವರ್ಗಡ! ಅಲ್ಲದೊಡೆ ಮೂಜಗಮುಮಂ ಸೂಱೆಗೊಂಡವರೊ? ಎಂತು ಬೀರರ್! ಅಲ್ಲದೊಡೆ ಎಮ್ಮೆಡೆಗೆ ಬರ್ಪರಲ್ತು. ಏಕೆನೆ? ಆನೆ ದೆಸೆಯಾಣ್ಮರಂ ಪಿರಿದಱೊಳಗಕಿಟ್ಟಿರ್ಪೆನೆನುತುಂ; ಬಿದಿಯನುಮಂ, ಬಿದುವನುಮಂ ಪಾಸಟಗೆಯ್ವನಲ್ಲವೆನುತುಂ; ಮುಪ್ಪೊೞಲುರಿಕನೊಲ್ಮೆಯುಂಟೆಂದುಂ; ಮುಪ್ಪೊೞಲೆ ಬಲ್ಲದು. ಎನ್ನಾಣೆಗೆಯಿನೆ ಪೆಱನೇಸರ್ಕಳ್ ತಿರಿದು ಪಗಲಿರುಳ್ಗಳನಾಗಿಪರೆಂಬುದಂ, ಕಡಲೇೞುಂ ಎನ್ನಾಣೆಯುಂ ಮೀಱದಿರ್ಪುವೆಂಬುದಂ, ಪಿರಿದೇಂ, ಮೂಲೋಕಮುಮೆನ್ನ ಕೈಪಿಡಿಯೊಳಡಂಗಿರ್ಪುದೆಂಬುದನಱಿತುಂ ಮಱೆದು ಬಾಯ್ದೆಱೆದ ಬಗ್ಗದ ಬಾಯೊಳ್ ಬೀೞಲ್ ಬರ್ಪ ನೊರಜುವುಳುಗಳಂತೆ ಬಂದರಲಾ! ಓ! ಓ! ತಪ್ಪಿದೆಂ, ತಪ್ಪಿದೆಂ. ಈತಂಗಳ್ ಪೋಣರಲ್ ಬಂದರಲ್ತು ಸಾಜಂ. ಆದೊಡೆ ದ್ವೀಪಾಟನಂಗೆಯ್ವ ನಾವೆಯೊಳ್ ಬಂದರಕ್ಕುಂ. ಅಂತು ದೀವಿಯಿದಂ ಕಾಣುತೆ ಸಂತಸದ ವನಿಗೆಯ್ದರ್. ಅಲ್ಲದೊಡೆ ನಾಡುಗರಿವರಂ ಕಾಣುತೆ ಬೆರ್ಚಿ ಬೀಱಿದರೊ. ಎಂತಾನುಮೀಯಿರವಂ ಕಣ್ಣಿಂ ಕಂಡು, ಮನವಿಟ್ಟಂಗೆಯ್ವುದೆಂದು ಪೊಱಮಡುವವಸರದೊಳ್ — ಸರರಾಯುರಂ ಕಾಣ್ಬೆಡೆಗುಂ, ಸ್ವಯಂವರದೆಡೆಗುಂ, ವೇದಿಕೆಯುಂ ಕಾಣ್ಬೆಡೆಗುಂ, ರಣದೆಡೆಗುಂ ತಾನೊರ್ವನೆ ಪೋಪುವರಸಂಗೆ ತಕ್ಕುದಲ್ತು, ಅದಱಿಂ ಈಯೆಡೆಗಾನೊರ್ವನೆ ಪೋಪುದಾಗದೆನುತೆ ಮನನಂದು, ಮೈಗಾವಲ ಭಟರಿಂ ಕೂಡೆ ಪೊಱಮಟ್ಟಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ತ್ರಯೋದಶಾಶ್ವಾಸಂ ಸಂಪೂರ್ಣಂ.

## ಚತುರ್ದಶಾಶ್ವಾಸಂ.

———:o:———

ವತ್ಸ! ಇಂತು ಬಂತಿವಳೆಯುಂ ಚಲ್ಲಣಮನಿಟ್ಟು, ದಟ್ಟಯುಂ ಬಿಗಿದು, ಸೂಸಕಮಂ ತೊಟ್ಟು, ಸೂಳೊಳ್ ಮಗುಟಗಳನಳವಡಿಸಿ, ಕೈಪಿಡಿಯುಂ ಕಂಡು ಕತ್ತುರಿಯ ಬೊಟ್ಟಿಟ್ಟು, ಮೀಸೆಯುಂ ತಿರ್ವಿ ಪುರಿಗೆಯ್ದು, ಸೊಬಗಿಂಗೆ ನಸುನಕ್ಕು, ನಱುದಂಬುಲಮಂ ಸವಿದು, ಇರ್ಘಾಸಿದ ಕೈಗಳೊಳಂ ಪಲವಗೆಯ ಸಾಯಕಂಗಳಂ ಕೊಂಡು, ವೈಗಾನರಿಂ ಬಳಸಿ, ಪೊಱಮಡುವುದುಂ ; ರಾಯಂಗೆ ಬೆಂಬಲವಾಗೆ ಕೌಣಪಂ, ಕಾಲವೇಗಂ, ಶರಣಂ, ಹಲೀಮುಖಂ ಮುಂತಪ್ಪ ಪಡೆವಳರ್ ತಮ್ಮತಮ್ಮ ಪೆರ್ಪಡೆವೆಗಸು ತೆರಳ್ದರ್. ಒಡನೆಯೆ ಚಿತ್ರದೇವಂ, ಸುಪ್ರಸಾದಂ, ಕಿರೀಟಂ, ಕಲಶೋದರಂ, ಕಾಲಕಕ್ಷಂ ಇವರಾದಿಯಪ್ಪ ರಾವಣನಣುಗರುಂ ಅಯ್ಯಸಂ ಬೆಂಬತ್ತಿ ಸಂದರ್. ಇವರ್ಗೆ ಪಡಿಬಲಂ ನೆರವಾದುದು. ಆಲಿಸೈ, ಈಪಡೆಯುಂ ಬಣ್ಣಿಸಲೆಂತು! ಕಂಡೊಡೆ ಬೆದರ್ಕೆ, ಕೇಳ್ದೊಡೞ್ಕರಿ. ಎಮ್ಮಂತಲ್ತವರ ರೂಪು ; ಕೆಲಬರ್ಗೆ ಸೊಂಡಿಲಂತೆ ನಿಡುಮೂಗು ; ಕೆಲಬರ್ಗೆ ಪಱಿಮೂಗು ; ಕೆಲಬರ್ಗೆ ನಿಡುಗಣ್ ; ಕೆಲಬರ್ಗೆ ಕುಳಿಗಣ್ ; ಕೆಲರ್ಗೆ ಪೆಡವಲೆ ; ಕೆಲರ್ಗೆ ಬಿಡುದಲೆ ; ಕೆಲಬರ ಕೈ ಸೀಳಂ, ಕೆಲಬರ ಕೈ ಕುಱುಚು ; ಕೆಲಬರ್ಗೆ ಪೆಱಗಾಲ್ ; ಕೆಲಬರ ಮೆಯ್ವಣ್ಣಂ ಕಱಿದು ; ಕೆಲರ ಬಣ್ಣಂ ಬಿಳಿದು ; ಪಸುರ್ವಣ್ಣಂ ಕೆಲರ್ಗೆ ; ಕೆಲರ್ಗೆ ಬೆನ್ನೊಳೆ ಬಾಯ್ ; ಕೆಲರ್ಗೆ ನೆತ್ತಿಯೊಳೆ, ಕೆಲರ್ಗೆ ಕಂಕುಳೊಳೆ, ತೊಡೆಯೊಳ್ ಕೆಲರ್ಗೆ, ಬಾಯ್ ; ಕೆಲರ್ಗೆ ಸಾದಿಯಂತೆ ಮೊಗಂ, ಕೆಲರ್ಗಾನೆಮೊಗಂ;

ಕತ್ತೆಯ ಮೊಗದೊಳ್ ಮೊಗಂ ಕೆಲರ್ಗೆ ; ಸೊಣಗದ ಮೊಗದಂತೆ ಕೆಲರ್ಗೆ ; ಇವರೊಡೆಯೆಂಗೆಯೆ ಬಂದೆರಡಲ್ಲಂ, ಪತ್ತಲ್ಲಂ, ನೂಱಲ್ಲಂ, ಸಾಸಿರಮೊಗಂಗಳ್. ಈಯದ್ಭುತಸೇನೆಯುಂ ಕಾಣ್ಬುದಾಶ್ಚರ್ಯಂ.

ಇಂತೇೞ್ಪಟ್ಟ ಪಡೆಯೊಡನೆ ನಡೆತಂದು, ಮುಂತಿರ್ಪ ರಾಮಸೇನೆಯುಂ ಕಂಡು, ಸೋಜಿಗಂಗೊಂಡು, ಇಸಿತ್ತು ಪಡೆಯೇತರ್ಕೆ ಬಂದುದೊ? ಎಂತು ಬಂದುದೋ, ನಾಯಕನಾರೋ? ಎಂದು ಸಂಕಿಸುತ್ತಿರೆ; ಆಗಸದತ್ತಣಿಂ ಅಸರೀರನುಡಿಯೊಂದು:— “ಎಲೆ ಮರುಳೆ! ನೀನಱಿಯಾ? ಈರಾಮಂ ಅಯೋಧ್ಯೆಗೊಡೆಯಂ; ನಿನ್ನನುಜನಾಗಿರ್ದ ದಶಕಂಠನೀತನ ಪೆಣ್ಣಂ ಕಳ್ದುಯ್ದನೆಂಬ ಪಗೆಯಿನವನಂ ಮೇಣವನ ಬಳಗಮಂ ಕೊಂದಿಕ್ಕಿ ಈಗಳ್ ನೀನವನಗ್ರಜನಾಗಿರ್ಪನಂ, ನಿನ್ನಂ ಕೊಲಲೆನುತುಮಿತ್ತಂ ಬಂದಿಹಂ. ದೇವರೂಪನನಂ.” ಎಂದು ಪುಟ್ಟೆ; ಉರಿವಗ್ನಿಯೊಳ್ ನೆಯ್ಯೊಯ್ದಂತೆ ರೋಸಮೊಣ್ಮಡಿಯಾದುದು. ನುಡಿಗೇಳ್ದರೆಗಳಗೆ ಕೋಪಂ ಪಿರಿದಾಗೆ; ತಾನಿಲ್ಲಿರ್ಪನೆಂದಱಿಯದಾದಂ. ಮತ್ತಂ “ಲೇಸು! ಲೇಸು! ಆಂ ಪಿಂತೆಣ್ಣಿದುದು ಪುಸಿಯಲ್ಲಂ. ಪೊಣರಲೆಂದೆ ಬಂದಿರ್ಪರ್. ಅಕ್ಕೆ! ನೋಡುಗೆ.” ಎಂದು ಮುಂದೊತ್ತಿ ಸೇನೆಯೊಡನೆ ಪೋದಂ.

ಮುನಿಪ! ರಕ್ಕಸರ ಬೀರಮೇಂ ಕಿಱಿದೆ? ಪಗೆವಡೆಯುಂ ಮುಸುಂಕುವುದೆಂದು ಪಡೆವಳರ ನುಡಿ ಪುಟ್ಟುವ ಮುನ್ನಮೆ— ಆಂ ಮುನ್ನಮಾಂ ಮುನ್ನಮೆಂದು ಕಲ್ಮರಂಗಳನೆತ್ತಿ ಕೆಲರ್, ಬಿಲ್ಗಣೆಗಳಂ ಪಿಡಿದು ಕೆಲರ್, ಸುರಗಿಯಡ್ಡಣಂಗಳನಾಂತು ಕೆಲರ್, ಪೆರ್ಬಟ್ಟೆಮಂ ಪೊತ್ತು ಕೆಲರ್, ರಾಘವನ ನರವಾನರಸೈನ್ಯಂಗಳಂ ಸುತ್ತಂ ಮುತ್ತಿ ಬೊಬ್ಬಿಱಿದರ್.

ರಾಮಸೇನೆಯುಂ ಬೆದರ್ದುದಿಲ್ಲಂ: ಬೆಂಗಡೆಯೊಳ್ ರಾಘವಾದ್ಯರುಮಂ, ವಿಭೀಷಣಂ, ನಲಂ, ಅಂಗದಂ, ಸುಗ್ರೀವಂ ಮುಂತಪ್ಪ ವೀರರುಮನಂಬುಮ, ಎಡಬಲಗಡೆಗಳೊಳ್ ಆಳ್ವಡೆ ಕೋತಿವಡೆಗಳನಿಟ್ಟು, ವಿಭೀಷಣನ ರಕ್ಕಸವಡೆಯುದು ಪಗೆವಡೆಯುಂ ಮುಂಗಡೆಯೊಳ್ ತಾಂಗೆ, ಕಲ್ಮರಂಗಳಂ ಪಿಡಿದರ್ಗೆ ಕಲ್ಮರಂಗಳನೆ ಪಿಡಿದು, ಬೆಟ್ಟಮನೆತ್ತಿ ಬಂದವರ್ಗೆ ಬೆಟ್ಟಂಗಳನೆ ಪೊತ್ತು, ಬಿಲ್ಬಾಣಂಗಳಂ ಪಿಡಿದವರ್ಗೆ ಬಿಲ್ಬಾಣಂಗಳಂ ತಾಳ್ದು, ಕಾದಿದುದು. ಇರ್ಕಡೆಯೊಳುಂ ಸಾಸದೊಳ್ ದೋಸಂ ಕಂಡುದಿಲ್ಲಂ. ಓರೊಂದು ಪಡೆಯುವರ್ ಪೊಯ್ಯಲೆಂದೆತ್ತಿದ ಮರಂಗಳಂ ಪೆಜತೊಂದು ಪಡೆಯುವರ್ ವೈತಪ್ಪಿ ಕೊಂಡವುಗಳನೆ ಸೆಳೆದು ಮರಳ್ದುಮದಱನೆ ಅವರನಪ್ಪಳಿಸುವರ್; ಬೆಟ್ಟಮುಂ ಬೆಟ್ಟಕೊಡ್ಡುವರ್. ಕಣೆಗಳಂ ಕಣೆ ಕತ್ತರಿಸಿದುವು. ಇಂತವರ್ಗಿವರ್ಗೆ, ಇವರ್ಗವರ್ಗೆ, ಸರಿಸರಿಯುದ್ಧಮಾಗಲ್ ಸೋಲಂ ನುಗ್ಗುನೊಂಕಾಯ್ತು. ಕಡಿದುಡಿದ ಕೋಲ್ಗಳ ರಾಶಿಯುಂ ನೋಡೆ ಸಾಜವಾಗಿ ಶರನಿಧಿಯಂತೆ ಶೋಭಿಸಿತು. ಇರ್ತಂಡದ ಕೆನ್ನೀರ ಮುನ್ನೀರೊಂದನೊಂದು ಕೂಡಿದುದು. ಕಲ್ಮರಂಗಳ ರಾಸಿಯುಂ ಕಂಡೊಡೆ, ಮಯಂ ಈತಂಗಳ ಸಂಸರ್ಗಮೊಲ್ಲೆನೆನುತೆ ತನ್ನವರ್ಗಾಗುತೆ, ಪೆಜತೊಂದು ಪೊಸನಾಡನೆ ಕಟ್ಟಿದೆ ಬಿಟ್ಟರಂ. ಬೆಟ್ಟಂಗಳೊಟ್ಟಪ್ಪುದಂ ದಿಟ್ಟಿಸಿದೊಡೆ ಕಟ್ಟಚ್ಚರಿ ಪುಟ್ಟುವುದು. ತುತ್ತತುದಿಗಂ ಬಾನ್ಗುಮೋರ್ಗೇಣೆ ಅಂತರಂ.

ಇಂತೆಱದ ಸಮಸಂಟಿಸು ಯುದ್ಧಂಗೆಯ್ದು ಸಾಯಕಂಗಳೆಲ್ಲಂ ಸವೆಯೆ; ಇರ್ತಂಡದಿಂ ಮಾಯಾವಿದ್ಯೆ ಪುಟ್ಟಿಮುಟ್ಟುದು.

ಒರೊರ್ವರಂ ಮೂಱುಮೂಱೊರ್ವರ್ ನುಂಗಲೆಂದು ಬರ್ಪ ಮುನ್ನಮೆ ಪೆಱತೊಱೊರ್ವರ್ ನುಂಗಿ ಬಿಡುವರ್. ಪುಲಿಯಾಗಿ ಮೇಲೆ ಪಾಯ್ದೊಡೆ ಪಂದಿಯಾಗಿ ಸೀೞ್ವರ್. ಆನೆಗಳ್ ಬಂದೊಡೆ ಸಿಂಗಗಳ್ ಮುಱಿವುವು. ಈಪರಿಯೊಳವರ್ಗಂ ಗೆಲ್ವಾದುದಿಲ್ಲಂ. ಇಂತುಂ ತೀಱೆ ಪಿಂತಣ ಕವಡುಬಿಜ್ಜೆಯುಮುಱಿದು ಮೆಯ್ಗಾಳಿಗಕ್ಕೆ ತೊಡಂಗಿದರ್. ಇದಱೊಳುವರ್ಗಂ ಸಾರಂ ತೋರ್ದುದಿಲ್ಲಂ. ಮತ್ತಂ ಗುದ್ದಾಟಂ ಪ್ರಾರಂಭವಾದತ್ತು. ಇರ್ತಂಡದೊಳುಂ ಪೊಯ್ ಕೈಯಾಗಲ್, ಸೋಲಗೆಲ್ಲವಱಿಯದೆ ಬಿಸುಗಣ್ಣರ್ ಕಣ್ಬಿಟ್ಟು ಕಾಯುತಿರ್ದರ್. ಅವರ್ಗಮಸಾಧ್ಯವಾಯ್ತು. ಈಗಳ್ ಇರ್ಪಡೆಯುವರ್ಗಂ ರೋಸಂ ಪಿರಿದಾಗೆ ಕಸಿಕಿಸಿಯೊಳ್ ಪೊಣರ್ದರ್. ಆದೊಡೆ ರಾವಣಸೇನೆಯೊಡನೆ ರಾವಣಾರಿಸೇನೆಯು ಕಸಿಕಿಸಿ ನಡೆದುದಿಲ್ಲಂ. ಲಂಕೆ ಪುಷ್ಕರಕೆ ಸೋಲ್ತುದೆಂಬುದುಂ, ಎಮ್ಮಾಳ್ಬಲಂ ಮುಂಬರಿದುದು.

ಈತಂಗಳುಂ ತಬ್ಬಲಿಗಳಲ್ತು. ತಮ್ಮ ರಕ್ಕಸವಡೆ ಪಿಂಜರಿದುದೆಂಬ ಕಿಸಿಸಿಂ ಪೆವೆಯುಂ ಬಿಲ್ಗೊಪ್ಪಿಗೇಱಿಸುತೇಱಿಸುತೆ ದೊಣೆಯಿಂ ಕಣೆಯುಂ ತೆಗೆದು ಜೋಡಿಸುತೆ ಜೋಡಿಸುತೆ ಮುಂತೆರಳ್ದರ್. ಆದೊಡೇಂ; “ ಪಂದೆಗಳ ಬಾಯ್ಗೊಬ್ಬು ಪಿಂದೆ ನಾರಿಯುರಡೆಯೊಳ್ ” ಎಂಬ ನಾಣ್ಣುಡಿಯಿರ್ಕುಂ. ಅಂತೆ ಅಂದಂದಿಗುಮಿಂತಿರ್ಪ ರಕ್ಕಸರಂ ಕಂಡಿಲ್ಲಂ. ಕೆಲರ್ಗೆ ಮನಂ ಮುಂಬರಿಯದು ; ಕೆಲರ್ಗೆ ಮನಂ ಮುಂಬರಿದೊಡಂ, ಕಾಲ್ ಪರಿಯದು ; ಕೆಲರ್ಗೆ ಮನದೊಡನೆ ಪಿಜ್ಜೆಯುಂ ಪಿಜ್ಜೆಗೆಟ್ಟುದು ; ಕೆಲರ್ ಬರುತೆಬರುತೆ ಕೈಮುಗಿದರ್ ; ಕೆಲರ್ ಬೆಂಗೊಟ್ಟರ್ ; ಕೆಲರ್ ಕಾಲ್ಗೆ ಬುದ್ಧಿಯೊರೆದರ್. ಇಂತಾದೊಡಂ ಕೆಲರ್ ದಿಟಮನಂಗೆಯ್ದು ಪಗೆ

ಗಳಂ ಪೊಯ್ಯಲ್ ಪೋದರ್. ಇವರೊಳುಮಾಜೆಗೆ ಬರ್ಪನಿತಱೊಳ್ ದಿಟ್ಟತನದ ಕಟ್ಟುಡಿದು ತನ್ನಿಂ ತಾನೆ ಕೆಲರ ಕೈದುಗಳ್ ಜಗುಬ್ಬಿದುವು. ಕೆಲರ್ ಮಱವಟ್ಟುಪೋದರ್, ಕೆಲರ್ ಕಡುಭಯದಿಂ ನೆಲನನಾದೊಡಂ ಪುಗುವೆವೆಂದು ತಿರೆಯಂ ಬೆರಂಟುತಿರ್ದರ್. ಮೇಣುೞಿದರಾಳ್ತನದ ಬಿರುದಿಂಗೆ ಮೋಲ್ವಾಯ್ದರ್. ಇಂತಾಗಲಿವರ್ಗವರ್ ಅವರಿವರ್ಗೆ ಪೊಯ್ದರ್. ಪೆಟ್ಟೊಂದೆಡೆಗೆ ನೋವೊಂದೆಡೆಗೆ. ಕಟ್ಟಕಡೆಗಿವರುಂ ಕೋಪದಿಂದೋಡಿದರ್. ಬಹುಳ್ನುಡಿಯಿನೇಂ? ನರಸೇನೆಯುಂ ಸಂಪೂರ್ಣಂ ಸೋಲ್ತುದು.

ಪರಬಲದೊಳ್ ಇಂತು ಸೋಲ್ತರೆಂಬುದನಱಿತು ರಾಕ್ಷಸಸೇನೆಯೊಳೊಂದೆಡೆಗೆ ಆರ್ಕೆನಾಳರ ಸಿಂಹನಾದಮುಂ ಮೇಣೊಂದೆಡೆಗೆ ಧನುಷ್ಟಂಕಾರಮುಂ ಪೆರ್ಚೆ; ಮುಂಬರಿದು ರಾಘವಸೇನೆಯ ಮೇಲೆ ಸೊರ್ಕಿಂ ನಡೆದರ್. ಈಗಳ್ ರಾಮನ ಬಲದೊಳ್ ಮಲೆನಾಡಿಗರ ದಂಡೊಂದುೞಿದುದು. ಇವರ್ಗಾಳ್ಬಲಕಿರ್ದಂತೆ ಕೈದುಗಳುಂ ಬೞಸಣಂಗಳುಮಿಲ್ಲಂ; ಆದೊಡಾಳ್ತನಂ ಪಿರಿದು. ಇಂತಿರಲಿವರ್ ಮೆಲ್ಲನೆ ಅಡಿಯೆಬ್ಬಿ ಮೈಗೊಡಪಿ ರಾವಣಸೇನೆಯುಂ ತಡೆದರ್. ಖಳರವರಿವರಂ ಕಾಣುತೊರ್ವರ್ಗೆ—ಆರಿಂತಂಗಳೆನುತ್ತಚ್ಚರಿಗೊಳ್ವರ್; ಬರ್ವರ್ ನೋಡಿ ನಗುವರ್ ಬರ್ವರ್ ಜೆದಱಿಸುವರ್; ಎಂತಾದೊಡಮಿವರಂಜುವರೇ? ಪುಲಿಯಂ ಕಂಡವರ್ ಬೆಕ್ಕಿಗಳ್ಕುವರೇ? ಇಂತಿರ್ಪನಿತ್ತೋ ರಕ್ಕಸರಂ ಕಂಡಿರ್ಪರ್; ಮಡುಹಿರ್ಪರ್; ಲೆಕ್ಕಮಿಲ್ಲಂ. ಬಾೞಿನೋಂಟಮುಂ ಪುಗುವಂತೆ ಪೊಕ್ಕು ಬೊಬ್ಬಿಱಿವರೆಡೆಯೊಳ್ ಟುಗುರ್ಟುಟ್ಟುತೆ ನುಂಗಲೆಂದು ಬಾಯ್ದೆರೆದು ಬರ್ಪರಿದಿರೊಳ್ ಪಲ್ಗಿಱಿಯುತೆ, ಪಾಱುವರೆಡೆಯೊಳ್ ಕುಪ್ಪಳಿಸುತೆ, ಕೋತಿನಡೆ ಮಾರ್ಮಲೆತುದು.

ಅರಿಗಳಾನೆಯುನೆ ಬಲ್ಪಿಂ ಪಿಡಿದವರಾನೆಗಳ್ಗಡುವರ್ ; ತೇರಿಂ ತೇರಂ ಪೊಯ್ವರ್ ; ಕಾಲಾಳ್ಗಳಂ ಕಾಲಂ ಪಿಡಿದೆತ್ತಿ ಕಾಲಾಳ್ಗಳ್ಗೆ ಬಡಿವರ್ ; ಪಾಱಿ ಪೋಪರಂ ಬಾಲದಿಂ ಬಿಗಿವರ್ ; ಇಂತು ನಾಲ್ಕ ಬಗೆಯೊಳ್ ರಕ್ಕಸಬಲದೊಳರ್ಧಪಡೆ ನಿದ್ದೆಗೊಂಡುದು. ಉೞಿದ ಬಲಮೆಂತಾನುಮುಡುಗಿ ಜೀವಂಗೊಂಡು ಪಿಂದಿರುಗಿದುದು.

ಮುನಿಕುಲಲಲಾಮ ! " ರಕ್ಕಸಪಡೆಯುಮಂ ಅಳ್ಬಲಮುಮಂ ಗೆಲ್ದ ರಾವಣನ ಸೈನ್ಯಮಂ ಕೋತಿಪಡೆ ಗೆಲ್ವುದೇ ! " [೨] ಎಂದಾಡಿಕೊಂಡಿರ್ದ ಬರ್ದಿಲರ ಪಡೆ ಮೌನಮಿರ್ದುದು. ದೆಸೆಯಾಣ್ಮರುಂ ಸಂತಸಂಗೊಂಡು ಮುಂತೆ ಆಸುರಿಯುರಕ್ಕಸನ ಕಡೆಯಂ ಕಾಯುತಿರ್ದರ್.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ಚತುರ್ದಶಾಶ್ವಾಸಂ
ಸಂಪೂರ್ಣಂ.



# ಪಂಚದಶಾಶ್ವಾಸಂ.

---

ಇತ್ತಲೀವಾರ್ತೆ ಸಹಸ್ರಕಂಠಂಗೆ ಮುಟ್ಟೆ, ಗಾಯದೆಕ್ಕೆಲನಂತೆ ಕೆರಳ್ದು, ತನ್ನಂ ತಾನಱಿಯದೆ, ಕೈಗೊದವಿದಾಯುಧಂಗಳಂ ಪಿಡಿದು, ಕಿಡಿಕಿಡಿಯಾಗುತೆ ಬಂದು, ಪರಬಲಮಂ ನೋೞ್ಪುದುಂ; ಕೋಪಂ ತಣ್ಣಗಾದುದೊರ್ಮೆಯೆ. ಮತ್ತಂ ಬಾಯೊಳ್—"ಅಃ! ಇವರೆಮಗೆ ಸಾಟಿಯರಾಗಿ ಬಂದವರ್ಗಡ! ಇವರೆಮ್ಮಂ ಗೆಲ್ದರ್ಗಡ! ಅಲ್ಲದೊಡೆ ಪುೞುಮಾನಿಸರ್ ಇನ್ನೆಗಂ ರಕ್ಕಸರೊಳ್ ಪೊಣರ್ದರ್ಗೆಲ್ಲಂಗೊಂಡುದುಂಟೆ! ಇದಂತಿರ್ಕೆ. ಕಂಡಮುಂಟೆ. ಇದೇಂ ಕೇಡುಗಾಲಮೋ? ಎನಿತಾದೊಡಂ ನರಗುಱಿಗಳೊಳ್ ಬಿರುದುಳ್ಳರ ಗಂಡಂ ಸಾಸಿರದಲೆಯುಂ, ಮುಪ್ಪೊೞಲೊಡೆಯುಂ, ರಾವಣಂ ಕಾದಿದನೆಂದೊಡೆ, ಎನಗೆನಿತ್ತವಮಾನಂ? ಎನಗೊಲ್ದ ಮಾದೇವಂಗೆನಿತ್ತವಮಾನಂ? ಇರ್ಕೆ. ಎಮ್ಮ ಬಳಗಮೆನ್ನಂ ದೂಱದೆ? ಇವರ ನುಡಿಯುಮಂತ್ರೆ ಪ್ರೋಕೆ! ಅಬ್ಬೆಯೇನೆಂಬಳ್. ಪುಸಿಯಲ್ಲಮೆನ್ನ ತೋಳ್ಬಲಕಿದೊಂದು ಕುಂದು; ಜಸಕೆ ಕಸಂ. ಏವೆನೀಗಳ್ ಮುಯ್ಯಾಂತು ಕೈದುಡುಕಲ್ ಲೋಕಂ ಜಱಿಗುಂ; ಉಸಿಕಸಿಮರ್ ಪಿಮ್ಮೆಟ್ಟಲ್ ಪೞಿಗುಂ." ಎನುತಿನಿಸುಂ ಜಾನಿಸುತೆ,—"ಎಂತುಮಿವರಂ ನೋಯಿಸಿದೊಡೆಮಗಪ್ಪ ಐಸಿರಿಯೇಂ? ಅಂತಲ್ತು. ಹಃ! ಪ್ರೋಕೆ! ಇದರ್ಕೆ ತಕ್ಕುದಂ ಮರ್ದನಱಿವೆಂ." ಎಂದು ನಿಷಂಗದಿಂ ವಾಯುವ್ಯಾಸ್ತ್ರಮನೊಂದಂ ತೆಗೆದು ಶರಾಸನದೊಳ್ ಸಂಧಾನಂಗೆಯ್ದಂ.

ಭಾರದ್ವಾಜ! ರಕ್ಕಸನಾಗಳಂತು ಪೆರ್ಮೆನುಡಿಗೊಡಂ; ಕಡುಸೊಸಿ, ಸಾಜಂ ಕೇಳ್. ಕೋಲ ವ್ಯೈಮೆಯೆಂತುಟೊ! ಬಿಱುಗಾಳಿಪ್ರೊಯ್ಲಿಗೆ ಸಿಲ್ಕಿದ ತಱಗೆಲೆಯೊಟ್ಟಲಂತೆವ್ರೊಲ್ ಕೋತಿವಡೆಯುಮಾಳ್ವಲಮುಂ, ರಕ್ಕಸಪಂಜುಂ, ಲಕ್ಕ್ಮಣಂ, ಬರತಂ, ಸತ್ರುಗಣಂ, ಅಣುವಂ, ನೀಲಂ, ಜಾಂಬವಂ, ಸುಸೇಣಂ ಬಿಬೀಚಣಂ ಮುಂತಪ್ಪ ಬೀರರ ಕೂಟಮುಂ, ಬಲೆಗ್ಗೀಲ ರಭಸಮಂ ತಡೆಯಲಾಱದೆ ಸುಱಿಸುಱಿದರೆಚಣದೊಳ್ ಕಡಲನಿತಂ ಕಳೆದು, ಮುನ್ನಂ ಪೋಱಮಟ್ಟ ತಮ್ಮ ನೆಮ್ಮೆಡೆಯುಂ ಸಾರ್ದುದು. ಆಪೊಡಿಮರ್ಗದಱನೊಂದು ಗುಣಮೆ ತೋರ್ದುದು. ಈ ದೀವಿಯಿಂ ಮರಲ್ದು ತಮ್ಮೆಡೆಗೆ ತಾಮೆ ಬಟ್ಟಲ್ದ ಪ್ರೋಪ್ರನೆಂದಮಱುವುದು. ಅಂತುಂ ಪಗೆಯಾಳ್ಗಳ ಪೆಟ್ಟುಂ ತಪ್ಪಿದುದು. ಈ ತೆಱದೊಳ್ ದಣಿವುಮಣಮಿಲ್ಲದೆ ತಮ್ಮೆಡೆಗೆ ಬಂದು ಬೀಱಲೆಲ್ಲರುಂ ತಮ್ಮರಮಂ ನೆನೆದಚ್ಚರಿಗೊಳುತ್ತೆ, ಬೀಡಂ ಪುಗುವರಾದರ್.

ಇಂತು ರಾಘವಂ ಮೇಣರಸಿ ಜಾನಕಿ ಮತ್ತಂ ವಿಮಾನದೊಳಿರ್ದು ಬಿನದಂಗಾಣ್ಬ ದಿಮ್ಮಿದರಪ್ಪ ರಿಸಿಗಳಲ್ಲದೆ ಪೆಱತುಱಿವ ಬಲವೆಲ್ಲಮಡಂಗೆ; ಸಿರಿರಾಮನಚ್ಚರಿಯುಂ, ಜಾನಕಿಯ ಮುಗುಳ್ನಗೆಯುಂ, ತವಸಿಗಳ ಬೆನಕೆಯುಂ ಪೇಟಲಸದಳಮಾಯ್ತು. ಎಂತುಂ ರಾಮಂ ಮನಂಗಂದಿದನೇ? ಮಱುಚಣದೊಳ್ ಕೋದಂಡಮಂ ಕೊಂಡು, ಪೆದೆಯೇಱಿಸಿ, ಬಿಲ್ದನಿಗೆಯ್ದು ಬೊಬ್ಬಿಱಿಯೆ; ಕೋದಂಡಂ ಬರ್ಮೆಯ ಕಂಸನಂಗೊಂಡತ್ತು. ನಿಲಿಂಪರ್–ಕಾಯ್ವುದೆನುತೆ ತುತಿಸುತಿರ್ದರ್.

ಪರಬಲದೊಳೆಲ್ಲಗರ್ಗಂ ಪಿರಿದು ಜೇವಂ ಪೋದಂತಾಗೆ, ಕಣ್ಗೆನುವುದುಂ; ಸಹಸಾಸ್ಯಂ ತಮ್ಮವರಂ– "ಸೈರಿಪುದು, ಸೈ

ರಿಪ್ಪುದೆಮ್ಮವರ್. ಎನಿತಾದೊಡಂ ಪಗೆವಂ ಕುಱುವಾನಿಸಂ. ಪೊಳ್ಳುಬೀರಕೆ ಬೆದಱಲವಕಾಶಮಿಲ್ಲಂ. ಎನ್ನಾಳ್ತನಮನಱಿತುಂ ಅಱಿಯದಾದಿರೇಂ. ಮುನಿದೊಡೊರ್ಮೆಯೆ ಕಡಲಂ ಕುಡಿವೆಂ; ಲೋಕಮಂ ನುಂಗುವೆಂ; ಜವನ ಬಲ್ಪಂ ಜವಂಗಿಡಿಸುವೆಂ. ಅರೆಗಳಿಗೆಯೊಳೆನ್ನ ತೋಳ್ವಲಮಂ ಪ್ರಜ್ವಣಂಗೆಯ್ಯುತಿರ್ಪೆನು." ಎಂದು ಸಾತ್ಕರಿಸಿ ರಾಮಂಗಿದಿರಾಗಿ ನಡೆತಂದು, ಪೂಂಕರಿಸುತ್ತೆ,— "ಎಲೆ ಮರುಳೆ! ನಿರ್ನೆರವೆನ್ನೊಳ್ ಕಾದಲೆಂದು ಬಂದೈ. ಈದೀವಿಯುಂ ಲಂಕೆಯೆಂದುಂ, ಎನ್ನಂ ದಶಕಂಠನೆಂದುಂ ಬಗೆಯದಿರ್. ಬಳ್ಳಡಿಯೊರೆವೆಂ, ಮಗುಳ್ವುಗು. ಅಲ್ಲದೊಡೀ ಸುರಗಿಯಿಂ ತಲೆಯಂ ದಿಂಡನುರುಳ್ವವೆಂತುರುಳ್ವವೆಂ. ಅಲ್ಲದೊಡಾನೆ ಕಪಿತ್ಥಮನೊಡೆವಂತೆ ಆನೆ ಗದೆಯಿಂ ಮೋದುವೆಂ." ಎಂದಂ. ಇದರ್ಕೆ ರಾಘವಂ ಪಡಿನುಡಿಯೊಳ್— "ಅಳಿರಕ್ಕಸ! ಬಾಯ್ಕೊಬ್ಬ ಎಮ್ಮೊಳಲ್ತು ನಿಮ್ಮವರ ಪೌರುಷಮನೆಲ್ಲಮಂ ಬಲ್ಲೆಂ. ಕಡುಗಲಿಯಾದೊಡೆ ಎಮ್ಮೊಳ್ ಕೈಚಳಕಮಂ ತೋಱು." ಎಂಬುದುಂ; ಸಾಸಿರಮೊಗಂ— ರೋಗಿಗೆ ಮದ್ದೊಡಂಬಡದಂತೆ ಎನ್ನ ನುಡಿ ಮುದ್ದಾಗದಿವಂಗೆನುತ್ತೆ, ಕೂಗಣೆಗಳಂ ತೆಗೆದೆಚ್ಚಂ. ದೊಣೆಯಿಂ ಕಣೆಗಳನೆಂತೆತ್ತುವನೊ; ಮತ್ತೆಂತೆಸೆವನೋ; ಅಗರ್ಮಱಿಯಲರಿದಾಯ್ತು. ಕೋಲಾಟಮನೇವೇಳ್ವೆಂ! ಸಂಧಾನಂಗೆಯ್ವೆಡೆಯೊಳ್ ತಡೆಯಾದೊಡಂ ಪಾಱುವೆಡೆಯೊಳ್ ತಡೆಯಿಲ್ಲಂ. ಬಂದಱ ಬೞಯೊಂದನೆ ಟೆಕ್ಕೆಜವನಾಕೋಲ್ಗಳೆಲ್ಲಮೊರ್ತಡವೆಯೆ ರಾಮನಂ ಮುಸುಂಕಿದುವು. ಮಂತರಿಸಿದ ಕೋಲ್ಗಳುಂ ಅಚ್ಚುಯಗೋಲ್ಗಳುಂ ಲೆಕ್ಕಕೆ ಬಾರದಾದುವು. ಅದೊಡೇನಕ್ಕುಂ? ಪೊಗರುಗುವ ಕಣೆಗಳ್

ಸೊರ್ತಪುರ್ದಮಂ ಕಾಣುತೆ ರಾಘವಂ ಪಡಿಸರಳಂ ತುಡುತೆ ಬಿಡದೋರೊಂದು ಪಗೆಗೋಲಂ ನಡುದಾರಿಯೊಳ್ ಇರ್ಕಡಿಗೆಯ್ವಂ. ಇಂತು ಇಕ್ಕೈರ್ ಇರ್ಛಾಸಿರ ಕೈಗಳ್ಗೆ ಸೋಲ್ತುದಿಲ್ಲಂ. ಈಗಳ್ ರಕ್ಕಸನ ನಿಷಂಗದಿಂ ದಿವ್ಯಶರಂಗಳ್ ಪೊರಟು ತಮ್ಮಾಸನಂಗಳನೇರ್ದುವು. ಅವುಗಳೊಳೊಂದಱ ಪೆಸರೆಂತೊ ತಾನಱಿಯೆಂ. ನಂಜುಜಾಲೆಯುಂ ಸೂಸುತೆ ಪಗೆಯ ನೆತ್ತರಂ ಸವಿವೆನೆಂಬೋಲ್ ನಾಲಗೆಗಳಂ ನೀಡುತೆ ಆ ಗದ್ದುಗೆಯಿಂ ರಯ್ಯನೆ ಅರಿಯ ಇದಿರ್ಗೆ ಪಾಱಿ ಬಂದುದು. ಸಾವಿನ ವೈಮೆ ಪಿರಿದು. ಅನಿತಱೊಳೆಱಕೆವೀಸುತೆ ಉದ್ದಮೂಗಿನ ಪಕ್ಕಿಯೊಂದು ತನ್ನ ಪಗೆಯುಂ ಕಾಲೊಳ್ ಪಿಡಿದು ಅಂಬರದತ್ತ ಒಸರ್ದುದು. ಇದಾದೊಡೆ ರಾಘವನೆಚ್ಚ ಗರುಡಾಸ್ತ್ರವೆಂಬುದು ಕಟ್ಟಕಡೆಗೆ ಬಗೆಯಲ್ ಬಂದತ್ತು.

ಈ ಪರಿಯೊಳ್ ಪರಿಪರಿಯ ದಿವ್ಯಾಸ್ತ್ರಂಗಳ್ ಸಮೆಯುಲಿರ್ವರುಂ ಮೆಯ್ಸೋಲ್ತರ್. ರಕ್ಕಸನ ಸಹಸ್ರಮುಖಂಗಳೊಳಂ ಸೇದೆನೀರ್ ಪುಟ್ಟಿತ್ತು; ಕೈಗಳನಿತುಂ ಬತ್ತಿದುವು; ಎರ್ದೆಯೊಳ್ ಗುಂಡುಗುಟ್ಟಿದುದು; ತೊಡೆಗಳಲುಗಿದುವು; ಮೆಯ್ಯೊಳ್ ಬೞಲ್ಕೆ ತೋರ್ದುದು. ಇಂತಪ್ಪುದುಂ ಪೊಳಂ ಕವರ್ತೆಯಿನಾನುಂ ಗೆಲಲ್ಬಗೆದಂ. ಇದನಱಿತು ರಾಮಚಂದ್ರನುಂ— "ಈತಂ ಎನ್ನೊಳಾಟಂ ತೋರ್ಪಂ, ಬೞಿಕೆ ತಡೆಯಲ್ಬಾರದು" ಎನುತ್ತೆ, ಝಡಿತಿಯಿಂ ಪಿಂತಗಸ್ತ್ಯನೀತಂಗಿತ್ತ ರಾವಣಾದ್ವರಂ ಕೊಂದು ಕಳೆದ ಸಾಯಕವೊಂದಂ ತೂಣೀರದಿಂ ತೆಗೆದು, ಬಿಲ್ಲನಾಕರ್ಣಾಂತಮೆಚಿದು ಪೂಡೆ; ವಿಶ್ವಮೆಲ್ಲಂ ಪಿಂತೆ ರಾವಣಾವಧೆಯೊಳೆಂತು ತಲ್ಲಣಂಗೊಂಡಿತ್ತು, ಅಂತೆಯೆ ಐಮಡಿಯಾಗಿ ಬೆದರ್ದುದು.

ದಿಟಮಾಗಿ ರಾಮಬಾಣಕೆ ಪುಸಿಯುಂಟೆ ; ನೆಟ್ಟನೆ ಸಹಸ್ರಕಂಠನ ಕಂಠಂಗಳಂ ಕತ್ತರಿಸಲೆಂದು ಜವದಿಂ ಬರುತಿರ್ದುದು. ಅದೊಡೇಂ? ವರದ ಬಲ್ಮೆಯೆಂತುಟೋ ! ಆ ದಾನವಂ ವೇಗದಿಂ ಪಿಡಿದು ಮುಱಿದು ಮಱುಗಣೆಯುಂ ತಲೆದೂಗಿ ಸೆಳೆದಿಡುವುದುಂ ; ಆ ಕೋಲ್ ಮೆಲ್ಲನೆ ರಾಘವನೆರ್ದೆಯುಂ ತಟ್ಟಿ ನುಲುಂಗಿಸಿ ಮರಳ್ದುದು.

ರಾಘವನಿಂತು ಮೆಯ್ಮಱೆಯಲಮರ್ದಣಿಗಳೆಲ್ಲರ್ ಹಾಹಾಕಾರಂಗೆಯ್ದರ್. ಆಗಳ್ ಬೊಮ್ಮಂ— “ ದೇವತೆಗಳ್ಗೆ ಮರುಳ್ತನಂ ಸಲ್ಲದು. ರಾಘವಂ ನರನಾಟಕದ ಲೀಲೆಯೊಳನಿತೊಂದು ಬಿನದಮಂ ತೋಱುಪಂ ಲೋಗರ್ಗೆ ; ಮೋಣರೆಗಳಗೆಯೊಳೆ ಪೊಸವೇಸಂ ಬರ್ಪುದುಂಟು. ನೋಡಲಪ್ಪುದು. ” ಎನುತೆ ಸಂತೈಸಿದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್

ಪಂಚದಶಾಶ್ವಾಸಂ

ಸಂಪೂರ್ಣಂ.



# ಷೋಡಶಾಶ್ವಾಸಂ.

ಪಗೆಯುಂ ಕಾದಿ ಗೆಲ್ದೆನೆಂಬ ಬಿಂಕದಿಂ ರಾವಣಂ ತನ್ನವರ್ವೆರಸು, ಮಸಣವಟ್ಟೆಯೊಳ್ ಮರುಳ್ಗಳುಂ ಕೂಡಿ ನಲಿದಾಡುತಿರ್ಪ ಕಾಳರಕ್ಕಸನಂತೆ ಕಣದೊಳ್ ನಲಿದಾಡುತಿರೆ ;

ಇತ್ತಲ್ ವಿಮಾನದೊಳಿರ್ದ ಮುನಿಗಳೊಳ್ ಕೆಲರ್ ಈತನ ಬಾಯೊಳ್ ಸಿಕ್ಕಿದೆವೆಂದು ಮಱುಗುವರ್; ಕೆಲರ್ ತಮ್ಮಂ ಮುಟ್ಟದಂತೆ ದಿಗ್ಬಂಧನಂಗೆಯ್ವರ್ ; ಕೆಲರ್ ಬರ್ಪುದು ತಪ್ಪದೆನುತುಸಿಕನಿರ್ಪರ್. ಆರ ಮೊಗದೊಳಂ ಗೆಲವಿಲ್ಲಂ. ಇಂತು ಇರ್ಪುಗುಂದಿದ ಮೊಗಮಂ ದಿಟ್ಟಿಸುತೆ ಸೀತೆ ಕಿಱುನಗೆಬೀಱುವುದುಂ; ತವಸಿಗಳೆಲ್ಲರ್ ದೇವಿಯೊಡನೆ— " ಅಬ್ಬೆ ! ಪಿಂತೆ ನೀಂ ಪೇೞ್ದುದನಿತುಂ ದಿಟಂ. ರಕ್ಕಸಂ ಬಲ್ಲಿದಂ. ನೋಡೌ. ಮೂವಗೆಯ ಬಲಮುಂ ಕಣ್ಗಡ್ಡಮಾದುದು ; ಪಡೆವಳರುಂ ಕಡೆಗೊಂಡರ್ ; ಬೀರರುಂ ತೋಱರ್ ; ಈಗಳೀರಾಮಂಗಮೀವಿಧಿಯಾಯ್ತು. ನೋಡು ನೋಡೌ ! ಪವಡಿಸಿರ್ಪಂ. ಕಿವಿಗುಡೌ ! ಪರಬಲದೊಳರಿಗಳ ಹರಿನಾದಂ ಪಿರಿದಾದುದು. ಬಿಲ್ದನಿಗೆಮ್ಮ ಹರಣಂ ಕಳವಳಿಪುದು. ಮುಂತೆಮಗೇಂ ಗತಿ ? ಕಾವುದು. ನಿನ್ನನೆ ಮಱ್ಪೊಕ್ಕೆವು. ನಿನ್ನನಾದಿಮಾಯೆಯೆಂದುಸಿರ್ವರ್ : ಇಂತಿದು ದಿಟಮಾದೊಡೆ ಆಮಾಯೆಯಿನೆಮ್ಮಂ ಪೆಱತೊಂದೆಡೆಗುಯ್ ; ಮೇಣೆಮ್ಮಂ ಮಱೆಗೆಯ್. ನಿನ್ನನಾದಿಶಕ್ತಿಯೆಂಬರ್ : ಅಂತಿರಲಾಶಕ್ತಿಯಿನೆಮ್ಮಂ ಪೊರೆ. ನಿನ್ನಂ ವಿಶ್ವರೂಪಿಣಿಯೆಂಬರ್ : ಸಾಜಮಾದೊಡೆಮ್ಮನಾನುಮೆಮ್ಮರಿಗಳನಾನುಂ ವಿಶ್ವದೊಂದೆಡೆಯೊಳ್ ಬೈತಿಡು.

ಮತ್ತಂ ನಿನ್ನಂ ಸೃಷ್ಟಿಗಂ, ಸ್ಥಿತಿಗಂ ಲಯಕ್ಕಂ, ಕಾರಣಮೆಂಬರ್ : ಪ್ರಸಿಯಲ್ಲದೊಡೆ ರಕ್ಕಸರ್ಕಳನನಿತರುಮಂ ಕೊಲ್. ಎಂತಾದೊಡಮೆಮ್ಮಂ ಕಾವುದು.” ಎಂದು ಬಲ್ಪಿಗೆಯಿಂ ತುತಿಸುತಿರೆ; ಏನೆಂಬೆಂ? ಎಂತೆಂತು ಭಯದಿಂ ಬೇಡಿಕೊಳ್ವರಂತಂತು ಮಾರ್ಪಡುತೆ, ತಿರ್ದಿದ ಕೂಂದಲ್ ನಿಗುರ್ದು ಕೆದರ್ದಿರೆ; ಪೆಜ್ ನೊಸಲ್ ಪೆರ್ನೊಸಲಾಗೆ; ಎಸಳ್ಗಣ್ ಗುಳಿಗಣ್ಣಾಗೆ; ನಗೆಮೊಗಂ ಉರಿಮೊಗಮಾಗೆ; ಸುಲಿಪಲ್ ನಿಡುಮಲ್ಲಾಗೆ; ತಳಿರ್ದಾಲಗೆ ಜೋಲ್ವಾಲಗೆಯಾಗೆ; ಸೀತೆ ಕರಾಳಮುಖಿಯಾದಳ್. ಕರ್ಕಶಮಾದ ನಾಲ್ತೋಳುಂ, ಕಲ್ಲೆರ್ದೆಯುಂ, ಬಲ್ತೊಡೆಗಳುಂ, ಮೊಗಕ್ಕೆ ತಕ್ಕುವಾದುವು. ಗಳದ ರುಂಡಮಾಲೆಯುಂ ಕೈಯ ಎಲ್ವಿದೊಡಮಂ ದಿಟ್ಟಿಸಲ್ ತೀರದು. ಇಂತು ಲೋಕೋತ್ತರಸುಂದರಿಯಪ್ಪ ಸೀತೆಯೊಡನೆಯೆ ಅದ್ಭುತರೂಪದಿಂ ಮಾಕಾಳಿಯಾಗಿ ದಿಮ್ಮನೆ ತಿರೆಗೆ ಧುಮ್ಮಿಕ್ಕುತೆ, ಕೋಜವಲ್ಗಳ್ ಮಿನುಗೆ, ತುಟಿಯುಲುಗೆ, ನಾಲಗೆ ನೀಡೆ, ಕಣ್ಬುಪೆ ಊಟಳದಂತೆ ಸುತ್ತೆ, ಸೂಲಂ ಕಡುಗಂ ತಲೆಯೋಡು ಇಂತಿವುಗಳಂ ಪಿಡಿದು, ಪಕ್ಕಿವೇಗದಿಂ ರಕ್ಕಸನೆಡೆಗೆ ಸಾರ್ತಂದಳ್.

ಆದೊಡಿವರಿವರೊಳ್ ಮೊನೆಯಾದುದಾರುಂ ಕಂಡುದಿಲ್ಲಮೆಂತು ಮಾಕಾಳಿ ಇದಿರಾದುದುಂ, ರಾವಣನ ಸಾಸಿರಸಿರಂಗಳ್ ತಿರೆಗುರುಳ್ದುದುಂ ಬಗೆಯಲ್ ಬಂದುದಿಲ್ಲಂ. ಎವೆಯುಲುಗುವನಿತಜೊಳೆ ದಾನವನ ಸಹಸ್ರಕಂಠಂಗಳುಂ ಗಾಳಿಗೆ ಮಾಂಗಾಯುದಿರ್ವಂತುದಿರ್ದು ಬಿಟ್ಟುದು. ಇಂತಿದಂ ದಿಟ್ಟಿಸುತೆ ಉಜದವರೊಡನೆ, ಕೆಲರಂ ಕೈದುವಿಂ ಕಡಿಕಡಿದೊಟ್ಟಿದಳ್; ಕೆಲರಂ ಪೋಳ್ದಳ್; ಕೆಲರಂ ಕಾಲ್ವಿಡಿದಪ್ಪಳಿಸಿದಳ್; ಕೆಲರಂ ಬೀಸಿಟ್ಟಳ್; ಕೆಲರಂ ಪೊಡೆಯುಂ ತೋಡುತೆ ಕರುಳಂ ತೋಜದಂಡೆಗೆಯ್ದಳ್.

ಬಳಿಯುಮಾಕಾಳಿ ಮುಂಡದಿನೇರ್ಪಡಿಸಿದ ಗದ್ದುಗೆಯನೇರ್ದಿರೆ; ಬಿನದಕೆ ಆಗಳವಳ ಪಡಿವಗಿಜಿನ ಮಾತೃಕೆಯರ್ ಕೋಟಿ ಲೆಕ್ಕದೊಳ್ ನೆರೆದು, ನೆತ್ತರೋಕುಳಿಯಾಟಂ, ರುಂಡದಿಂ ಸೆಂಡಾಟಂ, ಎಲುವುಗಳಿಂ ಕೋಲಾಟಂ ಮುಂತಪ್ಪ ಆಟವಾಡುತೆ; ಬಳಿಲೊಡ್ಡಿದ ಮೆದುಳನುಂಡು ಕೆನ್ನೀರಂ ಕುಡಿದು ದಣಿವಾಱಿ, ಮತ್ತಮಿಂತೆಯೆ ಸೊಗಯಿಸುತಿರ್ದರ್.

ಇಂತೀಮಾಳ್ಕೆಯಿಂ ದಾನವರ ಬಳಗಮೆಲ್ಲಮಡಿಯಟ್ಟಿದು ಪೋಗಲ್; ಸೀತೆಯುಂ ಪ್ರಸನ್ನೆಯಾಗಿಸೆ ಬೊಮ್ಮಂ ಮುನಿಗಣಂ ಬೆರಸು ಬಗೆಬಗೆಯೊಳ್ ತುತಿಸಿದಂ. "ದೇವಿ! ಈ ನಿನ್ನ ಕಣ್ಣುರಿಯಿನೆ ಮಾಂಸಾದಿಗಳೆಲ್ಲರಳಿದರ್. ಈಗಳಾಯುರಿಯೆ ಲೋಕಮನೆಲ್ಲಮಂ ಸುಡುಗುಂ. ಆದುದಱಿಂ ಪ್ರಸನ್ನೆಯಾಗಾ. ನಿನ್ನೀಯದ್ಭುತರೂಪಮಂ ಕಾಣುತೆ ಇದೆಕೊಳ್! ಮುನಿಗಳೆಲ್ಲರುಂ ಬೆದರ್ಕೆಯಿಂ ನಡುಗುವರ್; ಅವರಂ ಸಂತಯಿಸ. ಮುಗಿಲ್ದೇರಂ ಮುಂತಪ್ಪ ದೆಸೆಯಾಣ್ಮರ್ ನಿನ್ನಂ ಪಾಡಿ ಪೊಗಟುವರವರನಾರಯ. ಈನಿನ್ನಮಾಯೆಯನಾರವನಱಿವಂ? ಕಾವುದುಂ, ಕೊಲ್ವುದುಂ, ನೀನೆ ಜಗಮುಂ." ಎಂಬುದುಂ; ಸೀತೆ ನಂಬುಗೆಯಂ ತೋರ್ದು ರಾಮನನೆಚ್ಚಱಿಸುವವೋಲ್ ಸನ್ನೆಗೆಯ್ದಳ್.

ಆಗಳ್ ನಾಲ್ಮೊಗಂ ರಾಘವನೆಡೆಗೆಯ್ತಂದು, ಕೈಯಿಂ ತಡವರಿಸಲ್; ಕೈಸೋಂಕಿಂ ನಿದ್ದೆವೋದವರುಪ್ಪಡಿಸುವಂತೆ, ತಿಳಿದೆೞ್ದಂ ರಾಮಂ. ಇಂತೆಂಬುತೆಂಬುತೆ— "ಎತ್ತಲಡಂಗಿದಂ ದುಷ್ಟರಾವಣಂ; ಎನ್ನಯ ಕೋಲ್ಮಿಱಿವವಂಗೆ ತಕ್ಕುದಂ ತೋಱಪೆಂ." ಎನುತೆ, ಪುರ್ಬಂ ಗಂಟಿಕ್ಕಿ, ಕೆಲದ ಕೋಯಂಡಮಂ ತುಡುಂಕಿ ಪಿಡಿದಿರ್ನಿಂದಂ.

ಇಂತು ಬೆಱಗಿನೋಟದಿನಿರ್ದು ನೋೞ್ಪವಂಗೆ ರಕ್ತಪಾನಂಗೆಯ್ದು ಗಣಂಗಳೊಡನೆ ನಲಿದಾಡುವ ಅತ್ಯದ್ಭುತರೂಪದೊಂದು ಕಾಣಿಸೆ; ದಿಟ್ಟತನದ ಕಟ್ಟುಡುಗಿ ಮಱಗಟ್ಟವೋಗೆ; ರಾಮನ ಕೈಯ ಸರಳುಂ ಬಿಲ್ಲುಂ ತನ್ನಿಂ ತಾನೆ ತಿರೆಯೊಳ್ ಬಿೞ್ದತ್ತು, ಕಣ್ಮಲರ್ ಮುದಿರ್ದುದು, ಮೆಯ್ಯೊಳ್ ನಡುಕಂ ತೋರ್ದುದು.

ಅನಿತಱೊಳ್ ಬೊಮ್ಮಂ—ರಾಘವಂ ಭಯಂದಾಳ್ದನೆಂದಱಿತು, ಸೀತೆ ಮಹಾಕಾಳಿಯಪ್ಪುದುಮಂ, ಸಾಸಿರದಲೆಯನಂ ಮಡುಹಿದುದಂ, ಮಿಕ್ಕ ರಕ್ಕಸರಂ ಪೊೞ್ದುದಂ, ಮೋಹಿನಿಗಳ್ ಕಾಳರಕ್ಕಸಿಯರೊಡನೆ ನಲಿದಾಡುತಿರ್ಪುದಂ ಸವಿಸ್ತರಂ ಮೆಯ್ಯಮೆಯುಂ ರಾಘವಂಗೆ ಬಿತ್ತರಿಸಿದಂ. ಆಗಳ್ ರಾಮಂಗೆ ಮನದ ಬೆದರ್ಕೆ ಎನಸುಂ ಪಿಂಗಿತ್ತು; ಮೆಲ್ಲಮೆಲ್ಲನೆ ಕಣ್ದೆಱದು ಮುಂತಿರ್ಪ ಪರಮೇಶ್ವರಿಯುಂ ಕಂಡಷ್ಟವಿಟ್ಟು— "ಎಲೆ ದೇವಿ! ನೀನಾರೆಂಬುದಂ ಬಗೆಗೊಂಡಿದಿಲ್ಲಂ, ಅದಱನೆನ್ನೊಳನುಗ್ರಹಿಪ್ಪುದು." ಎಂದು ಬಿನ್ನಯಿಸಿದಂ.

ರಘುಪುಂಗವನ ನುಡಿಗೇಳ್ದು ಪರಮೇಶ್ವರಿಯಿಂತೆಂದಳ್.— "ಕೇಳ್ವುದು, ಆಂ ಮಹೇಶನಾಶ್ರಯಂಗೆಯ್ದಿರ್ಪವಳ್. ಎನ್ನಂ ಮಾಹೇಶ್ವರಿಯೆಂದುಂ, ಆದಿಶಕ್ತಿಯೆಂದುಂ ಕರೆವರ್. ಅನನ್ಯೆ, ಅವ್ಯಯೆ ಎಂದು ಮುನಿಗಳಿಟ್ಟ ಪೆಸರ್. ಎನ್ನಿರವನೊಂದುಱಿದು ದಱಿಯಲ್ವೇೞ್ಕುಮಾದೊಡೆ, ದಿವ್ಯದೃಷ್ಟಿಯಿಂ ನೋೞ್ಪುದು" ಎಂದೊರೆದು, ತಾನಂತೆಯಿರ್ದಳ್.

ರಾಘವಂ ಅಂತೆ ನೋೞ್ಪುದುಂ; ಸಾಸಿರ ನೇಸರ್ಕಳಂ ಪೞಿವಮೆಯ್ವೆಗರ್, ಕಂಪುಗುವ ಕೊರಳ ಪೂದೆಂಡೆ, ಪೊಸಬಾವನ್ನದಣ್ಪು, ನಿಱಿವಿಡಿಮುಟ್ಟೆಳ್ಳಿಡೆಯ ಸೊಗಸು, ತಳಿಯ ಮುಗುಡ

ದಂದಂ, ಅಳವಟ್ಟ ಪೊಂದೊಡವುಗಳ ಸಿಂಗರಂ, ಮನಂಗೊಂಡುದು. ಒಂದೆಡೆಯೊಳ್ ಪೊಂಬಸಿಱಂ ಪೊಗೞುತಿರೆ, ಇಂದಿರನೋಲಗಿಸುತಿರೆ, ತುಂಬುರನಾರದರ್ ಪಾಡುತಿರೆ, ಉಪೇಂದ್ರಂ ಸೂೞಱಿತು ಬಿನ್ನಯಿಸುತಿರೆ, ಮಾಗೇವಂ ಕಾದಿರೆ; ಮೋಕ್ಷನೊಂದೆಡೆಯೊಳ್ ಜವಂ ಕೈಗಟ್ಟಿ ನಿಲ್ತಿರೆ: ಬ್ರಹ್ಮಾಂಡಮಂ ವ್ಯಾಪಿಸಿರ್ಪ ಮಾದೇವಿಯ ಮೈಮೆಯುಂ ಕಂಡು ಭಯದಿಂ ಭಕ್ತಿಯಿಂ ಸಾಸಿರದೆಂಟುವೆಸರಿಂ ತುತಿಸಿ, ಸೇಱ್ಗೈಯೆತ್ತಿಯಿಂತೆಂದಂ :— " ಎಲೆ ಮಹೇಶ್ವರಿಯೆ! ಈಯದ್ಭುತರೂಪಮಂ ಕಂಡೆನ್ನ ಮನಮಂಜುವುದು. ಇದಱಂ ಮುನ್ನಿನ ರೂಪಂ ತೋಱಿಸು." ಎಂಬುದುಂ; ಪಿಂತಣ ಲೋಕೋತ್ತರಸೌಂದರ್ಯದಿಂ ಮೆಱೆಯುತಿರೆ;— " ಇಂದಿಗೆನ್ನ ಜನ್ಮಂ ಪಾವನಮಾದುದು. ನೀನಾದಿಶಕ್ತಿಯೆಂಬುದುಂ ನಿಶ್ಚಯಂ; ಮಹೇಶ್ವರಿಯೆಂಬುದುಂ ನಿಶ್ಚಯಂ. ಪರಮಪ್ರಕಾಶಿಕೆಯುಂ ನೀನೆ, ಕಲ್ಯಾಣಿಯುಂ ನೀನೆ. ಮತ್ತಂ ಸಾಂಖ್ಯಯೋಗದೊಳ್ ಕಪಿಲಯೋಗಮುಂ, ವೇದಂಗಳೊಳ್ ಸಾಮವೇದಮುಂ, ವಿದ್ಯೆಯೊಳಧ್ಯಾತ್ಮವಿದ್ಯೆಯುಂ, ಛಂದಸ್ಸಿನೊಳ್ ಗಾಯತ್ರಿಯುಂ, ಶಕ್ತಿಯೊಳ್ ಮಾಯೆಯುಂ, ಗುಹ್ಯಮಂತ್ರಂಗಳೊಳ್ ಓಂಕಾರಮುಂ ನೀನೆ." ಎಂದು ಪಾಡಿ ಪೊಗೞ್ದಂ.

ಇಂತು ಬಲ್ಪಗೆಯಿಂ ಪೊಗೞ್ವ ರಾಮನಂ ನೋಡುತೆ ಸೀತೆಯಿಂತೆಂದಳ್ :— " ಕೇಳ್ವುದು. ಏರೂಪಿಂ ರಕ್ಕಸರಂ ಮಡುಹಿದೆನಾರೂಪಿಂ ಮಾನಸೋತ್ತರಪ್ರದೇಶದೊಳಿರ್ಪೆಂ. ಆದೊಡೆ ನೀಲಲೋಹಿತರೂಪದಿಂ ನಿನ್ನಂ ಬೞಸಲ್ವೆಂ. ಪೇೞತೇಂ ನಿನ್ನಯ ಮನದ ಬಯಕೆ? " ಎಂಬುದುಂ; — " ಈಗಳೆನಗೆ ನೀಂ ತೋರ್ದ ರೂಪೆನ್ನೆರ್ದೆಯಿಂ ಪೋಗಲ್ಬಾರದೆಂಬುದೊಂದು, ಎನ್ನನ

ಗಲ್ದ ವೀರರೆಲ್ಲರ್ ಮಗುೞ್ದಿನ್ನುಂ ಬೞಿಸೇರ್ವುದೆಂದೆರಡು, ಎನ್ನ ನಾತೆೞೀಗಳುಂ ಗೆಲವಿರ್ಪುದೆಂಬುದು ಮೂಱು ಬಯಕೆ." ಎನೆ; "ಅಂತಕ್ಕೆ." ಎಂದಳ್; ಆಗಳ್ ಆಗಸದತ್ತಣಿಂ ಬಿಡುಗಣ್ಣರ ಭೇರಿ ಮೊೞಗಿತ್ತು; ಅಲರ ಬಲ್ಸರಿ ಸುರಿದತ್ತು.

ಆಗಳ್ ಶ್ರೀರಾಮಚಂದ್ರಮುಂ ಸೀತಾದೇವಿವೆರಸು ಋಷಿಗಳ್ ಸಹಿತಂ ಪುಷ್ಪಕಮನೇರ್ದಯೋಧ್ಯೆಯತ್ತಲ್ ತೆರಳ್ವುದುಂ; ಕಣ್ಣೆವೆಯಿಕ್ಕುವನ್ನೆಗಂ ಸರಯೂನದಿ ತೋರ್ದತ್ತು. ಈವಾರ್ತೆ ಪುಟ್ಟದೊಡನೆಯೆ ರಾಮನಂ ಕಾಣ್ಬ ಕುತುಕದಿಂ ಪುರಜನರೊಡನೆ ಸೋದರರ್ ಇದಿರ್ಗೊಂಡು ಕರೆದು ತಂದು ತಮ್ಮಿರವನೊರ್ವರೊರ್ವರೊಳ್ ಪೇೞ್ದು ಸಂತಸಂಗೊಳುತಿರ್ದರ್.

ಬೞಿಯಮಹಾಮುನಿಗಳೆಲ್ಲರ್ ರಾಮನನಾಶೀರ್ವದಿಸುತೆ, ಅಣತಿವಡೆದು, ತಮ್ಮತಮ್ಮೆಡೆಯುಂ ಸಾರೆ; ರಾಘವಂ ಸೋದರರಿಂ ಕೂಡುತೆ, ಪಲವುಂ ಪಗಲರಸುಗೆಯ್ಯುತೆ, ಸರಯೂತೀರದೊಳ್ ಬಲ್ವಗೆಯೊಳ್ ಜನ್ನಂಗಳನೆಸಗಿ, ಲೋಗರ್ಗೆ ಜನ್ನವೊಗೆಯಿನೆ ಸಗ್ಗಕೆ ಬಟ್ಟೆಗೆಯ್ದು, ತಾಂ ಮೆಯ್ಗೊಂಡು ನೇಸಱ ಬೞಿಯೊಳ್ ಪುಟ್ಟದುದರ್ಕಾಬೞಿಯನೆ ಪಾವನಂಗೆಯ್ದಂ ಗಡ!

ಎಂಬಲ್ಲಿಗೆ ಅದ್ಭುತರಾಮಾಯಣದೊಳ್

ಷೋಡಶಾಶ್ವಾಸಂ

ಸಂಪೂರ್ಣಂ.

ಇಂತೇಪೞ್ದೞ್ಟ ಅದ್ಭುತರಾಮಾಯಣಮನಾವನೊರ್ವಂ ದ್ವಿಜಂ ಶ್ರದ್ಧೆಯಿನೋದುವನವಂ ವಾಗ್ಮಿದನಪ್ಪಂ; ಆವನೊರ್ವಂ ಕ್ಷತ್ರಿಯನೋದುವನವಂ ರಾಜನಪ್ಪಂ; ಆವನೊರ್ವಂ ವೈಶ್ಯನೋದುವನವಂಗೆ ಸೈಪೊಡರ್ದಪುದು; ಮೇಣ್ ಶೂದ್ರಂಗೆ ಮಹತ್ವಪ್ರಾಪ್ತಿಯಪ್ಪುದು.

ಎಂದು ಮಹರ್ಷಿಯಪ್ಪ ವಾಲ್ಮೀಕಿ ತಾಂ ಶಿಷ್ಯೋತ್ತಮನೆನಿಪ್ಪ ಭಾರದ್ವಾಜಂಗೆ ಶತಕೋಟಿರಾಮಾಯಣಂಗಳೊಳ್ ಶ್ರೇಷ್ಠವಾದ ಅದ್ಭುತರಾಮಾಯಣಮಂ ಸವಿಸ್ತರಂ ವಿಸ್ತರಿಸಿದಂ.

ಎಂಬಲ್ಲಿಗೆ ತಿರುಗನ್ನಡಿಗನಡಿದಾವರೆಯ ಬಂಡುಣಿಗಳಪ್ಪ
ಕನ್ನಡಗಬ್ಬಿಗರ ಮನೆಯಾಳ್ಗಳಗದವನೊರ್ವಂ ಕನ್ನಡಿಗಂ
ಪೇೞ್ದ ಅದ್ಭುತರಾಮಾಯಣಂ ಸಂಪೂರ್ಣಂ.

# ಅದ್ಭುತ ರಾಮಾಯಣದ

## ಟಿಪ್ಪಣಿ.

### ಪ್ರಥಮಾಶ್ವಾಸಂ.



ಪುಟ ೧. ೧ ತಿರೆ-ಧ್ಧ ಸ್ಥಿರಾ, ಭೂಮಿ ೪ ಇಂಬಿಡಿದ= ಇಂಬು (-ಅವಕಾಶ)+ ಇಡಿದ, ಎಡಬಿಡದೆ ವ್ಯಾಪ್ತವಾದ. ೬ ಕುತ್ತ-ರೋಗ. ೭ ಇಂಚರ= ಇನಿದು+ಸರ, ಮಧುರಧ್ವನಿ. ಒಕ್ಕೆ-ವಾಸಸ್ಥಾನ. ೧೧ ಪೞಿಮಾತು-ವೇದ. ಜನ್ನದಾರ-ಯಜ್ಞಸೂತ್ರ ೧೨ ಗರವಟದಸನ್ನೆಯ-(?) ೧೩ ಎಣಿಸುತೆ-ಗಣಿಸುತ್ತ. ಹದಿಬದೆ-ಡ್ಭ. ಪತಿವ್ರತೆ. ನೆಗೞ್ತೆ-ಖ್ಯಾತಿ.

ಪುಟ ೨. ೩ ಪುತ್ತಿನಣುಗ-ವಾಲ್ಮೀಕಿ; ಅಣುಗ-ವತ್ಸ. ಇದು ಪ್ರೀತ್ಯರ್ಥಕದ ' ಅಣುಗು ' ಎಂಬ ಶಬ್ದದಿಂದ ಹುಟ್ಟಿದ್ದು. ಪ್ರ. " ತಮ್ಮತಮ್ಮಣುಗಿಂದಂ ಕೀರ್ತಿಸೆ. " ಆದಿಪುರಾಣಂ. " ಅಣುಗದಮ್ಮಂ " " ಅಣುಗಾಳ್ " ಗದಾಯುದ್ಧ. ೧ " ನಿನ್ನಣುಗಿನ ನಂದನೆಯುಂ " ಜಯನೃಪಕಾವ್ಯ. ೭ ಆಱಿದುದಱಿಂ-ತೃಪ್ತಿಪಡೆಯುದುದರಿಂದ. ೧೨ ಅವುಗಳ-ಇದು ಹೊಸರೂಪ, ಅವಱ ಎಂಬುದು ಹಳಗನ್ನಡರೂಪ. ೧೩ ಕೂರ್ಮೆ-ಪ್ರೀತಿ ; ಧಾ. ಕೂರ್-ಸ್ನೇಹೇ. ಅಱುಹಲ್-ಹಳಗನ್ನಡ, ಅಱಪಲ್. ೧೪ ಬೀರ್ದುಱ-ಬೀರಿ. ಕೆಲವರು ಉಕಾರಾಂತಧಾತುಗಳಿಗೆ ರೇಫಾಂತಧಾತುಗಳಂತೆ ರೂಪ ಮಾಡುತ್ತಾರೆ. ಪ್ರ. " ಸಂದಾಯಿ ನಿರೀಕ್ಷಿಸುತ್ತುಮಿರುತೋರ್ದಪೆನೆ | ನ್ನಂದಮಂ ", " ಮತ್ತೆಮನ್ಮಂತ್ರದ ಮಹಿಮೆಯನಿಂತಾವನ್ಯೆತೋರ್ದನುರ್ವೀ | ತಳದೊಳ್ " ರಾಜಶೇಖರ ಆ. ೧೩. " ಸುಲಲಿತಮೆಂಬಂದದಿಂದೋದಿತೋರ್ದಿ " ಕಾದಂಬರಿ ೬೩. " ಪೆದರ್ವಮನಂ ಪೆರ್ಚುವಕಣ್. " ರಾಜಶೇಖರ, " ನಿಡುಗಣ್ಗಳಕಡೆಯೊಳ್ ಕಿಡಿ ಕೆದಱ್ದುದು " ಶಬರಶಂಕರವಿಲಾಸ. ೪-೩೭.

ಪುಟ ೩. ೧ ಬಾಂದೊಱೆ = ಬಾನ್-ತೊಱೆ (-ನದಿ), ಆಕಾಶಗಂಗೆ. ೩ ಸ್ವರ್ಧುನೀ-ದೇವಗಂಗೆ. ೫ ದ್ರುಹಿಣ-ಬ್ರಹ್ಮ. ೮ ಕತದಿಂ-ಕಾರಣದಿಂದ. ೧೭ ಬೈತಿಟ್ಟು ಹೊಸಗನ್ನಡ ಬೈಚಿಟ್ಟು ; ಧಾ. ಬಯ್- ಅವಿತಿಡು, ಪ್ರ. " ಪಕೆಬಯ್ತನಾಂ | " ಕಾದಂಬರಿ ೧೮೨. " ಬಯ್ತುದೆಂದು ಬಚ್ಚಿಡುವುದು. " ಶಬ್ದಸಾರ. ೨೨ ನಸುಂ-(ಅವ್ಯಯ) ಸ್ವಲ್ಪವಾಗಿ.

**ಪುಟ ೪.** ೧ ಮಿಱ್ತು-ದ್ಭ· ಮೃತ್ಯು·

## ದ್ವಿತೀಯಾಶ್ವಾಸಂ.

**ಪುಟ ೫.** ೨ ಎಹಗೆ-ಹೊಸಗನ್ನಡ, ಹೇಗೆ. ರತ್ನಗರ್ಭೆ—ಭೂಮಿ· ೭ ಬೞಿ—ವಂಶ; "ಬೞಿಯೆಂದು ಬಟ್ಟೆಯುಂ, ವಂಶಮುಂ, ಕೞ್ವನುಂ, ಲೇಪಿಸುವದುಂ ಅಕ್ಕುಂ·" ಶ·ದ. ಪು ೩೭· ೧೩ ಕತಮಿಾದಱಿಂ =ಕತಂ, ಇದಱಿಂ, ಈ ಕಾರಣದಿಂದ; ಈರೀತಿ ಪ್ರಯೋಗವುಂಟು. "ರನ್ನಪೊಂದಂತಳೆದಹ" ರಾಜಶೇಖರ· ೧೭ ನಾಣ್ಣುಡಿ- ಲೋಕವಾರ್ತೆ, ಗಾದೆ·

**ಪುಟ ೬.** ೧ ನೇರ್ಪಡಿಸಿ-ಕ್ರಮಪಡಿಸಿ· ೪ ಇಂಬು—ಆಶ್ರಯ· ಪೆಂಪು-ಆಧಿಕ್ಯ, ಇದು 'ಪಿರಿದು' ಎಂಬುದರಿಂದ ಹುಟ್ಟಿದ್ದು·

**ಪುಟ ೭.** ೩ ಕನಂಬರಿದಂತೆ- ಹೊಸಗನ್ನಡದಲ್ಲಿ ಕನವರಿಸಿದಂತೆ· ೪ ಉಕ್ಕೆವ—ದ್ಭ-ಉತ್ಸವ· ಪ್ರ· "ಉಕ್ಕೆವದುಮ್ಮಹಂಮಂಡೆಯುಂ ಮೀರಿ ಪರಿಯುತ್ತಿದೆ," ಮಿತ್ರವಿಂದಾಗೋವಿಂದ.

**ಪುಟ ೮.** ೨ ತಪಸು- ಇದು ಶ.ಶಾ. ೧೩೩ ನೆಯ ಸೂತ್ರದಪ್ರಕಾರ 'ತಪಸ್ಸು' ಅಥವಾ 'ತಪಂ' ಎಂದಾಗಬೇಕು. ಆದರೆ 'ತಪಸು' ಎಂಬ ಅಂತ್ಯದ್ವಿತ್ವವಿಲ್ಲದ ರೂಪವೊಂದುಂಟೆಂದು ತೋರುತ್ತದೆ. ಇದರಂತೆ ಮನಸು, ಪ್ರ. "ಮನಸಿಂಗೆ ಸಿಂಗರಂ" ರತ್ನಾಕರಶತಕ, ಪ. ೧. ೬ ಪಂ ವರಮಂ—ಯಾವವರವನ್ನು. ೭ ಮೆಯ್ಗಣ್ಣ-ಇಂದ್ರ. ಕಿಸುಗಣ್ಚಿ—ಅಲಕ್ಷ್ಯಮಾಡಿ. ೧೦ ಅಲರ್ಪೊಡೆಯ-ಪದ್ಮನಾಭ. ೧೬ ಪೊಗರ್-ಕಾಂತಿ. ೧೭ ಪುಷ್ಪವಂತರ್-ಸೂರ್ಯಚಂದ್ರರು. ೧೯ ನವಿರ್-ಕೂದಲು.

**ಪುಟ ೯.** ೩ ಸಗ್ಗಿಗರ್-ಸ್ವರ್ಗದಲ್ಲಿರುವರು, ದೇವತೆಗಳು. ೫ ಅಸಡ್ಡೆ-ದ್ಭ. ಅಶ್ರದ್ಧೆ. ೧೮ ಪಾಱುಂಬಳೆ-ಚಕ್ರ. ೧೯ ಚಕ್ರಿಶಾಯಿ-ಸರ್ಪದಮೇಲೆ ಮಲಗಿರುವವನು.

**ಪುಟ ೧೦.** ೧ ಅನಿತೆ-ಅಷ್ಟೆ. ೫ ಚೆನ್ನೊಪ್ಪಿ-ಚೆನ್ನು, ಸೌಂದರ್ಯ, ಅದರಿಂದ ಒಪ್ಪಿ. ೮ ಅಗ್ಗಿಮೊಗ-ದ್ಭ. ಅಗ್ನಿಮುಖ, ದೇವ. ಪೊೞಲ್- ಪಟ್ಟಣ.

## ತೃತೀಯಾಶ್ವಾಸಂ.

**ಪುಟ ೧೧.** ೧ ನೃಪಿನಬಿತ್ತು-ಪುಣ್ಯದ ಬೀಜ ೪ ಪಟ್ಟವಣೆ-ಪಟ್ಟದ ಮಣೆ, ಸಿಂಹಪೀಠ. ಸೆಜ್ಜೆ-ದ್ಭ. ಶಯ್ಯಾ. ೧೧ ಗದ್ದುಗೆ-ಪೀಠ. ೧೨ ಮೆದು- ದ್ಭ. ಮೃದು. ೧೫ ಪಱಮೆ-ತುಂಬಿ. ೧೭ ಸಂತಸ-ದ್ಭ. ಸಂತೋಷ· ಕಾಮನ ಸಿಂಗಾಡಿ—ಮನ್ಮಥನ ಧನುಸ್ಸು. ೨೦ ಬಾಯ್ದೆಱ್—ದಂತವಸನ, ತುಟಿ.

**ಪುಟ ೧೨.** ೧ ಕೆಕ್ಕೆ-ಕೆನ್ನೆ. ೨ ಬಲಮುರಿಸಂಕು-ಬಲದಕಡೆ ತಿರುಗಿರುವ ಶಂಖ ೪ ಕೆಚ್ಚನೆಯ-ಕೆಂಪಾದ. ಗುಣವಚನವಮೇಲೆ 'ಅನೆಯ' ಪ್ರತ್ಯಯವನ್ನು ವ್ಯಾಕ

ರಣನಲ್ಲಿ ಹೇಳಿಲ್ಲ. ೫ ತುಳಿಪೂ-ತಾಳಿಯುಹೂ. ೬ ಪೊಂಜವಾಙ್-ಜಘನ. ೭ ಬಳಿತು-ಹಳಗನ್ನಡವರೂಪ ಬಲ್ತು. ೮ ಅಚ್ಚಿಜ-ಆಶ್ಚರ್ಯ. "ಮೋಹೋಂದರಿನಚ್ಚಿಜ" ಎಂದಿರಬೇಕು. ೯ ಕಲಹಾಶನ-ನಾರದ. ೧೦ ಆರಯ್ಯೆ-ವಿಚಾರಿಸಲು; ಧಾ, ಆರಯು. ೧೪ ಬಿರ್ದ- "ಬಿರ್ದಂದು ಔತಣಂ" ಶಬ್ದಸಾರ. ೧೫ ನಿಶ್ಚಿವ-ನಿಶ್ಚಯ. ೧೮ ಎಕ್ಕಟಿ-ಏಕಾಂತ. ಹದನ-ರೀತಿ. ೨೦ ಬಲಿವಳ್-ಹಳಗನ್ನಡರೂಪ, ಬಲ್ವಳ್.

ಪುಟ ೧೩ ೧ ಸಜ್ಜು-ದ್ಭ. ಸಿದ್ಧ. ಉಜ್ಜುಗ-ದ್ಭ. ಉದ್ಯೋಗ. ೧೭ ನೆರ-ಸಹಾಯ. ೧೮ ಮಂಕಡ ದ್ಭ. ಮರ್ಕಟ. ೨೧ ಎಸಗಲ್ವೇಳ್ಕುಂ-ಮಾಡಬೇಕು. ೨೨ ಕಿಬ್ಬಿಗೆ-ಕೆಟ್ಟಮನಸ್ಸು.

ಪ್ರುಟ ೧೪. ೧ ಪವಣ್-ದ್ಭ. ಪ್ರಮಾಣ. ೭ ಪಂತ-ಪ್ರತಿಜ್ಞೆ. ೧೪ ಇಂಗಡಲ್ = ಇನಿದು+ಕಡಲ್, ಕ್ಷೀರಸಮುದ್ರ. ೧೫ ಬಟ್ಟೆ-ಮಾರ್ಗ ೧೬ ಅಂತಿಯ-ಈ ರೂಪ ಸಿದ್ಧಿ ಹೇಗೋ ತಿಳಿಯದು.

## ಚತುರ್ಥಾಶ್ವಾಸಂ.

ಪುಟ ೧೫ ೪ ಸಾರಣೆಗೆಯ್ದು-ಸಾರಿಸಿ. ಪೂಜಲ್ಲಿ-ಹೂದೋರಣ. ೬ ಆಣೆ-ದ್ಭ. ಆಜ್ಞೆ. ಸನ್ನಣ-ಸನ್ನಾಹ. ೮ ಗಡು-ಕ್ಲಿಪ್ತಕಾಲ. ೧೪ ಆಣತಿ-ದ್ಭ; ಆಜ್ಞಾಪ್ತಿ, ಅಪ್ಪಣೆ. ಎನಸುಂ-ಹೆಚ್ಚಾಗಿ. ೧೫ ಪಿಡಿ-ಹೆಣ್ಣಾನೆ. ೧೬ ಸನಿಯ- ಸಮೀಪ. ೧೭ ಉಸಿಕಂ- (ಅವ್ಯಯ) ಸುಮ್ಮನೆ. ೨೦ ಬೇದ ಬಿಜ್ಜೆಗ-ಬ್ರಹ್ಮ.

ಪುಟ ೧೬. ೧ ಮಾದೇವ = ಮಹಾದೇವ, ಈಶ್ವರ. ಮೈಮೆ-ದ್ಭ, ಮಹಿಮೆ. ೨ ನಾಡಾಡಿಕಿತ್ತಡಿ-ಸಾಮಾನ್ಯನಾದವ್ರತಿ. ಸಂದೆಯ-ದ್ಭ, ಸಂದೇಹ. ಅಣಂ-ಸ್ವಲ್ಪವೂ. ೧೬ ಕಟ್ಟಚ್ಚರಿ = ಕಡಿದು+ಅಚ್ಚರಿ, ಹೆಚ್ಚಾದ ಆಶ್ಚರ್ಯ.

ಪುಟ ೧೭. ೪ ಎನ್ನತು-ಎನ್ನದು. ೭ ಎನ್ನಯೆ-ಎನ್ನಯ, ನನ್ನ. ೮ ಕೊಂಚಂ-ಸ್ವಲ್ಪ; ಈ ಪದ ಪ್ರಾಚೀನಕಾವ್ಯಗಳಲ್ಲಿ ದೊರೆತಿಲ್ಲ.
೧೩ ತಳಮಳ-ಸಂತಾಪ.. ೧೭ ಪೆಜ್ಜೆ-ಹಳಗನ್ನಡ ಪಜ್ಜೆ. ೧೮ ಹಾಯ್ಕಿದಳ್-ಈ ಧಾತು ಪ್ರಾಚೀನಗ್ರಂಥಗಳಲ್ಲಿ ದೊರೆತಿಲ್ಲ, ಷಟ್ಪದಿಗಳಲ್ಲಿದೆ.

ಪುಟ ೧೮ ೪ ಇದೆಕೊಳ್-ಇದು ಇದೆಕೋ, ಇಕ್ಕೋ, ಇಗೋ ಎಂಬ ರೂಪಗಳನ್ನು ಹೊಂದಿದಂತೆ ತೋರುತ್ತದೆ. ೯ ಅಚಿಲಿಸಿ-ದುಃಖಪಡಿಸಿ. ೨೩ ಬೇಚ್ಚರ್-ಬೇಡುವವರು.

ಪುಟ ೧೯ ೧೫ ಎಮ್ಮತು-ಎಮ್ಮ. ೧೯ ಬಿಂಕೆ-ಗರ್ವ. ೨೧ ಅಟ ವಟ– "ಅಟವಟಶಬ್ದ: ಪರೇಷಾಂಭೇದಕಾರಿವಚನಂ." ಶ.ಶಾ. ಸೂ॥೪೦೭ ವ್ಯಾ. ೨೨ ವಿಸಿಸಿದ-ಹಾಸ್ಯಮಾಡಿದ.

ಪುಟ ೨೦ ೨ ಬವಣೆ-ದ್ಭ ಭ್ರಮಣ

ಪುಟ ೨೧ ೩ ದುಗುಡ-ದುಃಖ ೧೫ ತಿಳಿಪಿದಂ-ಸಮಾಧಾನಪಡಿಸಿದನು.

ಪುಟ ೨೨ ೭ ಕುಜ್ಞಿವಾಸಿಸರ್- ಕುರಿಯಂತೆ ಅಜ್ಞರಾದ ಮನುಷ್ಯರು

## ಪಂಚಮಾಶ್ವಾಸಂ.

ಪುಟ ೨೩ ೧ ಪಂತಿದೇರ- ಪಂಕ್ತಿರಥ, ದಶರಥ. ೭ ತಿರಿಕೂಜ್‌-ತಿರಿದು ತಂದ ಅನ್ನ. ೧೩ ಪಡಿ-ದ್ಭ, ಪ್ರತಿ. ಓಗರ-ಅನ್ನ. ೧೬ ತೂಗಿಂ ಜೊಡರ್ =ತೂಗುವ-ಸೊಡರ್ ಸರಪಣಿಯಿಂದ ನೇತುಹಾಕಿರುವ ದೀಪ.

ಪುಟ ೨೪ ೧ ಕಾಲ-ವರ್ಷ. ೨೩ ಕೊಡಂಕೆ-ಕಿವಿ.

ಪುಟ ೨೫ ೬ ಬಲ್ಲುನ್ನ-ವಿಶೇಷವಾದ ತೊಂದರೆ. ೧೫ ವಿಧಿ-ಬ್ರಹ್ಮ. ವಿಧಿ–ಶಾಸ್ತ್ರವಿಧಾನ ೨೦ ನೆಜ್ಞೆವರ್-ಸಮರ್ಥರಾಗುವರು. ಸೊನ್ನೆ-ದ್ಭ. ಸ್ವರ್ಣ.

ಪುಟ ೨೬ ೬ ದಿಂಡುಗೆಡೆದರ್-ನಮಸ್ಕಾರ ಮಾಡಿದರು. ೭ ಪೊಂಬಸಿಜ-ಹಿರಣ್ಯ ಗರ್ಭ, ಬ್ರಹ್ಮ ೧೦ ಪೋಟ್ಟುಕೊಂಡಂ-ಹೋಳಾಗಿ ಕತ್ತರಿಸಿಕೊಂಡನು.

## ಷಷ್ಠಾಶ್ವಾಸಂ.

ಪುಟ ೨೭ ೨ ಅಟ್ಟಿ-ಆಶೆ ೩ ಸೂಜ್‌-ಸಮಯ. ೪ ತನಿಸೊದೆ-ಮಧುರವಾದ ಅಮೃತ ೬. ಕಂಬಿ-ಕೋಲು. ಪಡಿಯಜತಿ-ಪ್ರತೀಹಾರಿ. ೭ ಪಡಿವಳ–ಪ್ರತೀಹಾರ. ೯ ಬಿನದ–ದ್ಭ, ವಿನೋದ. ಅಲರಿಚ–ಹೂವಿನಲ್ಲಿ ಹುಟ್ಟುವವನು, ಬ್ರಹ್ಮ: ಜನಿಸಿದನೆಂಬರ್ಥದಲ್ಲಿ ಇಚಪ್ರತ್ಯಯ. ಮುಗಿಲ್ದೇರ–ಇಂದ್ರ. ೧೧ ಬಿಡುಗಣ್ಣರ್–ಬಿಟ್ಟಕಣ್ಣುಳ್ಳವರು, ದೇವತೆಗಳು ೨೧ ಹೊರಟಂ–ಹಳಗನ್ನಡದಲ್ಲಿ ಪೊಱಮಡು ಎಂಬ ಧಾತುವಿದೆ; ಪೊರಟು ಎಂಬ ಧಾತು ಷಟ್ಪದಿಗಳಲ್ಲಿಯೂ ವಿಶೇಷವಾಗಿ ದೊರಕುವದಿಲ್ಲ.

ಪುಟ ೨೮ ೨ ಅಂಚೆದೇರ–ಹಂಸರಥ, ಬ್ರಹ್ಮ ೪ ಬೇಗುದಿಗುದಿದು–ಬಹಳ ವ್ಯಥೆಪಟ್ಟು. ೭ ನಾಣಿಲಿ–ನಾಚಿಕೆಯಿಲ್ಲದ. ೮ ಪಿಂಮೆಯ್–ಪೂರ್ವಜನ್ಮ. ೧೩ ಅಪ್ಪೆ–ಹೊಸಗನ್ನಡ ಅವ್ವೆ. ೧೪ ಅಚ್ಚರರ್–ಅಪ್ಸರಸ್ಸುಗಳು. ಮೂಪೊಟಿಲ್– (ಇಲ್ಲಿ) ಮೂರುಲೋಕ. ೧೭ ಮಾಲಕುಮಿ–ದ್ಭ, ಮಹಾಲಕ್ಷ್ಮಿ. ೧೮ ತೊದಳ್–ಸುಳ್ಳು.

ಪುಟ ೨೯ ೧ ಪಗೆಯುೞಿವ–ಹಗೆಯನ್ನು ಬಿಡುವ, ಕೋಟ್ಮಿಗ–ಕೊಂಬಿರುವ ಮೃಗ. ೪ ಪೊರ್ದುಗೆ–ಹೊದ್ದಿಕೆ, ಹೊಂದುವಹಾ. ೬ ಕನಲ್ದು–ಕೋಪಿಸಿ ೭ ನೀಡುಂ–(ಅವ್ಯಯ) ಹೆಚ್ಚಾಗಿ. ಚಾಗ–ದ್ಭ, ತ್ಯಾಗ. ೧೬ ಸಾದು–ದ್ಭ. ಸಹಾಯ. ೨೦ ಅನ್ನೆಯ–ದ್ಭ, ಅನ್ಯಾಯ.

ಪುಟ ೩೦. ೫ ಉಲೂಕ–ಗೂಗೆ. ೧೧ ಕಲಿಯುತೆ–ಹಳಗನ್ನಡದಲ್ಲಿ ಕಲುತೆ. ೧೬ ನಿರ್ನೆರಂ–(ಅವ್ಯಯ) ನಿಷ್ಕಾರಣವಾಗಿ.

ಪುಟ ೩೧. ೧ ಪಾಸಟಿ–ಸದೃಶ. ೫ ಅನುವಂ-ಸ್ಥಿತಿಯನ್ನು. ೬ ಎಱೆಯ-ಸ್ವಾಮಿ. ೯ ದೇಗುಲ–ದ್ಭ. ದೇವಕುಲ, ದೇವಸ್ಥಾನ. ೧೧ ತೊೞಲ್–ನಮಸ್ಕಾರ. ೧೨ ಪಕ್ಕ–ಪಾತ್ರ. ೧೩ ತುೞಿಲಾಳ್ಗಳ್–ಶೂದ್ರರು.

ಪುಟ ೩೨ ೪ ತೊೞಲುತುಂ–ಸುತ್ತುತ್ತ. ತಿನಿಸು–ಆಹಾರ. ೧೩ ಪಡಲಿಟ್ಟುದು–ನಷ್ಟವಾಗಿ ಹೋಯಿತು. ೨೧ ಸೊಣಗ–ದ್ಭ, ಶುನಕ–ನಾಯಿ.

ಪುಟ ೩೩ ೨ ಸವನಿಸುವನ್ನೆಗಂ–ಅಣಿಮಾಡಿಕೊಳ್ಳುವಷ್ಟರಲ್ಲಿ.

## ಸಪ್ತಮಾಶ್ವಾಸಂ.

ಪುಟ ೩೪. ೭ ಗಾಣ–ದ್ಭ, ಗಾನ. ೧೦ ನಾಣ್ಚಿಕೆ–ಹೊಸಗನ್ನಡದಲ್ಲಿ ನಾಚಿಕೆ ೧೩ ನೀರಜ್ಕೆ–ನೀರಡಿಕೆ. ೧೮ ಪಾಡುಪಾೞಾಗದು–ಗಾನವು ವಶ್ಯವಾಗುವದಿಲ್ಲ.

ಪುಟ ೩೫ ೬ ಧ್ವಾಂಕ್ಷಶತ್ರು.– ಕಾಗೆಗಳ ಶತ್ರು, ಗೂಗೆ. ೧೩ ಸಂಪ್ಲವ–ಪ್ರಳಯ.

ಪುಟ ೩೬ ೧ ಪೞಿರ್ದೆ–ಹುಣ್ಣಾದ ಎದೆ. ೮ ಪೆರ್ಚೆಕೆ–ಗರ್ವ, ಹೆಮ್ಮೆ. ೨೦ ಪರಿವಿಡಿಯಿಂ–ಕ್ರಮವಾಗಿ.

ಪುಟ ೩೭ ೭ ಸ್ವೈಸಿಟ್ಟು–ಸಂತೈಸಿ. ೧೮ ಕೆಮ್ಮನೆ–ಸುಮ್ಮನೆ. ೨೦ ನಾಣ್-ನಾಚಿಕೆ,

ಪುಟ ೩೮ ೨ ತಿಣ್ಣ–ಭಾರ. ತವಿಸೆ–ಕಡಮೆಮಾಡುವದಕ್ಕೆ. ೭ ಪುಚ್ಚವಣ–ಪರೀಕ್ಷೆ. ೧೮ ಪಱಿಂಮನಂ–ಕೊಬ್ಬುತ್ತಿದ್ದ ಮನಸ್ಸು. ೨೧ ಅಮೇಯಂ–ದಿಕ್ಕು ಕಾಲ ಇವೇ ಮೊದಲಾದವುಗಳಿಂದ ಅಳತೆಮಾಡುವದಕ್ಕೆ ಆಗದ.

ಪುಟ ೩೯ ೮ ಕೂರ್ಮೆಗಡಲ್–ಪ್ರೀತಿಯೆಂಬ ಸಮುದ್ರ. ೯ ಲೋಗರ್–ಲೋಕದಜನರು ಕಟ್ಟಿಂಬಗೆ–ಕಟ್ಟುವಮನಸ್ಸು. ಅಱುವಗೆ–ಷಡ್ರಿಪು, ಅರಿಷಡ್ವರ್ಗ. ೧೩ ಸಮ್ಮಣಂ–ದ್ಭ. ಸನ್ಮಾನ.

## ಅಷ್ಟಮಾಶ್ವಾಸಂ.

ಪುಟ ೪೦. ೪ ದೀವಿ–ದ್ಭ. ದ್ವೀಪ ೫ ಈರೈದು = ಎರಡು, ಐದು, ಹತ್ತು, ೭ ಮುದಿವಱವು–ಮುದಿವು + ಅಱವು, ಮುಪ್ಪುಸಾವು ೧೨ ತವಿಸು–ನಿಲ್ಲಿಸು;

ಧಾ. ತವು—ಕ್ಷಯೇ. ೨೦ ಏನಾನುಂ—ಯಾವುದಾದರೂ ಒಂದನ್ನು.

ಪುಟ ೪೧. ೯ ಬೀರ—ದ್ಭ. ವೀರ್ಯ, ಪರಾಕ್ರಮ. ೧೦ ಬರ್ದಿಲರ್—ಮರಣವು ಇಲ್ಲದವರು, ಅಮರ್ತ್ಯರು. ೧೧ ಅಚ್ಚರಿಯರಂ—ಅಪ್ಸರಸ್ತ್ರೀಯರನ್ನು. ಒಚ್ಚತಂ—ಮನೋಹರವಾಗಿರುವಹಾಗೆ: ಪ್ರ· « ಪುಗಲ್ವುಗಲೆಂದೊಚ್ಚತಮೂಲ್ವ ಕೋಗಿಲೆ '' ಪಂಪರಾಮಾಯಣ.

೧೨ ಕೀೞೞೆ—ಅಧೋಭುವನ, ಪಾತಾಳ. ದಾೞಿಡುತೆ—ಮುತ್ತಿಗೆ ಹಾಕುತ್ತ. ದಾೞಿ—ದ್ಭ. ಧಾಟಿ. ೧೪ ಉಪಟಳ—ತೊಂದರೆ. ೨೦ ಮುದಿವಾರ್ವರ್—ವೃದ್ಧರಾದ ಬ್ರಾಹ್ಮಣರು.

ಪುಟ ೪೨ ೨ ನೆತ್ತರ್—ರಕ್ತ. ೫ ಕೆನ್ನೀರ್—ರಕ್ತ. ೧೩ ನಂಜು—ವಿಷ. ೧೫ ತುಡುಗೊಂಡು—ಅಪಹರಿಸಿಕೊಂಡು ೨೧ ಎಱಕ—ಪ್ರೀತಿ. ೨೨ ಪುರುಡು—ಸ್ಪರ್ಧೆ. ೨೪ ಒಪ—ಭರ್ತಾ, ಗಂಡ.

ಪುಟ ೪೩ ೧೦ ಕಡಂದುಱು—ಕಣಜದಹುಳು. ೧೯ ವೇೞಿಗೆ—ದ್ಭ. ವೇತ್ರಿಕಾ, ಪೆಟ್ಟಿಗೆ.

ಪುಟ ೪೪. ೩ ಪುತ್ತೞಿ—ದ್ಭ. ಪುತ್ರಿಕಾ, ಬೊಂಬೆ. ೭ ಬಾನ್ನುಡಿ—ಆಕಾಶವಾಣಿ.

## ನವಮಾಶ್ವಾಸಂ

ಪುಟ ೪೫ ೧ ಪುಟ್ಟು—ಜನ್ಮ. ಪಟ್ಟುದುದೆ—ಸ್ಪಷ್ಟವಾಯಿತೆ. ೫ ದಿಬ್ಬಣ—ವಧೂವರರೊಡನೆ ಬಂಧುಗಳ ಪ್ರಯಾಣ. ೯ ಬದ್ದವಣ—ದ್ಭ. ವರ್ಧಮಾನ, ಮಂಗಳವಾದ್ಯ. ೧೦ ಮೊಳಗು—ಗುಡುಗು. ೧೭ ಕೊಡಲಿಯವ-ಪರಶುರಾಮ; ೨೧ ದಿವಿಜರ್—ಬ್ರಾಹ್ಮಣರು. ಪೊಣರ್ಕೆ—ಯುದ್ಧ.

ಪುಟ ೪೬ ೩ ಸಾಲ್ಗಂ—ಹೊಸಗನ್ನಡದಲ್ಲಿ ಸಾಕು. ಕೋಯಂಡಂ—ದ್ಭ. ಕೋದಂಡ.

## ದಶಮಾಶ್ವಾಸಂ.

ಪುಟ ೪೮. ೪ ಬನ್ನ—ದ್ಭ. ಭಂಗ.

ಪುಟ ೪೯. ೭ ಮೋನ—ದ್ಭ. ಮೌನ. ೮ ಪೞುವ—ಕಾಡು. ೧೮ ಪೊಚ್ಚ—ನದಿ ಅರ್ಥಾಂತರ ಆಭರಣ. ೧೯ ಕಣ್ಬುಳಂಕೆ—ಕಣ್ಣಮಲ.

ಪುಟ ೫೦. ೬ ಅಮರ್ದುಣಿ—ದೇವತೆ. ೧೪ ತೊಳಚಿ—ದ್ಭ. ತುಳಸಿ. ೧೫ ಸಿರಿವಚ್ಚಲಚ್ಚಣಂ—ದ್ಭ. ಶ್ರೀವತ್ಸಲಾಂಛನಂ.

## ಏಕಾದಶಾಶ್ವಾಸಂ.

ಪುಟ ೫೨ ೧೦ ಅಣುಮ—ದ್ಭ. ಹನೂಮಾನ್. ೧೯ ಪಾಸು—ಹಾಸಿಗೆ.

## ದ್ವಾದಶಾಶ್ವಾಸಂ.

ಪುಟ ೫೫ ೧೬ ಮಾಱಾಂತರುಂಟೆ–ಪ್ರತಿಭಟಿಸುವರುಂಟೆ. ೧೯ ತಾಯ್ತಂದೆವಿರಂ–ತಾಯ್ತಂದೆಗಳನ್ನು.

ಪುಟ ೫೬. ೧೧ ಬಾವು–ದ್ಭ. ವಾಮ, ಎಡಗಡೆ. ೧೨ ಎಣ್ಣದಿರಿ–ಹಳಗನ್ನಡದಲ್ಲಿ ಎಣ್ಣದಿರಿಂ; ಹೀಗೆ ಮಾತಿನ ಕೊನೆಯಲ್ಲಿರುವ ಬಿಂದುಗಳನ್ನು ಬಿಡುವದು ಬಹಳ ಉಂಟು. ಪ್ರ. ಅಕ್ಕ. ೧೫ ಮನದನ್ನ–ಮನಸ್ಸಿಗೆ ಇಷ್ಟನಾದವನು, ಪತಿ.

ಪುಟ ೫೭ ೧೧ ಪಯಿಂಛಾಸಿರ–ಹತ್ತುಸಾಸಿರ. ೨೦ ಮಱೆನುಡಿ–ಅದೃಶ್ಯವಾಕ್ಕು.

ಪುಟ ೫೯ ೧ ಐಗಳ–ಪಂಚಶಿರ, ಈಶ್ವರ. ೨ ಕೆಳೆಯ–ಸ್ನೇಹಿತ. ಪೊನ್ನೊಡೆಯ–ಧನೇಶ್ವರ, ಕುಬೇರ. ೩ ಆಣ್ಮ–ಸ್ವಾಮಿ. ೪ ಎಳವರೆಯ–ಎಳೆಯಪ್ರಾಯ. ೧೨ ಕಾಂಗು–ಅಡಕೆಯಮರ. ಪನೆಮರ–ಓಲೆಯಮರ. ೧೯ ಐಸಿರಿ–ದ್ಭ. ಐಶ್ವರ್ಯ. ೨೦ ಬಟ್ಟೆ–ಮಾರ್ಗ. ಬಾನ್–ಅಂತರಿಕ್ಷ.

ಪುಟ ೫೮ ೩ ಬಂಡುಣಿ–ಮಧುಪ, ಭ್ರಮರ.

## ತ್ರಯೋದಶಾಶ್ವಾಸಂ.

ಪುಟ ೬೧. ೩ ಪಡೆವಳ–ಸೇನಾನಾಯಕ. ೧೩ ಮೀನ್ಗಳ್–ನಕ್ಷತ್ರಗಳು.

ಪುಟ ೬೨ ೬ ಬಿದಿ–ಬ್ರಹ್ಮ. ಬಿದು–ಚಂದ್ರ. ೭ ಮುಪ್ಪೊಡಲರಿಕ–ಈಶ್ವರ. ೯ ಪೆಱನೇಸರ್ಕಳ್–ಚಂದ್ರಸೂರ್ಯರು. ೧೧ ಬಗ್ಗ–ದ್ಭ. ವ್ಯಾಘ್ರ. ೧೨ ನೊರಜುಪುೞು–ಕ್ಷುದ್ರಕೀಟಗಳು. ೧೯ ವೇಡಿಕೆ–ವಿನೋದ.

## ಚತುರ್ದಶಾಶ್ವಾಸಂ.

ಪುಟ ೬೩ ೨ ಸೂಸಕ–ಗೊಂಚಲು. ೩ ಕೈಪಿಡಿ–ಕನ್ನಡಿ. ೪ ನಱುದಂಬುಲ–ಕರ್ಪೂರ ತಾಂಬೂಲ.

ಪುಟ ೬೪. ೪ ಏರ್ಪಟ್ಟು– ಏರ್ಪಾಡಾದ, ಸಿದ್ಧವಾದ. ೨೧ ಗಱಿ– ಬಾಣ. ಸುರಗಿ–ದ್ಭ. ಛುರಿಕಾ, ಕತ್ತಿ. ಅಡ್ಡಣ–ಗುರಾಣಿ.

ಪುಟ ೬೫ ೮ ಪೊಮ್ಮಲ್–ಹೊಡೆಮಲು. ೧೪ ಸೋಲ–ಪರಾಜಯ. ೨೦ ತುತ್ತು ತುದಿ = ತುದಿ-ತುದಿ; ಇದರಂತೆ ಮೊತ್ತಮೊದಲ್.

ಪುಟ ೬೬ ೫ ಕವಡುವಿಜ್ಜೆ–ನಾನಾವಿದ್ಯೆ. ೯ ಗೆಲ್ಲ–ಜಯ. ೧೦ ಕಸಿಕಿಸಿ–ಸ್ಪರ್ಧೆ (?) ೧೪ ತಬ್ಬಲಿಗಳ್–ಅಪ್ರಯೋಜಕರು; ಪ್ರ. ತಬ್ಬಲಿಮಾತು, ತಬ್ಬಲಿಶರೀರ, ತಬ್ಬಲಿಕೆಲಸ.

ಪುಟ ೬೭ ೧ ಆಜಿ-ಯುದ್ಧ. ಏರ್ಸಿತ್ತುಖಾಳ್-ಬರುವಷ್ಟರಲ್ಲಿ. ೨ ಕೈದು-ಆಯುಧ. ೩ ಮುಜುವಟ್ಟು-ಸ್ತಬ್ಧವಾಗಿ. ೪ ಜರಂಟುತಿರ್ದರ್-ಕೆರೆಯುತ್ತಿದ್ದರು. ೫ ಆಳ್ತನ-ಶೌರ್ಯ. ೯ ಆಕೆವಾಳ-ಪರಾಕ್ರಮಶಾಲಿ. ೨೨ ಮಾರ್ಮಲೆತುದು-ಪ್ರತಿಭಟಿಸಿತು; ಧಾ. ಮಲೆ, ಔದ್ಧತ್ಯೇ.

ಪುಟ ೬೮ ೪ ಅಡ್ಡವಡೆ-ಪ್ರತಿಭಟಿಸಿದ ಸೇನೆ.

## ಪಂಚದಶಾಶ್ವಾಸಂ.

ಪುಟ ೬೯ ೧ ಏಕ್ಕಲ-ಹಂದಿ ೬ ಕೆರಳ್ದು-ಹೊಸಗನ್ನಡ ಕೆರಳಿ. ೧೪ ಏನೆಂಏಗುವೆಂ, ಏನುಮಾಡಲಿ ೧೬ ಪಟ್ಟಗುಂ-ನಿಂದಿಸುವುದು. ೧೯ ನಿಷಂಗ-ಬತ್ತಳಿಕೆ.

ಪುಟ ೭೦. ೧೭ ಅಸದಳ-ಅಸಾಧ್ಯ. ೨೦ ಕೋದಂಡಂ= ಕ-(ಬ್ರಹ್ಮ) ಉ+ಅಂಡಂ, ಬ್ರಹ್ಮಾಂಡ ೨೧ ನಿಲಿಂಪರ್-ದೇವತೆಗಳು.

ಪುಟ ೭೧. ೪ ಜವ-ದ್ಭ. ಯಮ; ಮತ್ತೊಂದರ್ಥ ವೇಗ. ಬಲ್ಪು-ಪರಾಕ್ರಮ. ೬ ಮಾಂಕರಿಸುತೆ- ಹಾಸ್ಯಮಾಡುತ್ತ. ೧೨ ಅಳಿರಕ್ಕಸ-ಕ್ಷುದ್ರರಾಕ್ಷಸ; ಪ್ರ. ಅಳಿವೆಣ, ಅಳಿಗಜ್ಜ. ೧೮ ಅರಿದು-ಅಸಾಧ್ಯವಾಗಿ. ೨೧ ಎಚ್ಚೊಡಂ-ಹೊಡೆದರೂ; ಧಾ. ಇಸು-ಬಾಣಪ್ರಯೋಗೇ. ೨೬ ಮಂತರಿಸಿದ-ಮಂತ್ರಿಸಿದ. ಅಚ್ಚಯ-ದ್ಭ. ಅಕ್ಷಯ.

ಪುಟ ೭೨ ೯ ಎಱಂಕೆ-ರೆಕ್ಕೆ. ೧೫ ಸೇದೆನೀರ್-ಸ್ವೇದಜಲ, ಬೆಮರ್ನಿ. ೧೭ ಕವರ್ತೆ- ಮೋಸ.

## ಷೋಡಶಾಶ್ವಾಸಂ.

ಪುಟ ೭೪. ೨ ಮಸಣ-ದ್ಭ. ಸ್ಮಶಾನ. ಮರುಳ್-ಪಿಶಾಚಿ. ೭ ಇರ್ಪುಗುಂದಿದ— ದ್ರವಹೋದ, ನೀರಾರಿದ. ೧೧ ಕಣ್ಗಡ್ಡಮಾದುದು-ಅದೃಶ್ಯವಾಯಿತು.

ಪುಟ ೭೫ ೫ ಕೂಂದಲ್-ಹೊಸಗನ್ನಡ ಕೂದಲು. ೮ ಕಕ್ಕಸ-ದ್ಭ. ಕರ್ಕಶ ೧೬ ಮೊನೆ-ಯುದ್ಧ. ೨೩ ಪೊಡೆ-ಹೊಟ್ಟೆ. ತೋರದಂಡೆ-ದಪ್ಪವಾದ ಹಾರ

ಪುಟ ೭೬. ೨ ಪಡಿವಱಜು-ವೇಷ. ೩ ಸೆಂಡು—ಹೊಸಗನ್ನಡ ಚೆಂಡು.

ಪುಟ ೭೭ ೧೧ ಪೆಡಂಮೆಟ್ಟು-ಹಿಮ್ಮೆಟ್ಟು. ೨೨ ಬಾವನ್ನ-ಚಂದನ. ಅಣ್ಪು—ಲೇಪನ.

ಪುಟ ೭೮ ೭ ಸೆಱಿಗೈ— ಅಂಜಲಿಬದ್ಧ. ೧೯ ಏರೂಪಿಂ— ಯಾವರೂಪದಿಂದ.

ಪುಟ ೭೯ ೪ ಅಲರ ಬಲ್ಸರಿ—ಪುಷ್ಪದ ಹೆಚ್ಚಾದ ಮಳೆ.

# ಕರ್ಣಾಟಕ ಕಾವ್ಯಮಂಜರಿ.

೪

ಶ್ರೀಮನ್ಮಹಾರಾಜಾಧಿರಾಜ

ಶ್ರೀಚಿಕದೇವ ಮಹಾರಾಜನ

ಸಂಚಿಯ ಹೊನ್ನಮ್ಮನ

— ಹದಿಬದೆಯ ಧರ್ಮಂ —

ಎಸ್. ಜಿ. ನರಸಿಂಹಾಚಾರ್,

ಮ. ಆ. ರಾಮಾನುಜೈಯ್ಯಂಗಾರ್,

ಇವರಿಂದ ಪರಿಷ್ಕರಿಸಲ್ಪಟ್ಟು

ಮ. ಕುಮಾರಸ್ವಾಮಿ ತಿರುಮಲಾಚಾರ್,

ಆ. ಅನಂದಾಳ್ವಾರ್ ಮುಂತಾದ

ಕರ್ಣಾಟಕ ಕಾವ್ಯಮಂಜರಿ ಪ್ರೊಪ್ರೈಟರುಗಳಿಗಾಗಿ

ಮೈಸೂರು,

ಸದ್ವಿದ್ಯಾಮಂದಿರ ಮುದ್ರಾಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

೧೮೯೩

ಕ್ರಯ ೬ ಆಣೆ.

# ಪೀ ಠಿ ಕೆ.



ಈ ಗ್ರಂಥವನ್ನು ವಿರಚಿಸಿದ ಹೊನ್ನಮ್ಮನೆಂಬವಳು ಮೊದಲು ಅಷ್ಟು ಒಳ್ಳೆಯ ಸ್ಥಿತಿಯಲ್ಲಿರಲಿಲ್ಲವೆಂಬುದು

“ಅನಾಥವಳೆನ್ನ ಮನ್ನಿ ರಕ್ಷಿಪುದು” (ಸಂಧಿ.೧.೨೩)

ಎಂಬದರಿಂದ ವ್ಯಕ್ತವಾಗುತ್ತದೆ.

“ಚೆನ್ನಿಗ ಚಿಕದೇವರಾಯನ ಸಂಚಿಯ
ಹೊನ್ನಿಯೆಂದೇಳ್ಗೆವೆತ್ತಿಹೆನು ॥” (ಸಂಧಿ.೧.೨೫)

ಎಂಬುದರಿಂದಲೇ ಇದಕ್ಕಿಂತಲೂ ಉನ್ನತವಾದ ಪದವಿಯನ್ನು ಪಡೆಯುವದಕ್ಕೆ ತನಗೆ ಅರ್ಹತೆ ಇಲ್ಲವೆಂಬದಾಗಿಯೂ, ತನಗೆ ಅದೇ ಮಹತ್ತಾದ ಪದವಿಯೆಂಬವಾಗಿಯೂ ಆಕೆಯ ಮನಸ್ಸಿಗೆ ಗೊತ್ತಾಗಿತ್ತೆಂಬುದು ವ್ಯಕ್ತವಾಗುತ್ತದೆ. ಆ ಕಾರಣದಿಂದ ಇವಳು ಅಂತಃಪುರದಲ್ಲಿ ಊಳಿಗದಲ್ಲಿದ್ದರೂ, ಇವಳು ಯಾವ ವಿಧದಲ್ಲಿಯೂ ರಾಜಕುಲಕ್ಕೆ ಸಂಬಂಧಪಟ್ಟರಲಿಲ್ಲವೆಂದು ಗೊತ್ತಾಗುತ್ತದೆ. ಪಟ್ಟಮಹಿಷಿಯಾದ ಎಳವಂದೂರು ದೇವಮ್ಮನವರ ಕೇವಲ ಪ್ರೀತಿಗೆಪಾತ್ರಳಾಗಿ ಇದ್ದುದರಿಂದ ಒಂದುವೇಳೆ ಎಳವಂದೂರು ಪ್ರಾಂತದಲ್ಲೇ ಹುಟ್ಟಿ, ಪಟ್ಟಮಹಿಷಿಯೊಡನೆ ಆಸ್ಥಾನಕ್ಕೆ ಬಂದಿರಬಹುದು.

ಈಕೆಯು ತನ್ನ ಗುರುಭಕ್ತಿಯನ್ನೂ, ರಾಜವಿಶ್ವಾಸವನ್ನೂ ವಿಶೇಷವಾಗಿ ಈ ಗ್ರಂಥದಲ್ಲಿ ಹೇಳಿಕೊಂಡಿರುತ್ತಾಳೆ. ಆದರೆ ತನ್ನ ಮಾತಾಪಿತೃಗಳ ಹೆಸರನ್ನೇ ಆಗಲಿ, ಸಹೋದರರೇ ಮೊದಲಾದ ತನ್ನ ಬಂಧುವರ್ಗದ ಹೆಸರನ್ನೇ ಆಗಲಿ, ಒಂದುವೇಳೆ ಮದುವೆಯಾಗಿದ್ದರೆ ತನ್ನ ಪತಿಯ ಹೆಸರನ್ನೇ ಆಗಲಿ ಗ್ರಂಥದ ಯಾವಭಾಗದಲ್ಲಿಯೂ ಸೂಚಿಸದೇ ಇರುವದು ಆಶ್ಚರ್ಯಕರವಾಗಿದೆ. ಆದುದರಿಂದ ಈಕೆಯು ಬಹಳ ಸಣ್ಣ ವಯಸ್ಸಿನಲ್ಲಿಯೇ ಮಹಾರಾಣಿಯವರ ಊಳಿಗಕ್ಕೆ ಸೇರಿರಬಹುದು. ಈಕೆಯು ಅಳಸಿಂಗರಾಚಾರ್ಯರನ್ನು ತನ್ನ ವಿದ್ಯಾಗುರುವೆಂಬದಾಗಿ ಹೇಳಿಕೊಳ್ಳುವದರಿಂದ (ಸಂಧಿ.೯.೫೩,೫೫) ಅವರಲ್ಲಿ ವಿದ್ಯಾಭ್ಯಾಸವನ್ನು ಮಾಡಿರಬೇಕು.

“ಪಾದದೂಳಿಗದೊಳು ಬಳೆದ ಬಾಲಿಕೆ...॥” (ಸಂಧಿ.೧.೩೮)

ಎಂದು ಹೇಳಿಕೊಳ್ಳುವದರಿಂದ, ಈಕೆಯು ಬಾಲ್ಯದಿಂದಲೆ ಅಂತಃಪುರದಲ್ಲಿಯೇ ಬಳೆದವಳೆಂದು ತೋರುತ್ತದೆ.

ಈಕೆಯು ಕನ್ನಡದಲ್ಲಿ ಪಾಂಡಿತ್ಯವನ್ನು ಸಂಪಾದಿಸಿದಳು, ಸಂಸ್ಕೃತದಲ್ಲಿ ಮತಗ್ರಂಥಗಳೇ ಮೊದಲಾಗಿ ಅನೇಕ ಗ್ರಂಥಗಳನ್ನು ನೋಡಿರುವವೂ ಈಕೆಯ ಗ್ರಂಥದಿಂದಲೇ ವ್ಯಕ್ತವಾಗುತ್ತವೆ. ಈಕೆಯು ಇತರ ಗ್ರಂಥಗಳನ್ನು ಬರೆದಿರುವಂತೆ ತೋರುವದಿಲ್ಲ.

ಚಿಕದೇವಮಹಾರಾಜನು ಒಂದಾನೊಂದು ದಿನ ಅಂತಃಪುರದಲ್ಲಿ ತನ್ನ ಅಷ್ಟಮಹಿಷಿಯರೊಡನೆಯೂ, ಪಟ್ಟಮಹಿಷಿಯೊಡನೆಯೂ ಕುಳಿತುಕೊಂಡು ವಿನೋದವಾಗಿ ಕಾಲವನ್ನು ಕಳೆಯುತ್ತಿದ್ದು, ಈ ಹೊನ್ನಮ್ಮನನ್ನು ನೋಡಿ, ಇವಳು ಬುದ್ಧಿವಂತೆಯೆಂದು ಹಿಂದೆ ತನ್ನೊಡನೆ ಅಳಸಿಂಗರಾಚಾರ್ಯರು ಹೇಳಿದ ಸಮಾಚಾರವನ್ನು ಜ್ಞಾಪಿಸಿಕೊಂಡು, ಪಟ್ಟಮಹಿಷಿಯ ಮುಖವನ್ನು ನೋಡಿ “ಈ ಹೊನ್ನಿ ಕನ್ನಡದಲ್ಲಿ ಬಹಳ ಬುದ್ಧಿವಂತೆಯಂತೆ. ಇವಳಿಂದ ಒಂದು ಮನೋಹರವಾದ ಕಾವ್ಯವನ್ನು ಬರೆಯಿಸು.” ಎಂದು ಹೇಳಲು; ಪಟ್ಟಮಹಿಷಿಯು ಅಪ್ಪಣೆಯನ್ನು ಕೊಟ್ಟ ಮೇರೆ, ಈಕೆಯು “ಹದಿಬದೆಯಧರ್ಮ” ಅಂದರೆ ಪತಿವ್ರತಾಧರ್ಮವೆಂಬ ಸದ್ಗ್ರಂಥವನ್ನು ವಿರಚಿಸಿದ್ದಾಗಿ ಈ ಗ್ರಂಥದ ಪೀಠಿಕಾಸಂಧಿಯಲ್ಲಿ ತಿಳಿಸುತ್ತಾಳೆ. ಮತ್ತು ಈ ಗ್ರಂಥವನ್ನು ಓದುವವರಿಗುಂಟಾಗುವ ಫಲವನ್ನು ಅದೇ ಸಂಧಿಯ ಕೊನೆಯಲ್ಲಿ ತಿಳಿಸುತ್ತಾಳೆ. (ಸಂಧಿ. ೧. ೩೯ ರಿಂದ ೪೦)

ಚಿಕ್ಕದೇವಮಹಾರಾಜನು ಕ್ರಿಸ್ತಶಕೆಯ ೧೬೭೨ ರಿಂದ ೧೭೦೪ ವರೆಗೆ ಆಳಿದುದಾಗಿ ತಿಳಿಯಬರುತ್ತದೆ.

ಈ ಗ್ರಂಥವು ಸಾಂಗತ್ಯವೆಂಬ ವೃತ್ತದಲ್ಲಿ ಬರೆದಿದೆ. ಈ ವೃತ್ತಕ್ಕೆ ಸಂಗತಿಯೆಂದೂ ಕೆಲವರು ಹೇಳುತ್ತಾರೆ. ಈ ಗ್ರಂಥವು ಸಾಮಾನ್ಯವಾಗಿ ಜನಗಳೆಲ್ಲರೂ ಹಾಡುತ್ತಿರುವ ಕನಕದಾಸನ ಮೋಹನತರಂಗಿಣಿಯಂತೆ ಹಾಡತಕ್ಕದ್ದು. ಈ ವೃತ್ತದ ಲಕ್ಷಣವನ್ನು ನಾಗವರ್ಮನು ತನ್ನ ಛಂದಶ್ಶಾಸ್ತ್ರದಲ್ಲಿ ಹೇಳಿಲ್ಲ. ಮಂಗರಸನ “ಹರಿವಂಶ” ಅಥವಾ ನೇಮಿಜಿನೇಶಸಂಗತಿಯೆಂಬ ಗ್ರಂಥವೇ ಈ ವೃತ್ತದಲ್ಲಿ ಬರೆದ ಬಹಳ ಪುರಾತನಗ್ರಂಥವಾಗಿ ತೋರುತ್ತದೆ. ಪ್ರಾಯಶಃ ಕನ್ನಡದಲ್ಲಿ ಸರ್ವಸಾಮಾನ್ಯವಾಗಿ ಪ್ರಚಾರದಲ್ಲಿರುವ ಹಾಡುಗಳಲ್ಲಿ ಅರೆವಾಸಿಯ ಗ್ರಂಥಗಳು ಈ ವೃತ್ತದಲ್ಲಿ ಬರೆದಿವೆ.

ಈ ಗ್ರಂಥವು ಮುಖ್ಯವಾಗಿ ಸ್ತ್ರೀಜನರಿಗೆ ನೀತಿಯನ್ನು ಬೋಧಿಸುವದಕ್ಕಾಗಿಯೇ ಹುಟ್ಟಿತಾದುದರಿಂದಲೂ, ಯಾವ ವಿಧವಾದ ಅನುಚಿತವಾದ ವರ್ಣನಾದಿಗಳು ಇದರಲ್ಲಿ ಇಲ್ಲವಾದುದರಿಂದಲೂ, ಇದು ವ್ಯಾಕರಣಶುದ್ಧವಾಗಿ ಉದ್ಗ್ರಂಥಗಳಲ್ಲಿ ಗಣನೀಯವಾಗಿರುವದರಿಂದಲೂ ಸರ್ವಸಂಗ್ರಾಹ್ಯವಾಗಿರುವದೆಂದು ಮುದ್ರಿಸಲ್ಪಟ್ಟಿತು.

# ಕರ್ಣಾಟಕ ಕಾವ್ಯಮಂಜರಿ.

## ಹದಿಬದೆಯ ಧರ್ಮ

(ಸಾಂಗತ್ಯಂ)

ಶ್ರೀಮದಮಲಗುಣನಿಧಿಗೆ ನಿತ್ಯನಿಗೆ ನಿ । ಸ್ಸೀಮಕೃಪಾವಾರಿಧಿಗೆ॥
ರಾಮಣೀಯಕರಾಶಿಗೆ ಪಶ್ಚಿಮರಂಗ । ಧಾಮನಿಗಾನೆರಗುವೆನು॥

ರಂಗಧಾಮನ ದಿವ್ಯಾಂಗಸಂಗತಿಯಿಂ । ಮಂಗಳ ದೇವತೆಯೆನಿಪಾ॥
ರಂಗಮಂದಿರ ಮಂಗಳವೈಜಯಂತಿಗೆ । ರಂಗನಾಯಿಕಿಗೆರಗುವೆನು॥

ಆದಿನಾರಾಯಣನಾಶೇಷನೊಡಗೂಡಿ । ಯಾದರದಿಂದವತರಿಸೆ॥
ಯಾದವಕುಲವೇಳಿಗೆ ವೆತ್ತಿರ್ಪುದು। ಮೇದಿನಿಯೊಳು ಮೈಮೆವಡೆದು॥

ಆ ಯಾದವರಿಗೆ ಕುಲದೇವರೆನಿಪ ನಾ । ರಾಯಣನಾದಿಕಾರಣನು॥
ಶ್ರೀಯೊಡಗೂಡೀ ಕರ್ಣಾಟದೇಶದೊ । ಳೀ ಯಾದವಾದ್ರಿಯೊಳಿಹನು ॥

ಬಲಕೃಷ್ಣರಿಂದೆ ಪಲವು ಪೂಜೆಗೊಂಡಿರ್ಪ।ಕುಲದೇವರ ಸೇವೆಗೆಂದು॥
ಪಲವು ಯಾದವರಾಯರಾ ದ್ವಾರವತಿಯಿಂ।ದೊಲಿದೈತಂದರೀ ನೆಲಕೆ॥೫

ಶ್ರೀನಾರಾಯಣನಡಿಗಳಿಗೆರಗಿ ಮ । ಹಾನಂದರಸದ ಮೈಮೆಯೊಳು॥
ಆ ನೆಲೆಯನು ಬಿಟ್ಟಗಲಲಾರದೆ ತಾ । ವೀ ನಾಡೊಳು ನೆಲಸಿದರು॥

ಈ ಶೈಲಕೆರಡು ಗಾವುದ ತೆಂಕಣ ರಮ್ಯ। ದೇಶವ ನೆಲೆವೀಡುಗೊಳಿಸಿ॥
ಈ ಶೂರರು ನೆಲಸಿದರದರಿಂದೆ ಮ । ಹಿಶೂರಪುರವೆನಿಸಿದುದು॥

ಆ ದಿನಮೊದಲು ಮೈಸೂರನಾಳಿದರಾ । ಯಾದವಕುಲವರ್ಧನರು ॥
ಶ್ರೀದೇವರಾಜಚಂದ್ರಮನವತರಿಸಿದ । ನಾ ದಿವ್ಯವಂಶವಾರ್ಧಿಯೊಳು ॥
ಭಾವಿಸೆ ಭೋಗಭಾಗ್ಯದೊಳೈಸಿರಿಯೊಳು । ದೇವೇಂದ್ರಗೆ ಮಿಗಿಲೆನಿಸಿ ॥
ದೇವರಾಜನ ಬಸುರಿಂದೊಗೆದನು ದೊಡ್ಡ । ದೇವರಾಜೇಂದ್ರಭೂವರನು ॥
ಭೂವನಿತೆಯ ಪುಣ್ಯದ ಪುಂಜವಾನುಷ । ಭಾವವ ಪಡೆದುದೆಂಬಂತೆ ॥
ಈವಸುಧೀಶನಿಂದೊಗೆದೆಸೆವನು ಚಿಕ್ಕ । ದೇವರಾಜನು ತೇಜದೊಳು ॥ ೧
ಶ್ರೀರಂಗಪಟ್ಟಣದೊಳು ರತ್ನಸಿಂಹಾಸ । ನಾರೋಹಣವನಾಚರಿಸಿ ॥
ಧಾರಿಣಿಯನು ಧರ್ಮದೊಳು ಪಾಲಿಸುತಮ । ಹಾರಾಜನೆನಿಸಿ ರಾಜಿಪನು ॥



ಶ್ರೀಯುವತೀಶನಖಿಲಗುಣನಿಧಿ ನಾ । ರಾಯಣನಾದಿಕಾರಣನು ॥
ಆಯುರಾರೋಗ್ಯೈಶ್ವರ್ಯವ ಚಿಕದೇವ । ರಾಯನಿಗನುಗೊಳಿಸುವನು ॥
ಧರೆಯ ಪೊರೆವ ಧರ್ಮವ ಸುಪಾದಿಪ । ಧುರವ ಗೆಲುವ ಗೈಮೆಯೊಳು ॥
ನರಪತಿ ಚಿಕದೇವರಾಜೇಂದ್ರಗೆ ಶೌರಿ । ನೆರವಾಗಿಹನು ನೇಮದೊಳು ॥
ಚಿಕದೇವರಾಜಚಂದ್ರಮನ ಪಟ್ಟದರಾಣಿ । ಸಕಲಸದ್ಗುಣಸಂಪನ್ನೆ ॥
ಅಕಲುಷೆ ಯೆಳವಂದೂರ ದೇವಮ್ಮನು । ಸಕಲಸಂಪದವೊತನಿಹಳು ॥
ಇಷ್ಟಗುಣೆಯರೆಣ್ಬರು ಮತ್ತೆ ರಾಣಿಯ । ರಷ್ಟೈಶ್ವರ್ಯಲಕ್ಷ್ಮಿಯರೊ ॥
ಅಷ್ಟದಿಗ್ವಿಜಯಲಕ್ಷ್ಮಿಯರೊ ತಾಮೆನೆ ಸಂ । ತುಷ್ಟಿಯೊಳೊಡವೆರ ದಿಹರು ॥ ೪

ಅಡಪ ಕಾಳಾಂಜಿ ಪೊಂಗಟ್ಟಿಗೆ ಕುಂಚ ಕಂ । ನಡಿ ಗಿಂಡಿ ಬಿಜ್ಜಣಿಗೆಗಳಾ ॥
ಪಿಡಿದೊಳಗೆಗೈವ ಬಿಂಕಗಾರ್ತಿಯರಾ । ಪೊಡವಿಯಾಣ್ಮನ ಪೊದ್ದಿಹರು ॥
ಪಾಡುವ ಕುಣಿವ ಬಾಜಿಪ ಬಣ್ಣಿಪಾ । ತಾಡುವ ಪರಿಹಾಸಗೆಯ್ವ ॥

ಗಾಡಿಕಾತಿಯರು ಗಣನೆಯಿಲ್ಲದೆ ಜೋಡು। ಗೂಡಿರುವರು ಕೂರ್ಮೆಯೊಳು
ನೋಂತು ಚತುಷ್ಷಷ್ಟಿಕಲೆಗಳು ಪೆಣ್ಬರಿ । ಜಾಂತು ಸೇರಿದವೊ ಯೆಂಬಂತೆ॥
ಸಂತಸವಿಗೆ ಸರ್ವಸರಸವಿದ್ಯಾಸಿ । ದ್ಧಾಂತವೇದಿನಿಯರೊಪ್ಪಿಹರು॥
ಪಲರಾಣಿಯರೊಳಗವಳೆಣ್ಗಳುಮಿ । ಕ್ಕೈಲವೊಳು ಹಂತಿಗೊಂಡೆಸೆಯೆ॥
ನೆಲವಾಣ್ತಿಯೊಳವೋಲಗವೊಳೊಪ್ಪಿದನಾ । ಬಲವೈರಿಗೆ ಪಡಿಯೆನಿಸಿ॥
ಓಲಗಗೊಳುತೊಂದು ದಿನವೆಬಲದ ಸು । ಶೀಲೆಯರೊಳು ಕಡೆಗಣ್ಣ॥
ಸಾಲಿವಿಡಿದು ಸುಳಿಸುಳಸಿ ಮನ್ನೊಳು ಸತ್ಕೃ । ಪಾಲೋಕನವನೆಸಗಿದನು ॥
ಕರುಣಾಮೃತಾಬ್ಧಿಯ ಕಲ್ಲೋಲಗಳಂತೆ। ತರತರದೊಳು ಕವಿತರುವ॥
ಸರಸಕಟಾಕ್ಷವನೆಸಗಿಯೆನ್ನೊಳು ಮನ।ಗರಗಿ ಮನ್ನಿಸಲೆಳಸಿದನು॥೧೦
ಎನ್ನ ಮನ್ನಿಸನೆಂದೆಣಿಸಿ ತನ್ನೆಡದೊಳು। ಪೊನ್ನಪುತ್ತಳಿಯೆಂತೆಸೆವ॥
ಮನ್ನಣೆವಡೆದ ಪಟ್ಟದರಾಣಿಯ ಮೊಗ। ಮನ್ನೋಡುತಿಂತುನುಡಿದನು॥
ಅರಸಿ ಕೇಳೀ ಪೊನ್ನಿ ಸರಸಸಾಹಿತ್ಯದ । ವರದೇವತೆ ತಾನೆಂದು॥
ಪರಮಾರ್ಥವಾದಿ ಯಳಸಿಂಗರಾರ್ಯನು। ಪರಿಪರಿಯೊಳು ಬಣ್ಣಿಪನು॥
ಓದುಗಲಿಸುವರೊಲಿದು ಪೊಗಳದೊಡಾ । ವೋದುಗಲಿವರೋದುಗಳು।
ಮೇದಿನಿಯೊಳು ಮೇಳೆಸಿಪ್ಪುದೆಂಬುದು ಲೋಕ।ವಾದವೈಸಲೆರಾಣಿಕೇಳು
ಇವಳು ಕಾವ್ಯಾಲಂಕಾರನಾಟಕಗಳ । ಪವಣಿಗೆಮಿರವ ಬಲ್ಲವಳು॥
ಇವಳ ಸಾಹಿತ್ಯದ ಸವಿಗೆಳಸುತ್ತೆನ್ನ। ಕಿವಿಗಳು ಕದುಬುಗೊಂಡಿಹವು।
ಪವಣಿಗೆಯೊಪ್ಪೆ ಪ್ಪುರುಳು ಪೊಗರೇರಿದಿಯಂ।ಗವಿಸೆಯಲಂಕಾರಗಳು।
ಕವಿದು ಪರಿಯೆ ರಸದೊಳ್ಗುಂಪು ಸುಮ್ಮನೆ । ಕವಿತೆಯೊಂದನು ಪೇಳಿ ಸಿಂದು॥೧೪

ಎಂದ ರಾಯನ ನುಡಿಗಾನು ವಿನಯಗೂಡಿ । ಹಿಂದೆಗದಿರೆ ಪಟ್ಟದರಸಿ॥
ಕಂದ ಬಾರೆನ್ನ ಕಟ್ಟಾಣಿ ಪೆಣ್ಮಣಿಯೆ ಬಾ। ರೆಂದು ಮುಂದಕೆ ಬರಿಸಿದಳು॥

ಕನ್ನಡಜಾಣೆ ನೀ ಬಾರೆಂದು ಕರವಿಡಿ । ದೆನ್ನ ತನ್ನೊತ್ತಿಗೆ ಬರಿಸಿ॥
ಎನ್ನೊಳು ನೆವವಿನಿತಿಲ್ಲದೆರಕಗೂಡಿ । ಮನ್ನಿಸಿ ನುಡಿದಳಿಂತೆಂದು॥

ಕಲಿತ ಬಿಜ್ಜೆಯ ಬಲ್ಲರಿಗೆ ಕೇಳಿಪುದೈಸೆ। ಫಲವಿದನರಿತು ನೀನಿಂದು॥
ಅಲಸದೆ ನಾಣ್ಚದಂಜದೆಯುಳುಕದೆ ಪೇಳು। ಪಲವಗೆ ಕಬ್ಬದೊಳ್ಪುಗಳಾ

ಇಂತು ನುಡಿದ ರಾಣಿಯ ನುಡಿಗೇಳಿಪೋ । ರಂತೆ ಚಿತ್ತವ ಬಲಿವಿಡಿದು॥
ಸಂತಸಮಿಗೆ ಸಭೆಯೊಳು ರಾಯಗೆ ಮಾ । ರಾಂತು ಬಿನ್ನವಿಸಿದೆನಿಂತು॥

ಅರಸ ಕೇಳೆನಗೆ ನಿನ್ನಡಿಯೂಳಿಗವೊಂ। ದರಸಿಯರಡಿಯೊಲ್ಮೆಯೊಂದು॥
ಪರಿಕಿಪೊಡಖಿಳಾರ್ಥಸಾಧನಂಗಳಿಗಿವು । ನೆರವಾಗಿಹವು ನೇಮದೊಳು॥

ನಿನ್ನಡಿಯೊಲವರಿತಿರ್ಪುದೆನಗೆ ಬಿಜ್ಜೆ । ನಿನ್ನೂಳಿಗವೆನ್ನ ಧರ್ಮ॥
ನಿನ್ನಾಣತಿಗೈವುದೆನ್ನ ಮನೋರಥ । ವೆನ್ನ ಭಾಗ್ಯಕೆ ಸರಿಯುಂಟೆ?॥

ಪಲವೋದುಗಳಿಂದೆ ಪಲವು ಬಿಜ್ಜೆಗಳಿಂದೆ। ಪಲಬಗೆ ಮಾತುಗಳಿಂದೆ।
ಜೆರೆವಡೆದಿರ್ಪ್ಪೆನೆಂದೆಣಿಸುವಳಲ್ಲ ನಿಂ। ನೊಲವೊಂದನೆ ನಂಬಿಹೆನು॥

ನಿನ್ನ ಗುಣಂಗಳನೊಲಿದೋದುವದೋದು। ನಿನ್ನಾಳ್ಕೆಯ್ಮೆಯೊಳ್ಕೆಯ್ಮೆ
ನಿನ್ನೊಲವರಿತು ನುಡಿವ ನುಡಿ ನಲ್ನುಡಿ । ಯನ್ನಿವಕೆಣೆ ಬೇರುಂಟೆ?॥

ನಿನ್ನ ಕೃಪಾರಸದಿಂ ಪ್ರಿಯೆ ಮಾನು ಕ। ಜೊರ್ಣನ್ನು ಚೆಂಬೊನ್ನಾದಂತೆ॥
ಸನ್ನುತಿವಡೆದೊಳ್ಪುವೆತ್ತು ಸಕಲಭಾ । ಗ್ಯೋನ್ನತಿಯೊಡಗೂಡಿಹೆನು॥

ನಿನ್ನಡಿಸೋಂಕಿನೊಳಖಿಲದುರಿತಗಳ । ಸನ್ನಾಹವ ಸವೆವಟ್ಟ॥
ಚನ್ನಿಗ ಚಿಕದೇವರಾಯನ ಸಂಚಿಯ । ಹೊನ್ನಿಯೆಂಬೇಳ್ಗೆವೆತ್ತಿಹೆನು॥

ನಿನ್ನಾಣತಿಗೇಳ ನಿನ್ನ ಬಳಗೆ ಸಂದು । ನಿನ್ನೊಳಗಗಳನೆಸಗಿ॥
ನಿನ್ನವಳೆನಿಸಿ ನಿನ್ನೆಡೆವಿತದಿರ್ಪೆನೀ । ಯುನ್ನತಿಗಿನ್ನೆಣೆಯುಂಟೆ ? ॥

ಆನಾವಳೆನ್ನ ಮುನ್ನಿರವಾವುದು ಮ । ತ್ತೀ ನಿನ್ನ ದಯವಾವುದಕಟ ॥
ಏನೆಂಬೆನಿದಕೆ ಪೆಳವನೆಡೆಗಾ ಗಂಗೆ । ತಾನೈದೆ ಬಂದುದೆಂಬಂತೆ॥

ಎನ್ನ ಜನ್ಮಕೆ ಸಾಫಲ್ಯವಾದುದು ನಿನ್ನ । ಚೆನ್ನಡಿಯೂಳಗದಿಂದೆ॥
ಪಿನ್ನೇಳು ಮುನ್ನೇಳು ತರದವರನಿಬರು । ಮುನ್ನತಿವಡೆದರೆನ್ನಿಂದೆ॥

ಆವ ಜನ್ಮದೊಳಾನಾವ ಸುಕೃತಗಳ । ನಾವ ಬಗೆಯೊಳೆಸಗಿದೆನು ॥
ಈ ವಿಧವೇಳಗೆವಡೆದೀ ಯೊಡಲೊಳೆ । ದೇವರೂಳಗವೆಸಗುವೆನು॥

ಒಲಿದು ತನ್ನೊಡವುಟ್ಟು ಸೊಸೆಮಗಳೆಂದೆಂಬ । ಪಲರು ಮುನ್ನಿನ ಬಾಂಧವರು॥
ಕುಲದೇವತೆಯೆಂದು ಕೂರ್ತು ತಂತಮ್ಮಿಷ್ಟ । ಫಲವ ಪಡೆವರೆನ್ನಿಂದೆ ॥ ೨೦

ಸುತ್ತಣ ದೇಶವರಸಿಯರ ಚೈತಲೆ । ಗುತ್ತಮಭೂಷಣವೆನಿಪ ॥
ಮುತ್ತಿನ ಸರವೆನ್ನ ರನ್ನವಾವುಗೆಗಳ । ಸುತ್ತಲಂಬಣವಾದುದಿಂದು ॥

ಪೇಳುವೆನೆನ್ನ ಮನದಾನಂದವ । ನಾವ ಬಗೆಯೊಳರುಹುವೆನು॥
ಭಾವಿಸೆ ಸೊಗದ ಸುಗ್ಗಿಯ ತನಿಸೊಕ್ಕೆನ್ನ । ನಾವರಿಪುದು ಮತ್ತೇವೆ॥

ಒಡೆಯನಿರಿಸಿದಂತಿರ್ಪುದಲ್ಲದೆ ಪೇ । ಳೊಡವೆಗೆ ಬೇರಿರವುಂಟೆ॥
ಕಡುಗೂರ್ಮೆಯಿಂದೆ ನಿನ್ನಡಿಯಾಣತಿಯನೆನ್ನ । ಮುಡಿಯೊಳಾಂತೆನು ಮತ್ತೇನು ॥ ೨೨

ಆಪೊಡಮೆನ್ನ ಕವಿದೆಗೆ ಗಬ್ಬದ ಬಗೆ । ಈ ದಿವ್ಯಸಭೆಗೆ ಸಂಗತವೋ॥
ಪಾದದೂಳಗದೊಳು ಬಳೆದ ಬಾಲಕಿಯೆಂ । ದಾದರದಿಂ ಪಾಲಿಪುದು॥

ಪದಿನೆಂಟು ಬಣ್ಣಣೆಯೊಂದು ಬವಣಿಗೊಂಡು । ಪದಗೆಟ್ಟ ಬಯಲಬಣ್ಣಿ
ಸದೆ॥
ಮುದದೊಡನಿಹಪರದೇಳ್ಗೆವಡೆಯೆ ಹದಿ।ಬದೆಯ ಧರ್ಮವ ಬಣ್ಣಿಪೆನು॥

ಅರಸಿಯರನಿಬರುಮಾದರದಿಂದೆನ್ನ । ಸರಸಕಾವ್ಯವ ಸವಿವಂತೆ॥

ಪರಮಪತಿವ್ರತೆಯರ ನಡತೆಯನಿಲ್ಲಿ।ಪುರುಳುಗೊಳಿಸಿ ಪೊಗಳುವೆನು॥

ಧರ್ಮದ ತನಿಗಂಪು ತಲೆದೋರೆ ಕಾವ್ಯದ। ಪೆರ್ಮೆ ಚೇರ್ವರಿದು ಬಿತ್ತರಿಸೆ।
ನಿರ್ಮಲಸತಿಯರ ಧರ್ಮವ ಕೃತಿಯಾಗಿ। ನಿರ್ಮಿಸಿ ಕೇಳಪೆನಿಂದು॥

ಬಲ್ಲರಿಂದಾನು ಕೇಳದುದಕೆ ಪೆರ್ಚುಗೆಗಂ। ಬಿಲ್ಲದಿಂತೆಚ್ಚರುಗೂಡಿ॥
ಎಲ್ಲರುಮರಿವಂತೆಳಮಾತುಗಳಿಂದೆ। ಸೊಲ್ಲಿಸುವೆನು ಸೊಗಸುವ್ರೊಲು॥

ಎಂದ ನುಡಿಯ ರಾಯನುಮರಸಿಯರು ಮ। ನಂದವಡೆದು ಬಗೆಗೊಳಿಸೆ।
ಸಂದ ಸತೀಧರ್ಮವನು ಸಾಹಿತ್ಯದೊ।ಳೊಂದುಗೊಳಿಸಿ ಪೇಳದೆನು॥

ಆದಿಕಾವ್ಯದೊಳ್ಮೈದನೆಯ ವೇದದೊಳು ಮ।ನ್ವಾದಿಕಧರ್ಮಶಾಸ್ತ್ರದೊಳು
ಭೇದಿಸಿ ಪಿರಿಯರು ಪೇಳದುದನೆ ಕೃತಿ।ಗೈದಾನು ಕಿವಿಗೊಳಿಸಿದೆನು ॥೧೦

ಸತಿಯರೀ ಕೃತಿಯನಾಲಿಸಿದೊಡಂದಂದಿಗೆ। ಪತಿಭಕ್ತಿ ಬಣ್ಣವೇರು
ವುದು ॥
ಮತಿ ಮಸುಳಸದೆ ಮರವೆದೋರದಿಹಪರ।ವತಿಶಯವನುಗೂಡುವುದು॥

ಎಳವೆಣ್ಗಳೀ ಕೃತಿಗೇಳೆ ತಮ್ಮನೆಯರ। ನೆಳಮೆಯೊಳಳವು ಗೆಡಿಸದೆ॥
ಬಳಸಂದು ಬಾಳುವರತ್ತೆಮಾವಂದಿರ। ನೊಳವುಗೈದೊಳ್ಪವಡೆವರು ॥

ಮನೆವಾಳ್ತಿಯರಿಯದ ಮರುಳುವೆಣ್ಣೀ ಕೃತಿ। ಯನೆ ಮನವೊಲಿ
ದೋದಿದೊಡೆ॥
ಜನರಿವಳನು ಪೋಲ್ವ ಜಾಣೆ ಜಗದೊಳ।ಲ್ಲೆನೆ ಚಾತುರ್ಯವಡೆವಳು ॥೧೩

ಮುನಿದು ಮುಂಪಲಿಸಿ ಮೋಡಿಯೊಳದ್ದ ಮೂರ್ಖಿಪ। ಮೊನೆಗಾತಿಯೀ
ಕೃತಿ ಗೇಳೆ ॥
ಇನಿಯನ ಮೊಗವ ನೋತವ ಮುನ್ನ ಮೋಹಿಸಿ । ಮನಗರಗುವಳು
ಮತ್ತೇನು ॥

ಕತುನಾಣ್ಚೆಯಂಜಿಕಣ್ಮುಚ್ಚಿಕಂಪನಗೊಂಬ।ಮಡದಿಯರೀಕೃತಿಗೇಳೆ
ಎತಬಲದವರೇಳಸದಂತೆ ಮನದನ್ನ।ರೊಡನೆ ಬಾಳುವರಡಕದೊಳು॥೮೫

ಬಗೆಯೆ ಮೈಲಿಗೆಯೆಂಜಲೆಂಬುದನರಿಯದ।ಮುಗುದೆಯರೀ ಕೃತಿಗೇಳೆ॥
ನಿಗಮದೊಳೊಗೆದ ನೇಮಂಗಳ ತಿಳದೀ । ಜಗಕೆ ಪಾವನೆಯರೆನಿಪರು॥

ಅತ್ತೆನಾದನಿಯರೊಳಳುಕದೆ ಕಾದುವ್ರ। ನ್ಮತ್ತೆಯರೀಕೃತಿಗೇಳೆ॥
ಉತ್ತಮಗುಣಗಳಂಥೊಳಗುಗೆಯ್ದವರೊಳು । ಪತ್ತುಗೆವೆರಸಿಬಾಳು
ವರು ॥೮೭

ಒಪ್ಪವರೊರ್ಪರೊಳು ಮಚ್ಚರಿಸುವ ಸವತಿಯ।ರೀರ್ವರುಮೀಕೃತಿಗೇಳೆ॥
ಪೇರ್ವರಿಪರ್ಪ ವೈರದ ಜೇರ ಪರಿದಿ।ಟ್ಟೀರ್ವರೊಂದೆನಿಸಿಯೊಪ್ಪುವರು॥

ಇದು ಪಾತಿವ್ರತ್ಯಧರ್ಮತತ್ವದಸಾರ। ವಿದೆ ಸಂಜೀವನಮಂತ್ರ॥
ಇದು ಪರಮಾರ್ಥ ಹಿತೋಪದೇಶವ ತಿರು।ಳದನು ಸತಿಯರೋದುವುದು॥

ಇದನಾಲಿಪುದೊಳ್ಪಂಡಿರೀಧರ್ಮದ। ಹದನರಿತಾಚರಿಸುವುದು॥
ಇದನು ಕಲಿವುದಿದರೊಳಗರಿವುದು ಹದಿ।ಬದೆಯರೆನಿಸಿ ಬಾಳುವುದು ॥

ಚೆನ್ನಿಗ ಚಿಕದೇವರಾಯನ ಸುಚಿಯು
ಹೊನ್ನಮ್ಮನುಸುರ್ದ ಕಬ್ಬದೊಳು ॥
ಉನ್ನತಿವಡೆದೊಗೆದುದು ಏಳಿಕಾಸುಧ ।
ಸನ್ನುತಗುಣಸಂಬಂಧಿ ॥೫೦

## — ಎರಡನೆಯ ಸಂಧಿ —

ಮಂಗಲಗುಣಗಣನಿಧಿಗೆ ನಿರ್ಮಲನಿಗು । ತ್ತುಂಗಮಹಿಮಗೆ ಮಾಧವಗೆ॥
ಸಂಗತಜನಸರ್ವಫಲದಗೆ ಪಶ್ಚಿಮ । ರಂಗಧಾಮನಿಗೆರಗುವೆನು॥
ಇಂಗೋಲನ ತಾಯಿಗಿಂಗದಿರನ ತಂಗಿ । ಗಿಂಗಡಲಣುಗಿಗಿಂಪಿರೆಗೆ॥
ರಂಗಧಾಮನರಾಣಿಗೆ ರಾರಾಜಿಪ । ರಂಗನಾಯಕಿಗೆರಗುವೆನು॥
ಪತಿಯೊಳು ಪರಭಕ್ತಿಗೆಯ್ವುದು ಲಕ್ಷ್ಮೀ।ಪತಿಯಾಣತಿಯೆಂದು ಬಗೆದು
ಪತಿಯನೆ ಪರದೇವತೆಯೆಂದು ಭಜಿಸುವ ।ಸತಿಯರ ಸನ್ನುತಿಸುವೆನು॥
ಪತಿಭಕ್ತಿಯೊಂದು ಶ್ರೀಪತಿಭಕ್ತಿಯೊಂದಿದ । ರತಿಶಯಕಿನ್ನೆಣೆಯಿಲ್ಲ॥
ಮತಭೇದವುಂಟು ಮಾಧವಭಕ್ತಿಗಿವಕಾ । ಮತಭೇದವು ಮಗುಳಿಲ್ಲ॥
ಅವರದೊಡನಂತರಂಗದೊಳಾಣ್ಮನ । ಪಾದವ ಭಜಿಪ ಭಾವೆಯರ॥
ಪಾದಧೂಳಿಗಳಿಂದೆ ಪಾವನವಹುದೀ।ಮೇದಿನಿಯೆನೆ ಮಿಕ್ಕುದೇನು ॥೫
ಪತಿತರ ಪಾವನವೆನಿಸುವ ಬಲ್ಮೆಯೊ । ಳತಿಶಯವಡೆದ ತೀರ್ಥಗಳು॥
ಸತಿಯರ ಪಾದಸಂಸ್ಪರ್ಶದೆ ತಮ್ಮ ದು।ಷ್ಕೃತವ ಕಳೆಯಲೆಳಸುವುದು॥
ತಡೆಯದೆಲ್ಲೆಡೆಯೊಳು ತಾನು ಬೀಸುವೆನೀ।ಯೆಡರನೇಳಿಪೆನೆಂದೆಲರು॥
ಸಡಗರದಿಂದೆ ಸಾಧ್ವಿಯರಡಿಸೋಂಕಿದ।ಪುಡಿಯ ಮುಡಿಯೊಳಾನುವುದು
ತೇಜಗಳೆಡಹದೆ ತೀರುಡಿಯದೆ ತಂ।ನೋಜೆಯುಡುಗದೆ ಭಾಸ್ಕರನು ॥
ಈಜಾತಿಸಾಧ್ವಿಯರೆಸಕದೇಳಿಗೆಯಿಂದೆ । ತೇಜವಡೆದು ತಿರುಗುವನು॥
ಮಳೆಗರೆವುದು ಬೆಳೆಪೆರ್ಚುವುದಿಳೆ ತಳ।ಕಿಳಿದು ಪೋಗದೆ ತಡೆದಿಹುದು॥
ಪಳಿವಿಲ್ಲದ ಪತಿವ್ರತೆಯರ ನಡತೆಯ । ಬಳದೊಳೆಂಬರು ಬಲ್ಲವರು॥

ಪರಮಪತಿವ್ರತೆಯರ ಪಾದದರ್ಶನ। ದೊರೆಕೊಂಡುದೆ ಪುಣ್ಯದಿವಸ।
ಪರಿದಿವರನು ಬಲವರೆ ಭೂಪ್ರದಕ್ಷಿಣ।ದಿರವನಿನ್ನೇವಣ್ಣಿಪೆನು ॥೧೦

ತನ್ನಿನಿಯನ ತಾಯ ತಂದೆಯ ಕುಲಗಳ।ನುನ್ನತಿಗೆಯ್ದೊಪ್ಪುವಡೆವು।
ಮನ್ನಣೆವೆತ್ತ ಸಾಧ್ವಿಯರ ಮಹಿಮೆಗಳ। ಸನ್ನುತಿಸುವೊಡೆನ್ನಳವೆ ॥

ಈಸುಚರಿತ್ರೆಯರೆಸಗಿದನ್ನವನುಣ।ಲಾಸೆವಡುವರು ಪಿತೃಗಳು।
ಆಸುಖವೊರೆಕೊಂಡೊಡವರಿಗಪ್ಪುದು ತೃಪ್ತಿ।ಸಾಸಿರ ಬರಿಸಪರ್ಯಂತ॥

ಸತಿಯರ ಕೈಸೋಂಕಿದನ್ನವ ಸವಿವುದ।ರತಿಶಯವಾಡಲೆನ್ನಳವೆ।
ಅತಿಕೃಚ್ಛ್ರಚಾಂದ್ರಾಯಣಸಾಂತಪನಾದಿ।ವ್ರತನಿಯಮದ ಪವಣಲ್ಲ॥

ಇವರಿದ್ದೆಡೆ ಪುಣ್ಯತೀರ್ಥ ಪುಣ್ಯಕ್ಷೇತ್ರ।ವಿವರಿದ್ದ ಮನೆ ದೇವಭವನಾ।
ಇವರೆ ಪ್ರತ್ಯಕ್ಷದೇವತೆಯರು ದಿಟವೆಂದು।ವಿವರಿಸುವರು ವೇದವಿದರು॥

ಉದಯಕಾಲದೊಳೆದ್ದೊಲಿಪಿಷ್ಟದೈವದ।ಪದಗಳ ಪಾಡುವಂದದೊಳು।
ಹದಿಬದೆಯರ ಪೆಸರ್ಗೊಂಡು ಪೊಗಳ್ವುದು।ವಿದಿತವೈಸಲೆ ವೈದಿಕರಿಗೆ॥

ಪತಿಯ ಪಾದಾಬ್ಜಭಕ್ತಿಯೆ ತಮಗಿಹಪರ।ಗತಿಯೆಂದು ಕಡುನಿಡಿದಿರ್ಪ।
ಸತಿಯರಿರ್ಪೆಡೆಯೊಳು ಕೃತಯುಗವೊಂದಲ್ಲ।ದಿತರಯುಗಕ್ಕಿಂಬಿಲ್ಲ॥

ಪರಮಪತಿವ್ರತೆಯಿದ್ದ ಬಳಿಯೊಳಾ।ಸಿರಿರಾಣಿ ಸೇರಿ ಬಂದಿಹಳು।
ಸರಸತಿ ಸಾವಿತ್ರಿಗಾಯತ್ರಿಯರು ಮಾ।ಪರಿಸರದೊಳು ಬಳಸಿಹರು॥

ಪಲವು ಸುಕೃತವಿಂತು ಪರಿಣತಿವೆತ್ತುದೊ। ಕುಲಬೇಳ್ಗೆ ಗುಂಪು ಕೂಡಿದುದೊ।
ಸಲೆ ಪರಿಶುದ್ಧಿ ಸಾಕಾರವಾದುದೊಯೆನೆ। ಕುಲವಧು ಕುರುಹು ಕೊಂಡಿಹಳು॥೧೮

ಪತಿಭಕ್ತಿರಸವಿಂತು ಬಲಿದುದೊ ಪರಿಶುದ್ಧ। ಮತಿಗಿಂತು ಮೈದೊರಕಿದುದೊ।
ವ್ರತದೇಳ್ಗೆಯಿಂತು ಬಿತ್ತರವಡೆದುದೊಯೆನೆ। ಸತಿಯರು ಜಸವಡೆದಿಹರು ॥೧೯

ಜಗದೊಳಪಾಂಸುಲೆಯರ ಚರಿತಕೆ ಸರಿ। ಮಿಗಿಲಿಲ್ಲ ಮಿಕ್ಕ ಧರ್ಮದೊಳು।
ಬಗೆಯರಿತೆಸಗಬಲ್ಲವರಿಗೆಂದೆಂದಿಗು। ಮೊಗದೋರವು ಮೋಸಗಳು ॥

ಈಕಾಲವಾಕಾಲವೀದೇಶವಾದೇಶ। ವೀಕುಲವಾಕುಲವೆನದೆ।
ಏಕರೀತಿಯೊಳೆಸಗುವ ಧರ್ಮಕಿದಕಿನ್ನು। ಲೋಕದೊಳೆಣೆ ಬೇರುಂಟೆ॥೨೧

ಉಣದುಡದೊಡಲ ದಂಡಿಸುವಾಯಸವಿಲ್ಲ। ಪಣವವೆಚ್ಚಿಸುವ ಪಾಡಿಲ್ಲ।
ಗುಣವಂತೆಯರೆಸಗುವ ಪತಿಶುಶ್ರೂಷೆ। ಗೆಣೆಯಹ ತಪವಿನ್ನೊಳವೆ॥

ಪಲನಾಡಿಗೆ ಪರಿಪರಿದು ಬಳಲಿಯಲ್ಲಿ। ಪಲನೀರ ಮುಳುಗಿ ಮುಂಗೆಪೆ।
ನಲಿದೆಸಗುವ ನಲ್ವೆಂಡಿರ ನಡತೆಗೆ। ಪಲನೇಮಗಳು ಪಾಸಟಿಯೆ ॥೨೩

ಮನೆಯ ತೊರೆದು ಮನವಾಳ್ತಿಯನುಳಿದು ತ। ನ್ನನುಕೂಲದಾಸೆಯನಳಿದು।
ಬನದೊಳು ಗೆಯ್ವ ಬರಿಯ ತಪಗಳು ಕುಲ। ವನಿತೆಯರಿರವಿಗೆ ದೊರೆಯೆ॥

ಮನೆಯೆ ಧರ್ಮಾಶ್ರಮ ಮನವಾಳ್ತಿಯೆ ಧರ್ಮ। ನಿನಿಯನೊಳಗ ದೇವಪೂಜೆ।
ಮನನನಿವನ ನೆನೆವುದೆ ಸಾಧ್ವಿಯರಿಗೆ। ಮುನಿಸತಿಯರ ಮೋಡಿಯೇನು

ಇನಿಯನ ಸೇವೆಯೊಳೆಣೆಯಿಲ್ಲದ ಧರ್ಮ। ಮನವಾಳ್ತಿಯೊಳರ್ಥಕಾಮ।
ಮನವನ್ನನೊಳು ಮಾಧವನ ಭಾವಿಸೆ ಮೋಕ್ಷ। ವೆನೆ ಸತಿಯರಿಗರಿದೇನು ॥೨೬

ಪಲವುಧರ್ಮಂಗಳ ಬಳೆಯಿಪುದಾಯಾಸ।ಫಲವ ಭೋಗಿಪುದಾನಂದಾ॥
ಕುಲಸತಿ ಧರ್ಮವ ಕೊತ್ತಸಗುವುದಾ।ಫಲಭೋಗಕೆ ಪಾಟಯಲ್ತೆ॥

ಕಡುನೇಮವಿಡಿದು ಕಕ್ಕಸಗೊಂಡು ಮುನಿವರ। ರೊಡರಿಸುವುಗ್ರ ತಪಗಳು॥
ಪಡಿಯರಿನಿಯರ ಮನವರಿತೆಸಗುವ। ನಡತೆಗಳಗೆ ಪಡಿಯಲ್ಲ॥೨೮

ಆರೂಢಿವೆತ್ತ ಮಹಾಭಾರತದೊಳ।ಗಾರಣ್ಯಕಪರ್ವದೊಳು॥
ನೂರತೊಂಬತ್ತೆಂಟನೆಯಧ್ಯಾಯದೊ।ಳಾರಯ್ಯೆ ಕಥೆಯೊಂದುಂಟು॥

ಸಾಂಗವೇದವನೋದಿ ಸಕಲಧರ್ಮದ ತತ್ವಂಗಳನರಿತಾಚರಿಸಿ॥
ತುಂಗನುಹಿಮೆವೆತ್ತು ದೋಷವಳಿದು ಮುನಿ। ಪುಂಗವನೊರ್ವನೆಸೆದನು॥೩೦

ಮನೆಯೊಳು ಮರುಕವನುಳಿದು ತಪವಗೈವ।ಮನದಿ ವನವನನುಸರಿಸಿ।
ತನುವ ದುಡಿಸಿ ಘೋರತಪವನೆಸಗುತಲ್ಲಿ। ಮುನಿಮುಖ್ಯನೆನಿಸಿ ಮೆರೆದನು॥೩೧

ಒಂದುದಿವಸ ವೇದವನೋದುತೆ ಬೇಸಗೆ।ಯಿಂದೆ ಬಳೆದ ಬಿಸಿಲಿನೊಳು॥
ಬೆಂದುರೆ ಬೆಮರುತೆ ಬಿಸುಸುಯ್ಯುತ್ತೆಂದು।ನಿಂದರು ಮರದನೆಳಲೊಳು

ಆರುಷಿವರನುತಿಪ್ರ್ವವೇಳೆಯೊಳಾ।ಭೂರುಹವಗ್ರಶಾಖೆಯೊಳು॥
ಸೇರಿದ ಬಿಳುವಕ್ಕಿ ಚೀರುವ ದನಿವಿಂಗೆ।ಕೂರವಾಗಿರೆ ಕೊನರಿದುದು॥

ಆಪರಿವನಿಯಾವ ಬಳಿಯೊಳು ಪೊಕ್ಕುದು।ದಾಪರಿಸರವನಾರೈದು॥
ಕೋಪವೆರಸಿ ನೋಡೆ ಕೂರುತಾಪಸನು।ದಾಪಕ್ಕಿಗಸುವಪಗಿದುದು।
ಹರಣವಳಿದು ಧರೆಗುರುಳಿದ ಪಕ್ಕಿಯ।ಪರಿಯನಿಟ್ಟಿಸಿ ಪರಿತಪಿಸಿ॥
ಇರದೆ ತಾನೆಸಗಿದ ತಪಗಳ ಪೆಂಪುಮೆಗೆ।ಸರಿಯಿಲ್ಲೆಂದೆಣಿಸಿದನು॥೩೪

ಬಳಿಕ ಪಸಿದು ಪಾರ್ವರ ಬೀದಿಯೊಳೊಂದು।ನಿಳಯವ ಪೊಕ್ಕುನಿಂದಲ್ಲಿ
ಬಳಲಿದೆನೆನಗುಣಬಡಿಸೆಂದಲ್ಲಿರ್ದ।ಕುಲಪಾಲಿಕೆಗುಸುರಿದನು ॥೩೬

ಒಲಿದೇಕಪತ್ನಿಯೆಂಬೊಳ್ವೆಸರೆಸೆವ।ಕುಲಸತಿಯುಳ್ಕರುಗೂಡಿ॥
ನಲವಿನಿಂದವನಿಗನ್ನವನೀಯುವೆನೆಂದು। ಕೆಲದೊಳು ಕುಳ್ಳಿರಿಸಿದಳು॥
ಅನಿತರೊಳಲ್ಲಿಗವಳ ಗಂಡನೈತರೆ।ಮನವೊಲಿದಿದಿರೆದ್ದು ನಡೆದು॥
ವಿನಯದಿಂದುಚಿತೋಪಚಾರವನೆಸಗಿ ಬೇಗೆ ಮನದನ್ನನ ಮನ್ನಿಸಿದಳು ॥
ಪತಿಸೇವೆಯೊಳಂತು ಪಸಿದ ಪಾರ್ವನ ಮರೆದತಿವಿಳಂಬವನಾಚರಿಸೆ।
ಸತಿಯರ ಧರ್ಮದ ಸಾರವನರಿಯದೆ।ಖತಿಗೊಂಡು ಮುನಿ ಗಳಪಿದನು॥೩೯

ಅತಿಘೋರತಪವೆಸ್ತ್ರದವನು ನೀನರಿಯದೆ ಮತಿಗೆಟ್ಟು ಮರುಳಾ
ಗದಿರು॥
ಪತಿಶುಶ್ರೂಷೆಯ ಬಲ್ಮೆ ಫಲಿಸದಲ್ಲಿ।ಯತಿಧರ್ಮವಿರವಿದು ಬೇರೆ। ೪೦
ಎಂದು ಗರ್ವದ ಸೊಕ್ಕೇರಿ ನುಡಿದ ಮುನಿ।ಮುಂದವನಾರೈದೊಡನೆ॥
ಅಂದು ತನ್ನಾಣ್ಮನೊಳನುಮತಿವಡೆದೈತಂದು ನುಡಿದಳಿಂತೆಂದು ॥೪೧

ಬಳಲಿದೆ ಸಾಕಿನ್ನು ಬಡಿಸಿದನ್ನವನುಂಡು।ತಳುವದೆ ತಪವನಾಚರಿಸು॥
ಬಿಳುವಕ್ಕಿಯ ಬೀಳುಗೆಡಹಿದ ಬಂಕವೀ।ಬಳಿಯೊಳು ಬಣ್ಣವಡೆಯುದು

ಮರುಳೆ ನೀನೀವಾತನುರೆ ಧರ್ಮಸೂಕ್ಷ್ಮವೆಂ।ಬಿರವನೀನರಿತವನಲ್ಲ॥
ಪರಮಪತಿವ್ರತೆಯರ ಬಗೆ ಬೇರಿದು।ಹರಿಹರಾದ್ಯರ ಹವಣಲ್ಲ॥೪೩
ಇತರ ಚಿಂತೆಯನುಳಿದೇಕಚಿತ್ತದೊಳಾತ್ಮ।ಪತಿಪಾದಭಕ್ತಿಯೊಳೆಸೆವಾ
ಸತಿಯೊಲಿದು ಪರಸಿದುದೆಯನುಗ್ರಹ। ಖತಿಗೊಂಡು ನುಡಿದುದೆ
ಶಾಪ॥೪೪

ವ್ರತಿಮಾನವಸ್ಥಯತಿಗಳರವೆಗೈ।ವತಿಘೋರತಪದಾಚರಣೆ ॥

ಸತಿಯರ ಧರ್ಮಕೆ ಸರಿಯಿಲ್ಲೆಂದು ಗೀ।ಸ್ಮೃತಿಯಗಸ್ತ್ಯನೊಳಾಡಿದನು॥
ಆತ್ರಿಮೂರ್ತಿಗಳಾಮಂತ್ರಿತಜಲಸೇಕ।ಮಾತ್ರದೆ ಮೈಮೆ ಮೈದೆಗೆದು॥
ಅತ್ರಿಯ ಸತಿಗನಸೂಯಾದೇವಿಗೆ।ಪುತ್ರರಾದರು ಪೂರ್ವದೊಳು ॥೪೭

ಪಾತಿವ್ರತ್ಯದೇಳ್ಗೆಯ ಪರಿಕಿಪೆನೆಂ।ದೋತು ರಾಘವನುಸಿರ್ದೊಡನೆ॥
ಸೀತೆ ಬೆಂಕಿಯು ಪುಗೆ ಶೀತಳವಾದುದು।ಮಾತಾವುದು ಮತ್ತೆ ಬೇರೆ।
ಹರನ ಸಾಹಸಕಂಜದೆ ಪಲವಗಲುಮು।ಪ್ಪುರ ಪಡಿಬರಿಸಿ ಪೋರಿದುದು
ಪುರವೊಳಗಿರ್ದ ಪುಣ್ಯಾಂಗನೆಯರ ಸುಚ್ಚರಿತದ ಸಲಿಗೆಯಿಂದೈಸೆ ॥

ಧರ್ಮಗತಿಯು ತಾರತಮ್ಯವ ತಿಳಿವೊಡೆ।ಪೆರ್ಮೆಯು ಬಿಟ್ಟು ಬೇಸರದೆ॥
ನಿರ್ಮಲಮತಿಯಾಗಿ ನೀಂ ನಡೆ ಮಿಥಿಲೆಗೆ।ಧರ್ಮವ್ಯಾಧನ ಬಳಿಗೆ ॥೪೯

ಎಂದೇಕಪತ್ನಿ ನುಡಿಯೆ ಕೇಳಿ ಮುನಿ ಮನ।ದಂದವಳಡಿಗಳಿಗೆರಗಿ ॥
ಅಂದಿನ ಗರ್ವವಳಿದು ಮಿಥಿಲೆಯ ಬಳಿ।ಸಂದನು ಸಂತೋಷದೊಳು॥೫೦

ಈ ಪಾತಿವ್ರತ್ಯದೇಳ್ಗೆಯನಾಲಿಸೆ।ಪಾಪಗಳೆದ್ದು ಪಾರುವುವು ॥
ಶ್ರೀಪತಿಯಿವರೆನ್ನ ಸೇವಕರೆಂದು ತಾ।ಕಾಪಿಡುವನು ಕರುಣದೊಳು॥೫೧

ಚೆನ್ನಿಗಚಿಕ್ಕದೇವರಾಯನ ಸಂಚಿಯ।
ಹೊನ್ನಮ್ಮನುಸಿರ್ದ ಕಬ್ಬದೊಳು ॥
ಮನ್ನಣೆವಡೆದೊಂದರ ಮುಂದಣ ಸಂಧಿ।
ಸನ್ನುತಗುಣ ಸಂಬಂಧಿ ॥೫೨

## — ಮೂರನೆಯ ಸಂಧಿ —

ಶ್ರೀಭೂಮಿನೀಳಾನಾಥನಿಗನುಪಮ।ವೈಭವವೈಕುಣ್ಠಪತಿಗೆ ॥
ಸ್ವಾಭಾವಿಕಶುಭಗುಣನಿಧಿಗಂಬುಜ।ನಾಭನಿಗಾನೆರಗುವೆನು ॥೧

ದೇವಮಾನವಮೃಗನಗರೂಪದ ವಾಸು।ದೇವನ ವಿಭವಂಗಳನು ॥
ಆವಿಧಮೊಡಲಪೆತ್ತನುಸರಿಸುವ ಲ।ಕ್ಷ್ಮೀವಧುವನು ವಂದಿಪೆನು ॥೨

ಪತಿಪಾದಭಕ್ತಿಯರೆನಿಸಿ ಬನ್ನಣೆವೆತ್ತ।ಸತಿಯರೊಲಿದು ಸಮನಿಸುವ॥
ಪತಿಶುಶ್ರೂಷೆಯ ಬಗೆಯನರಿತು ಸು।ಗತಿಗೈದದನು ಬಣ್ಣಿಪೆನು॥೩

ಪತಿಯೆ ಪರಮಗುರು ಪತಿಯೇ ದೇವತೆ।ಪತಿಯೇ ಸದ್ಗತಿಯೆಂದು॥
ಪತಿಯ ಪಾದಾಂಬುಜವೊಳು ಭಕ್ತಿಗೆಯ್ವುದು।ಸತಿಯರ ಧರ್ಮದಸಾರ।

ಪತಿಯೊಲವರಿತು ಪತಿಯಸೇವೆಯೊಳಿದ್ದು।ಪತಿಯೂಳಗಗಳನೆಸಗಿ॥
ಪತಿಯಾಣತಿಯ ಬಂಡಿಯೊಳಡಗಿರ್ಪುದು।ಸತಿಯ ಧರ್ಮದ ಸರ್ವಸ್ವ॥೫

ವ್ರತಹೋಮನಿಯಮೋಪವಾಸದಾನಂಗಳೆಂ।ದತಿಶಯವಡೆವಧರ್ಮಗಳು
ಪತಿಶುಶ್ರೂಷೆಗೆ ಪಡಿಯಲ್ಲೆಂಬಿದ।ರತಿಶಯವರಿತಾಚರಿಪ್ಪುದು॥೬

ಪ್ರತಿಮೆಯ ರೂಪದ ಪಂಕಜನಾಭಗೆ।ನತಿಗೆಯ್ದು ನಲವೇರುವಂತೆ।
ಪತಿಯ ರೂಪದೆ ತನ್ನ ಪಾಲಿಗೆ ಬಂದ ಶ್ರೀ।ಪತಿಯ ಪಾದವ ಭಜಿಸುವುದು॥

ಪಗಲಿರುಳೆನ್ನದೆ ಪತಿಯಾಣತಿಯೊಳು।ಮೊಗವಿರುಹದೆ ಮೊನೆಗೊಳದೆ॥
ಬಗೆದೆಗೆಯದೆ ತನ್ನ ಭಾಗ್ಯದ ಫಲವೆಂದು।ಬಗೆದು ಭಕ್ತಿಯೊಳೆಸಗುವುದು॥

ಮಾಯವನನುಗೊಳಿಸದೆ ಮೈಮರಸದೆ।ಕಾಯಮನೋವಚನಗಳ ॥
ಆಯಸದಿಂದಳವಳಿಯದೆ ಪತಿಯನು।ಪಾಯದಿಂದುಪಚರಿಸುವುದು ॥೯

ಒಲಿದು ಪತಿಯ ಮನವೊಲವನಾರೈದು ತಾ।ನಲಸಿಕೆಗೊಳದನುಸರಿಸಿ॥
ಕುಲಸತಿಯರ ಧರ್ಮ ಕೊನರಿಪೆ ನೇಹವ।ನೆಲೆಗಾಣಿಸಿ ನೆಗಳುವುದು॥೧೦

ಇದೆ ನಿನ್ನ ಪತಿ ಬಂದನೆಂಬ ನಲ್ನುಡಿಗೇಳ।ಮುದವೇರಿ ಮೊಗಸಿರಿಹಡೆದು।
ಕವುಬಿಯುವನ ಸೇವೆಗನುವಪ್ಪ ವಸ್ತುವ।ನೊದವಿಪುದುವ್ರ್ರಗೊಂ
[ಡೊಡನೆ॥೧೧

ಇಂತು ಸೋಂತುವೆನಿಂತು ನುಡಿವೆನಿಂತೆಸಗುವೆ।ನಿಂತು ಸೇರುವೆನಿಂತಿ
[ರುವೆ॥
ಇಂತು ಮನ್ನಿಪೆನಿಂತು ಮನಗರಗಿಪೆನೆಂದು।ಚಿಂತಿಪುದೇಕಚಿತ್ತದೊ
[ಳು॥೧೨

ಮನೆವಾಳ್ತೆ ವ್ಯೆಯ್ಯಲಸಿಕೆ ಮಕ್ಕಳ ಮುದ್ದು।ಬಿನದಂಗಳನು ಬಿ
[ಟ್ಟೆದ್ದು॥
ದನಿಗೇಳದ ಮುನ್ನ ತಾನಿದಿರ್ಗೊಂಡವ।ನನುವರಿತನುಸರಿಸುವುದು॥

ಸೋಗೆ ಮುಗಿಲ ಕಂಡು ಸೊರ್ಕುವಂದವೊಳನು।ರಾಗರಸದ ಲಹರಿ
[ಯೊಳು॥
ಬಾಗಿಲನೊಳವೊಕ್ಕುಬಂದನೆಂಬುದುಮತಿ।ವೇಗದೊಳಿದಿರುಗೊಳು
[ವುದು ॥೧೪

ತಳುವದಚ್ಯುತನಿಗರ್ಘ್ಯನೆಗೈದಂತಡಿ।ಬೊಳೆದು ತೊಡೆದು ದುಗುಲದೊಳು
ಬಳಕ ನಡೆದು ಬಂದ ಬಳಲಿಕೆಗಳೆವಂ।ತೊಳುಮಾತುಗಳನೊಡರಿಪುದು॥
ಪಸಿವಲಸಿಕೆಗಳ ಪರಿದು ಕೆಲದೆ ನಿಂದು।ನಸುನಾಣ್ಬೆತ ನಲವಿನೊಳು॥
ಒಸೆದೊಲವರಿತೊಯ್ಯನುಚಿತೋಪಚಾರವ। ನೆಸಗುವುದೇಕಚಿತ್ತ
[ದೊಳು ॥೧೫

ಅನದರಿಯ ದೇಸಿಬಾಣ್ಮಗೆ ಬಗೆವಪ್ಪ।ದಾವಿಧಗಳನಾಸ್ಯೆದು ॥
ಭಾವಿಸಿ ತಿಳಿದುಟ್ಟುತೊಟ್ಟು ಬಣ್ಣಿಗೆಯಿಂದ।ಭಾವವ ಬಾಡಗೊಳು
[ವುದು ॥೧೬

ಇಷ್ಟದೇವತೆಯಿವನೆಂದು ಪತಿಯೊಳು ನಿ।ಶಿಷ್ಟಭಾವವ ಬಗೆಗೊಳಿಸಿ॥
ಕಷ್ಟಕಾರ್ಪಣ್ಯವ ಕಾಣಿಸಿ ಕನಲದೆ।ತುಷ್ಟವಡಿಪುದೊಲವರಿತು ॥೧೭

ಹಿತವಿದು ಶಾಸ್ತ್ರವಿಹಿತವಿದು ಮನಕೆ ಸಂ|ಮತವಿದೆಂದೆಂಬಮರ್ಮವನು॥
ಮತಿಯೊಳೆಣಿಸಿ ಮನದನ್ನನ ಸೇವೆಗು|ಚಿತವಸ್ತುಗಳನೆ ಚಿಂತಿಪುದು॥
ಮಡವಾಳ್ತಿಯೆಸಗುವ ಮರ್‍ಯಾದೆಯನು ತ|ನ್ನಿನಿಯನಿಗಿಂತೆಂದರುಹಿ|
ಮನದೊಲವರಿತೊಡಬಟ್ಟುದನೊಡರಿಸಿ|ಮನಬಾರದುದನು ಮರೆ
[ವುದು ॥೨೦

ಗೃಹಜನಪರಿಕರವಿಲ್ಲದಿರೆ ಕಾ|ರ್ಯಸುರದೊಳು ಗಾಳುಗೆಡದೆ ॥
ಓಸರಿಸುತೊಬ್ಬ್ಯೇಕಾಂತದೊಳೊಪ್ಪ|ದೀಪಿಸದೆ ಬಿನ್ನವಿಪುದು॥
ಗನ್ನಗದುಕುಗಳ ಕಳೆದು ಗರ್‍ವವ ಬಿಟ್ಟು|ಹನ್ನಸುಗಳನು ಹಬ್ಬಿಸದೆ|
ತನ್ನ ಬಾಳಿಕೆಬಡತನದ ಬಗೆಯನೆಲ್ಲ|ಬಿನ್ನವಿಪುದು ವಿನಯದೊಳು ॥

ಮುನಿದಿನಿಯನ ಕಡುವೊಸವಾತಿಗೆ ನೊಂದು|ಕನಲದೆ ಗಾಸುಪಡಿಯದೆ|
ಬೆನುಮನಗಳ ತನ್ನ ಬಸಗ್ಯೆದು ದೈನ್ಯವ|ಕೊನರಿಸಿ ತಂಪುಗೊಳಿಪುದು॥
ಪವಣಿಲ್ಲದ ಪಲವಗೆವಾತನಾಡದೆ|ಕವಿಕೋಪಗಳನು ಕಾಣಿಸದೆ ।
ನೆವವಿಲ್ಲದೆ ನೆಗ್ಗಿಸಲಿಕೆಳದೊರಲದೆ|ಸವನಿಸುವುದು ಸಂತಸವನು ॥೨೪

ಅರಿ ಬೊಬ್ಬಿರಿದಾರ್ಭಟಿಯನಾಚರಿಸದೆ|ಪಾರದೆ ಪರಸಹಾಯವನು ॥
ಪೋರದೆ ಪುರ್‍ಬ್ಬಗಂಟಿಕ್ಕದೆ ಪುಸಿಯದೆ|ಸೇರಿ ಸೇವೆಯನೆಸಗು
[ವುದು ॥೨೫

ನೋಯಿಸಿ ನುಡಿಸದೆ ನೋಡದುಚಿತಗಳ|ಬೀಯವೆಸಗಿ ಬೇಸರಿಸದೆ ॥
ಆಯುವರಿತು ತರಲರಿಯದ ಪತಿಯೊಳ|ಸೂಯೆಗೊಳದೆ ಸುಖಿಸುವುದು॥
ಪೆರತೊಂದು ನೆವದೊಳು ಬಿಸುಪೇರಿದ ಕೋಪ|ದುರುಪಿನಿಂದೊದರು
[ವ ಪತಿಗೆ॥
ತರಿಸಂದು ತಾನಿದಿರುತ್ತರವೀಯದೆ|ಪೆರವೆಗೆವುದು ಭೀತಿವಡೆದು ॥೨೬

ಪತಿಯು ಬುದ್ಧಿಗೆ ಮೋಸ ಬಂದೊಡಮುದರಿಂದೆ|ಖತಿಗೊಂಡುಗಲಗು
[ವಡಿಸದೆ ॥

ಇತರರರಿಯದಂತೇಕಾಂತಸಮಯದೊ।ಳತಿಭಕ್ತಿಯಿಂದರಿಪ್ಪುವುದು॥
ಅನುಚಿತಕಾರ್ಯವನವನೊತರಿಸೆ ಕಂಡು।ನಿನಗಿದು ನೀತವಲ್ಲೆಂದು॥
ನೆನಸಿಪೆನಲ್ಲದೆ ನೇಮಿಪುದಿಲ್ಲೆಂದು।ವಿನಯವೆರಸಿ ಬಿನ್ನವಿಪುದು॥೧೯

ಅತಿಭೀತಿಯಿಂದನುಗೆಟ್ಟು ಪಿಂತೆಗೆಯದೆ।ಮಿತಿಮೀರಿ ಮೇಲುವರಿಯದೆ।
ಇತರಜನರು ತನ್ನನೇಳಿಸಿ ನಗದಂತೆ।ಪತಿಸೇವೆಗೈದು ಬಾಳುವುದು॥೨೦
ಪಿರಿಯರ ಮಗಳೆಂದು ಬಿಜ್ಜೆಗಲಿವೆನೆಂದು।ವರರೂಪವತಿ ತಾನೆಂದು॥
ಪರಮಪಾವನೆಯೆಂದು ಬರಿದೆ ಜರೆಯದನು।ಸರಿಸುವುದಾತ್ಮವಲ್ಲಭನಾ॥

ವ್ರತವೆಸಗುವೆನೆಂದು ಮಿಂದು ಬಂದಿಹೆನೆಂ।ದತಿಶಯದಿಂದನುಗೆಡದೆ॥
ಪತಿಯ ಪಡಿಗಪಾವುಗೆಗಳ ಪಿಡಿದು।ನ್ನತಿವಡೆವುದು ನಾರಿಯರು ॥೨೧
ಗರತಿಗೆಲಸವೆಂದು ಗೆಲ್ಲಗೊಂತುರ್ಬದೆ।ಪರಿಚಾರವೆಂದು ಪಳಯದೆ॥
ಪಿರಿದುಕಿರಿದುಗಳ ಭೇದವನೆಣಿಸದೆ।ನಿರವಿಸಿದುದನೆಸಗುವುದು॥೨೨

ಮುಡಿಯೊಳು ಪೂತ್ತು ಮುದ್ದಿಸಿದೊಡೇನಡಿಗಳಂ।ಪೊಡವಿಗಿಟ್ಟೊ
[ರಸಿದೊಡೇನು।
ಒಡೆಯನಿಟ್ಟಂತಿರ್ಪುದೊತವೆಗುಚಿತವೆಂದು।ನಡೆವುದು ನಲ್ವೆಂಡಿ
[ರೊಲಿದು ॥೨೩

ತನ್ನ ತವರುಮನೆಗೆಲ್ಲ ತಾನೊತತಿಯಿಂ।ಬುನ್ನತಿವಡೆವುದರಿಂದೆ॥
ತನ್ನಿನಿಯನಿಗೂಳಿಗವವಳಪ್ಪುದು ಸು।ಪನ್ನತೆಯೆಂದು ಬಗೆವುದು ॥
ಆವಮೆ ತಂದೆ ತಾಯಾದೊಡಮೇನುಪ।ಕಾರಿಗಳಾದೊಡಮೇನು॥
ಆರಾದೊಡವನಾತ್ಮಪತಿಗಾಗದವರನು।ದೂರವೆನಿಸಿ ತೊರೆವುದು॥೨೪

ಭುವಿದಿಪೊಂದನೆಳಸಿ ಚಾರಿವರಿಯದೆ।ನೆಲೆವಿಡಿದೊಂದರೊಳಿರದೆ ॥
ನೆರೆನಿಂದ ನೀರ ತೆಪ್ಪದಪ್ರೋಲು ತೆಗೆವೆಸೆ।ಗಲೆಗೊಳಪನುಸರಿಸುವುದು।
ಕೊನಬಾದೊಡಮೇನು ಕೂರ್ಮೆಯಾದೊಡಮೇನು।ಬಿನದವಾದೊಡ
[ಮೇನು ಬೇರೆ॥

ಇನಿಯನೇಕಾಂತದೊಳೆಸಗಿದುದನು ತನ್ನ।ಮನದೊಳೆ ಮರೆಮಾಡು
[ವುದು ॥೩೮

ಸೆಜ್ಜೆವನೆಯ ಸೇವೆಯೊಂದನುಳಿದು ಮಿ।ಕ್ಕುಜ್ಜುಗಗೈವ ವೇಳೆಯೊಳು।
ಸಜ್ಜಾತಿಸತಿಯರಿನಿಯರ ಸನ್ನಿಧಿಯೊಳು।ಲಜ್ಜೆವೆರಸಿ ರಂಜಿಪುದು॥೩೯

ಪರದೇವತೆಯೆಂದು ಭಕ್ತಿಗೆಯ್ವುದು ಬಲು।ದೊರೆಯೆಂದು ಪಚರಿಸು
[ವುದು।
ಗುರುವೆಂದು ವಿನಯಗೂಡಿರ್ಪುದಿನಿಯನೊಳು।ನೆರವೆಂದು ನೆರೆನಂಬು
[ವುದು ॥೪೦

ಮುಳಿದಲ್ಲಿ ಮುಳಿದೆಳಸಿದುದನೆಳಸಿಯಲ್ಲ।ಗಳೆದುದೆಲ್ಲವನಲ್ಲಗಳೆದು॥
ಬಳವಿಡಿದಿನಿಯನ ಪಾದಾರವಿಂದದ।ನೆಳಲಂತೆ ನೇಮದೊಳಹುದು॥೪೧

ಕೆಳೆಗೊಳುವುದು ಸೇವೆಗೈವುದ ನಲ್ಲನ।ಬಳಸಲುವುದು ಭಜಿಸುವುದು।
ಒಳಗುವೇಳುವುದೊಡನಾಡುವುದೊಲಿದೊಲ್ಮೆ।ಗೆಳಸುವುದೇಕವೆನಿ
[ಪುದು ॥೪೨

ಗಣಿಸುವುದವನರಿವಿನ ಕೌಶಲಗಳ।ಗಣಿಸುವುದವನ ಗುಣಗಳ॥
ಎಣಿಸುವುದವನೊಲಿದೆಸಗುವ ನಲ್ಮೆಯ।ತಣಿಸುವುದಿಂತು ಚಿತ್ತವನು॥

ಕೇಳುವುದವನ ಕೀರ್ತಿಯನಾಲಿಪರಿಗೆ।ಪೇಳುವುದವನ ಪೆರ್ಮೆಯನು।
ನೋಳಗೊಳುವುದವನೊಳು ಮೇರೆಮೀರದೆ।ಬಾಳುವುದಿಂತು ಭಾವೆ
[ಯರು॥೪೪

ಈತೆರದೊಳು ನಡೆದಿನಿಯನ ಮನಕೆ ಸು।ಪ್ರೀತಿದೋರಿಸುವ ಪೆಣ್ತಿರಿಗೆ।
ಪಾತಿವ್ರತ್ಯದ ಬಗೆ ಬಣ್ಣವೇರಿ ವಿ।ಖ್ಯಾತಿ ಬಳೆದು ಬಿತ್ತರಿಪುದು॥೪೫

ತಳುವದವನಿಯೊಳು ತನ್ನ ತಪ್ಪಿಸಿಪ್ರೋದ।ನಳನೊಳು ನಲ್ಮೆಯನೆಸಗಿ॥
ಇಳೆಯ ಪೆಣ್ಡಿರೊಳೆಣೆಯಿಲ್ಲದೆ ಕೀರ್ತಿಯ।ತಳೆದೆಸೆದಳು ದಮ
[ಯಂತಿ॥೪೬

ಕಾನನದೊಳು ಕಡುಕಷ್ಟವಡೆದು ನೋವು|ಬೇನೆಗಳಿಗೆ ಬೇಸರದೆ॥
ಸಾನುರಾಗದೊಳನುಸರಿಸಿ ತನ್ನಿನಿಯನ|ಜಾನಕಿ ಜಸವ ಪಡೆದಳು॥೪೭
ದ್ಯೂತಕೇಳಿಯೊಳಜ್ಞಾತವಾಸದೊಳಂದು|ಧಾತುಗುಂದದೆ ಪಾಂಚಾಲಿ॥
ಓತು ಪಾಂಡವರನೊಲಿಸಿ ಹಡಿಬದೆಯರ|ಚೈತಲೆವಣಿಯೆನಿಸಿದಳು॥೪೮
ಇಂತು ವಸಿಷ್ಠನೊಳಿರ್ದಳರುಂಧತಿ|ಯಿಂತತ್ರಿಯೊಳನಸೂಯೆ॥
ಇಂತಗಸ್ತ್ಯನೊಳು ಲೋಪಾಮುದ್ರೆ ಪೆರತೇಂ|ನಿಂತಿರ್ದರೆಲ್ಲ ಸಾಧ್ವಿ
[ಯರು॥೪೯
ಇಂತು ನಡೆವ ಪತಿಗಂತರಂಗೆಯರಪ್ಪ|ಕಾಂತೆಯರಿಗೆ ಕಯ್ಯೊಡನೆ॥
ಸಂತಾನಸೌಭಾಗ್ಯಸಂಪತ್ತುಗಳನು ಶ್ರೀ|ಕಾಂತನು ಕೈಸೇರಿಸುವನು॥

ಚೆನ್ನಿಗಚಿಕದೇವರಾಯನ ಸಂಚಿಯ|
ಹೊನ್ನಮ್ಮನುಸಿರ್ದ ಕಬ್ಬದೊಳು॥
ಮನ್ನಣೆವಡೆದೆಸೆದುದು ಮೂರನೆಯ ಸಂಧಿ|
ಸನ್ನುತಗುಣಸಂಬಂಧಿ ॥೫೦

## — ನಾಲ್ಕನೆಯ ಸಂಧಿ —

ನಂದನ ಮೋಹದ ನಂದನ ಸನಕಸ|ನಂದನವಂದಿತಚರಣ॥
ಮಂದರಧರ ಮಾಧವ ಗೋವಿಂದ ಮು|ಕುಂದ ದೇವನೆ ಸಲಹೆನ್ನ॥೧
ಎಂದೆಂದುಮಿನಿಯನೊಳಿರೆಪೊರೆಯಿಲ್ಲದ|ಚಂದದಿಂದಿರ್ದೆಯೊಳು ನಿಂದ
ಇಂದುಸೋದರಿಗಿಂದೀವರಮಂದಿರೆ|ಗಿಂದಿರೆಗಿಂದು ವಂದಿಪೆನು ॥೨
ಅತ್ರಿಮೂವನುಮೊದಲಾದ ಪೂಜ್ಯರೊಳನು|ವೃತ್ತಿಗೆಯ್ದಾತ್ಮವಲ್ಲಭನಾ॥
ಚಿತ್ತವರಿತು ಸೇವೆಯೆಸಗುವ ಸತಿಯರ|ವೃತ್ತವ ಬಿತ್ತರಿಸುವೆನು॥೩

ತನ್ನ ಪೆತ್ತವರು ಮಿಗಿಲು ತನ್ನವರೊಳು।ತನ್ನ ಪೆತ್ತವರಿಗೆ ಮಿಗಿಲು॥
ತನ್ನಿನಿಯನ ಪೆತ್ತವರೆಂದವರನು।ಮನ್ನಿಸುವುದು ಮರುಕವೊಳು ॥೪
ಗಂಡನ ಬಳ್ಳಿವೊಳತ್ತೆ ಮಾವಂದಿರ।ಗಂಡನವರ ಬಳ್ಳಿಯೊಳು॥
ಅಂಡಲಯದೆಯನಿಬರನನುಸರಿಸುವ ಪೆಂಡಿರ ಜಸ ಪೆರ್ಚುವುದು॥ ೫
ಅತ್ತೆ ಮಾವಂದಿರೊಳಡಕವೆನಿಸಿ ಪತಿ।ಚಿತ್ತದಿರವ ಸೆರೆಗೊಂಡು॥
ಪೆತ್ತತಾಯನು ಪೆಸರೆನಿಸುವ್ರದಿಳೆಯೊಳ।ಗುತ್ತಮನಾರಿಯರೊಲಿದು।
ಎಂತು ಕಾಪಿಟ್ಟೊಡಮೇನ ಬೆಸಸಿದೊಡ।ಮಂತರಂಗವೊಳನುಗೆಡದೆ ॥
ಚಿಂತಿಸಿಯುಳಲದೆ ಸಿಡಿಮಿಡಿಗೊಳದತಿ ಸಂತೋಷದೊಳು ಸಮ್ಮತಿ
[ಪುದು ॥೬
ಪೊತ್ತುಪೊತ್ತಿಗೆ ಪೋಗಿ ಪೊತುಮಟ್ಟ ನಸುತರೆ।ಗುತ್ತಿನಾಣ್ಬ
[ತ ನಲವಿನೊಳು॥
ಒತ್ತಿನೊಳುಪಚರಿಸುತ್ತಿರ್ದವರೊಲಿ।ಚಿತ್ತದರಿಂದೆ ತಣಿವುದು ॥೮
ಉತ್ತರಕುತ್ತರವಿತ್ತಿದಿರಾಡದೆ।ಯೆತ್ತಿ ನುಡಿಯದೊತ್ತರಿಸದೆ॥
ಮತ್ತವರಿತ್ತಾಣತಿಯ ಮಸ್ತಕದೊಳು।ಪೊತ್ತು ಪೂಜಿಸುತೆಸಗು
[ವುದು ॥೯
ಅತ್ತಿತ್ತ ನೋಡದೆಯವಮತಿಗೆಯ್ಯದೆ।ಮತ್ತಯಾಗದೆ ಮರತಿರದೆ॥
ಅತ್ತೆಮಾವಂದಿರಾಣತಿಯನಾಲಿಪುದೇಕ।ಚಿತ್ತದೊಳೇಕಪತ್ನಿಯರು॥
ಕೂಗಿ ನುಡಿಯದೆ ಕೊಬ್ಬದೆ ಕೋಪವೆಸಗದೆ।ನೂಗುವದದೆ ನೋಡಿ
[ಗೊಳದೆ ॥
ಲೋಗರುಚಿತವೆನಲೊಯ್ಯನೊಯ್ಯನೆಯನು।ವಾಗಿ ನುಡಿವುದವ
[ರೊಡನೆ ॥೧೦
ಮುದುಪರರಿಯರೆಂದು ಮುಂದುಗೆಟ್ಟಡದೆ। ಚದುರರನಲ್ಲೆಂದು ಜರೆಯದೆ
ಅದು ಹಿತವೆ।ದನರಿತ್ತು ಸದೇಶವ।ನೆರ್ದೆಗೊಳಿಸುವುದೆಸಗುವುದು॥೧೨

ಮಾಡುವಡಿಪರೆಂದು ಪರಿಹರಿಸದೆ ಚುನ್ನ।ವಾಡದೆ ಮನವಾಳ್ತಿಯನು॥
ಮಾಡುವುದವರ ಸಮ್ಮತದಿಂದೆ ಸತಿಯರೊ।ಳೀಡುಜೋಡಿಲ್ಲೆನಿಸು
[ವುದು॥೧೩

ಮಾನಗೊಳದೆ ಮೈಲಿಗೆಯೆಂಜಲೆಂದನು।ಮಾನಗೆಯ್ಯದೆ ಮನವೊಲಿದು।
ಬೇನೆ ಬಿದ್ದಿರೆ ಪೇಸದೆ ಬೇಸರದೆ ಸ।ನ್ಮಾನದೊಳುಪಚರಿಸುವುದು॥೧೪

ಹಮ್ಮುಗೊಳ್ಳದೆ ಹದವಳಿಯದೆ ಮಾವನ।ಸಮ್ಮುಖದೊಳು ವಾದಿಸದೆ॥
ಹೆಮ್ಮೆವಾತಾಡದೆ ಹೆಕ್ಕಳಸದೆ ಚಿತ್ತ।ಸಮ್ಮತಿಯರಿತೆಸಗುವುದು॥೧೫

ಆವ ವೇಳೆಯೊಳಾವುದನುಗೊಳಲೆಳಸಿದ।ರಾವೇಳೆಯೊಳವನೆಲ್ಲಾ॥
ಸಾವಧಾನದೊಳು ಸಂಗತಿಗೊಳಸುವುದಿಷ್ಟ।ದೇವತೆಯೆಂದೆಣಿಸುವುದು॥

ಒತ್ತಿನೊಳಿರ್ದ್ದಲವರಿತಡಿಗಳನೊಯ್ಯ।ನೊತ್ತುವುದೊಂದುವೆರೆವುದು॥
ಸುತ್ತುಗೆಲಸವ ಸೊಲ್ಲಿಸದೆಸಗುವುದಿಂ।ತತ್ತೆಯನನುವರ್ತಿಸುವುದು॥

ಬೀಸುವುದೊಮ್ಮೆ ಪಿಡಿದು ಬಿಜ್ಜಣಿಗೆಯ।ವಾಸುವುದೊಮ್ಮೆ ಪಾಸಿ
[ಗೆಯ॥
ಸೂಸುವುದೊಮ್ಮೆ ಪನ್ನೀರ ಸುಗಂಧವ।ಪೂಸುವುದೊಮ್ಮೆ ಪೂಜಿ
[ಪುದು॥೧೮

ತಾನೆ ನೀರೆರದು ಮೀಯಿಸುವುದು ಮತ್ತೊಮ್ಮೆ।ತಾನೆ ತೊಡಿಗೆ ತೊ
[ಡಿಸುವುದು॥
ಏನೆಸಗುವೆನೆಂದಿದಿರೊಳಿದ್ದೆಲ್ಲವ।ಸಾನಂದದೊಳು ಸಮನಿಪುದು॥೧೯

ಉಡುಗೆ ತೊಡಿಗೆಯೂಟಮೀಹದೊಳತಿಶಯ।ವಡುವೆನೆಂದೊಡಲು
ಮರೆಯದೆ॥
ಪಡಿಯಹೆನೆಂದು ಬಗೆಯದವರಿಗೆ ತಾನು।ಕಡಮೆಯೆನಿಸಿ ಕಾಣಿಸು
[ವುದು॥೨೦

ಕುತ್ತವೆಣಿಸಿ ಕೋಪಗೊಳದೆ ಕೂರ್ತಿವರೆಮ್ಮ।ತೆತ್ತಿಗರೆಂಬೆರ್ದೆಗೊಳಸಿ।
ಅತ್ತಿಗೆನಾದನಿಯರೊಳಂತರಂಗವ।ಪತ್ತುಗೊಳಿಸಿ ಬಾಳುವುದು॥೨೧

ಅಂದಂದಿಗಿನಿಯನ ಮೆಯ್ಯಾರೈಕೆಯ|ನೆಂದೆಂದಿಗು ಬೇಸರದೆ ॥
ಒಂದು ನಾವೆಯೊಳೇರಿದವರಂತೆ ಸವತಿಯ|ರೊಂದೆನಿಸಿರ್ಪುದೊಪ್ಪ [ದೊಳು ॥ ೨೦

ಪ್ರೋರದೆ ಪುರುಡಿಸದೊರ್ವರೊರ್ವರೊಳನು|ಸಾರವೆನಿಸಿ ಸಮ್ಮತ [ದೊಳು॥
ಓರಗೆಗೆಳಡಿಯರೊಂದುವೆರಸುವಂ|ತೋರಗಿತ್ತಿಯರೊಂದಿಹುದು ॥ ೨೩

ತಂದೆತಾಯನು ಬಿಟ್ಟು ತನ್ನಕೈಗೆಡೆಯಾಗಿ|ಬಂದ ಸೊಸೆಯರ ಬಾಧಿಸದೆ|
ಅಂದಂದಿಗುಡಿಗೆತೊಡಿಗೆಯೂಟವೀಹಗ|ಳಂದ ಸಂತಸಗೊಳಿಸು [ವುದು ॥ ೨೪

ಬಸವಳಿಸದೆ ಪಳಿಯದೆ ಭಂಗವಡಿಸದೆ|ಹಸಗೆಡಿಸದೆ ಹದುಗಿಸದೆ॥
ಬಸಿರೊಳು ಬಂದ ಪೆಣ್ಮಕ್ಕಳ ಮರುಕವ|ನೊಸೆಯರೆಡೆಯೊಳೆಸಗು [ವುದು ॥ ೨೫

ಬಸಿರ ನಿಟ್ಟಸಿಯುಣಬಡಿಸುವುದೊಳುಮುಡಿ|ಯೆಸಕವರಿತು ಮಿಸಿ [ಸುವುದು ॥
ಒಸೆದು ಸಿಂಗರಿಸುವುದೊಲಿದು ನೋಡುವುದಿಂತು|ಸೊಸೆಯರ ಸೊಗ [ಬಡಿಸುವುದು ॥ ೨೬

ಒಲಿದು ಬಸಿರಿಯಾವಾವುದ ಬಯಸುವ|ಳಲಸದೆಯವನೆಲ್ಲವನು ॥
ಪಲವಗೆಯೊಳು ಪವಣಿಸಿಯವಳಚ್ಛೆಯ|ಸಲಿಸಿ ಸಂತಸಗೊಳಿಸು [ವುದು ॥ ೨೭

ಅಕ್ಕತಂಗಿಯರಣ್ಣತಮ್ಮಂದಿರು ತಮ್ಮ|ಮಕ್ಕಳು ಮೊಮ್ಮಕ್ಕಳೊಳು॥
ಕಕ್ಕಸಗೊಂಡು ಕನಲಿ ಕಾದದೆಮಿಗೆ|ಯಕ್ಕರನನುಗೊಳಿಸುವುದು॥೨೮

ತಾಯ ತಂದೆಯ ದೆಸೆ ಗಂಡನ ದೆಸೆಯೆಂ|ಬೀಯೆರಡಿರವಿನೊಳೆಸೆವ ॥
ತಾಯಬಾಂಧವರ ಕಣ್ಣೆರಡೆಂದು ಕಾಣ್ಬುದ|ಸೂಯೆಗೊಳ್ಳದೆ ಸುಖಿ [ಸುವುದು ॥ ೨೯

ಬುದ್ಧಿಗಲಿಯಲರಿಯದ ಪಸುಮಕ್ಕಳ|ಮುದ್ದಿಸಿ ಮುದವೇರುವುದು ॥
ಬುದ್ಧಿಗಲಿವ ಕಾಲದೊಳು ಪೊಯ್ದು ಬೈದು ನ|ಲ್ಬುದ್ಧಿಗಳನೆ ಬೋಧಿ
[ಸುವುದು ॥ ೨೦

ಓದುಗಲಿವ ಮಕ್ಕಳಿಗೂಟವೀಹವ|ನಾದರದಿಂದನುಗೊಳಿಸಿ ॥
ಓದಿಸುವರು ಕೊಂಡು ಬೈದೊಡಮವರನು|ಮೂದಲಿಸದೆ ಸಮ್ಮತಿ
[ಪುದು॥ ೨೧

ಬಸಿರೊಳು ಬಂದ ಕುವರನಾದೊಡಮೇನು|ಪೊಸವರೆಯದ ಪುರು
[ಷನನು ॥
ಒಸೆದು ನಿಟ್ಟಿಸಿಯೊಡಲೋಜೆಯೊಳ್ಪುಗಳ ಬಂ|ಣಿಸಲಾಗದು ಭಾವೆ
[ಯರು॥ ೨೨

ಗುರುಹಿರಿಯನು ತಂದೆಸೋದರನಣುಗನು|ಪೊರೆವರಸಾದೊಡಮೇನು ॥
ಬರಿಸ ಪನ್ನೆರಡಾದ ಬಳಿಕಾರೊಳವೊಂದು|ವೆರಸದೆ ಪೆರೆವೆಗೆಡಹುದು ॥
ಬಸಿದು ಬಳಲಿ ಪರವೇಸಿ ಬಾಯ್ಬಿಡೆ ಕಂ|ಡಸಮಯಮೆಂದಬ್ಬರಿಸದೆ ॥
ಬಿಸುಮಾತಿನೊಳು ಬೇಯಿಸದಿದ್ದ ಮಾತ್ರವ|ನೊಸೆದೀವುದೊಳು
[ಮಾತಿನೊಳು ॥ ೨೪

ನೆರೆಮನೆ ಮುಮ್ಮನೆ ಗರತಿಯರೊಲಿದೊಮ್ಮೆ|ಬರೆ ತನ್ನ ಮನೆಯ
[ಬಾಗಲಿಗೆ॥
ಕರೆದಾದರಿಸಿ ಕೈಲಾಪ ತೆರದಿ ಸ|ತ್ಕರಿಸಿ ಭರದೆ ಕಳುಪುವುದು ॥ ೨೫

ತನ್ನ ಮನೆಯ ಮದುವೆಯೊಳು ಮಂಗಳದೊಳು|ತನ್ನ ಬಾಂಧವರೆ
[ಲ್ಲರನು॥
ಅನ್ನಪಾನಂಗಳಿಂದಾದರಿಪುದು ಮತ್ತೆ|ಪೊನ್ನುಡೆಯಿತ್ತು ಪೂಜಿಪುದು॥
ಮೊನೆಗಾತಿ ಮುಗುದೆ ಮುಸುಣ್ಡಿಯಾಗಲಿ ನೆರೆ|ವನೆಗರತಿಯ ನೀಕ
[ರಿಸದೆ ॥
ಮನೆಗೆ ಬಂದೆಡೆಯೊಳು ಮನ್ನಿಸಿ ಮನವೊಲಿ|ದನುವರಿತಾದರಿಸುವುದು॥

ಅರಿಯದೊಳಗವೆಣ್ಗಳು ತಪ್ಪುಗೆಯ್ದೊಡೆ|ಗೆರಗಿದೊಡನೆ ಮನಗರಗಿ ॥
ಮರೆತದನೆಲ್ಲವ ಮಕ್ಕಳೊಳೆಸಗುವ|ಮರುಕವೆರಸಿ ಮನ್ನಿಪುದು॥೩೮

ಮುಳಿದವರೊಳು ಮೊಗಗಂದಿ ಮುಗ್ಗಬೆಯಾಡಿ| ಪಳಿವವರೊಳು [ಪೋರುಗೊಳದೆ ॥
ಮುಳುಗಿಯೆಚ್ಚವರೊಳು ಮೂದಲಿಸಸಗದೆ|ಪೊಳುವೆಂಡಿರೊಳ್ಪ [ವಡೆವುದು ॥೩೯

ಕಂಡಕಂಡವರೊಳು ಕಡುದೈನ್ಯವಡೆಯದು|ದ್ದಂಡೆಯೆನಿಸಿ ತಾನಿರದೆ ॥
ಗಂಡನಘನತೆಯೆಂತಂತು ಪೆಮ್ಮೆಯ ಕೈ|ಕೊಂಡೆಸೆವುದು ಕೋವಿದೆಯರು॥
ಕೇಣಗೊಂಡವನೆಂತು ಕೆಣಕಿ ನೋಡಲಿ ಮತ್ತೆ|ದಾಣಿ ಮಮತೆ [ಯುಳ್ಳವರು॥
ಉಚಿತಮವಿಲ್ಲದಂತೊಳು ನಡೆತೆಯೊಳದರ್ಪ|ಕಾಣಿಸುವುದು ಘನತೆ [ಯನು ॥೪೦

ಬಸವಿಯರೊಳು ಪಾತಕಿನಿಯರೊಳು ಮತ್ತಸತಿಯರೊಳು ಕೆಳೆ [ಗೊಳದೆ ॥
ಪೊಸತಿಲ ಪೊರಗಡಿಯಿಡದೊಳುವೆಂಡಿರ|ಜಸವಳ್ಳೆ ಜಗದ ಪರ್ಬು [ವುದು ॥೪೧

ಮಾಲೆಗಾತಿಯು ಮಡಿವಳತಿಯು ಕಣಿತಿಯು|ಸೂಲಗಿತಿಯು ಸೂಳೆಯನು॥
ಆಲೋಚನೆಯಂತರಂಗಕೆ ಬರಿಸದೆ|ಮೇಲರಿತಿಹುದು ಮೇರೆಯೊಳು ॥

ಬಸಿರಿಯು ಬಾಣಂತಿಯು ಬೇನೆವಡೆದರ|ಹಸುಮಕ್ಕಳ ಹಯನುಗಳ ॥
ಬಸವಳಿಸದೆ ಬಳಲಿಸದೆ ಬಯ್ಯದೆ ಬಗೆ|ಯೊಸೆದು ಚಿತ್ತವೊಳೋವುವುದು॥

ನೀತಿವರ್ತನಗಳ ನಿಯಮಿಪ ಪಿರಿಯರ|ಮಾತುಗಳನು ಮನಗೊಳಿಸಿ॥
ಆತೆರವೊಳು ನಡೆವನಿಯೊಳಧಿಕವಿ|ಖ್ಯಾತಿವಡೆವುದು ಕಾಂತೆಯರು ॥
ತಪೆಯದೆಳವೆಯೊಳು ತಂದೆತಾಯಿಗಳಿಗೆ|ನಡುವರೆಯದೊಳು ನಲ್ಲನಿಗೆ॥

ಕಡುಮುದುಪಾದಕಾಲದೊಳು ತನ್ನಣುಗರಿ|ಗಡಕವೆನಿಪುದಬಲೆಯರು
ಈರೀತಿಯೊಳರ್ಪದೇಕಪತ್ನಿಯರಿಗೆ|ನಾರಾಯಣನಾಜ್ಞೆಯೆಂದು ॥
ಆರೈದು ತಿಳಿದಾಚರಿಪ್ಪರೊಡನೆ ಕೈ|ಸೇರುವುದಿಷ್ಟಸಿದ್ಧಿಗಳು॥ ೪೭
ಅರಿತಾಚರಿಸಿಯುಖಿಲಶಾಸ್ತ್ರತತ್ವವ|ನರಿಯದವರಿಗರುಹಿಸುತೆ ॥
ಮೊರೆವ ಸದ್ಗುರುಗಳ ಮೆಲ್ಲಡಿದಾವರೆ|ಗೆರಗಿ ಭಕ್ತಿಯನೆಸಗುವುದು ॥
ಕೇಳುದೇವತೆಗೆರಗದೆ ಕಿರಿಯರ ಮಾತ|ಕೇಳದೆ ಕೀಳಗಿಳಿಯದೆ॥
ಏಳುಲೋಕವ ಪೊರೆವೆಡೆಯೊಳಟ್ಟೋವುವ | ನಾಳುತನವನಾದ
[ರಿಪ್ಪುದು ॥೪೯

ಚೆನ್ನಿಗಚಿಕದೇವರಾಯನ ಸುಚಿಯ|
ಹೊನ್ನಮ್ಮನುಸಿರ್ದ ಕಬ್ಬದೊಳು ॥
ಉನ್ನತಿವಡೆದೊಗೆದುದು ನಾಲ್ಕನೆಯ ಸಂಧಿ।
ಸನ್ನುತಗುಣಸಂಬಂಧಿ ॥೫೦

—— ಐದನೆಯ ಸಂಧಿ. ——

ಅಮರ್ದಗತಿಸ ಸಮಯದೊಳಲ್ಲಿ ನೆನೆದಿ|ರ್ದಮರರಂತಚ್ಚರಿವಡೆಯೆ॥
ಕಮಲೆಗೆಮೆಯ್ಯನಿಂಬುಗೊಳಿಸಿದ ಪುರುಷೋ|ತ್ತಮನಡಿಗಾನೆರಗುವೆನು॥
ಕಡೆವುದನುಳಿದು ಕಾಡಿಹ ಬಿಡುಗಣ್ಣರ|ಗಡಣಂಗಳ ಕಡೆಗಣಿಸಿ ॥
ಒಡನೆ ನಾರಾಯಣನುರವ ಸೇರಿದ ಸಿರಿ|ಮಡದಿಯಡಿಗೆ ವಂದಿಪೆನು ॥೧
ತಂದೆತಾಯಿಗಳೊಡವುಟ್ಟಿದರತ್ತೆಮಾ|ವಂದಿರು ಸಕಲಬಾಂಧವರು ॥
ಕುಂದದೆ ನಲ್ವೆಂಡಿರ ಕೂರ್ತುಪಚರಿ|ಪಂದವನನುವದಿಸುವೆನು ॥೨

ಪೆಣ್ಣಪೆತ್ತವರ ಬಳಗ ಬಳೆವುದು ಬೇಗ।ಪೆಣ್ಣುಪೆತ್ತವರು ಪೆರ್ಚುವರು ‖
ಪೆಣ್ಣುಪೆತ್ತುದರಿಂದೆ ಪೆಸರೆನಿಸಿತು ಮಿಗೆ।ಬಣ್ಣವೇರಿತು ಪಾಲ್ಗಡಲು ‖೪

ಪೆಣ್ಣಿಂದೆ ಪೆರ್ಮೆಗೊಂಡನು ಹಿಮವಂತನು।ಪೆಣ್ಣಿಂದೆ ಭೃಗು ಪೆರ್ಚಿದನು ‖
ಪೆಣ್ಣಿಂದೆ ಜನಕರಾಯನು ಜಸವಡೆದನು।ಪೆಣ್ಣ ನಿಂದಿಸಲೇಕೆ ಪೆರರು ‖

ಸಿರಿರಾಣಿಯು ಸೀತೆಯು ರುಕ್ಮಿಣಿಯು ಶ್ರೀ।ಹರಿಯೊಡನೊಂದೆ ಹಂತಿಯೊಳು ‖
ಇರಿಸಿ ಪೂಜೆಯನೊಡರಿಸುವರು ಪಿರಿಯರು । ಪರಿಕಿಪೊಡಿವರು ಪೆಣ್ಣಳ್ಸೆ ‖೬

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ।ಪೆಣ್ಣಲ್ಲವೆ ಪೊರೆದವಳು ‖
ಪೆಣ್ಣುಪೆಣ್ಣೆಂದೇತಕೆ ಬೀಳುಗಳೆವರು।ಕಣ್ಣುಕಾಣದ ಗಾವಿಲರು? ‖೭

ಕುವರನಾದೊಡೆ ಬಂದ ಗುಣವೇನದರಿಂದೆ।ಕುವರಿಯಾದೊಡೆ ಕುನ್ದೇನು
ಇವರಿರ್ವರೊಳೇಳಿಗೆವಡೆದವರಿಂದ।ಸವನಿಪುದಿಹಪರಸೌಖ್ಯ ‖೮

ಕುಲಪುತ್ರನೋದಿ ತಿಳಿದು ನಡೆದಲ್ಲದೆ।ಕುಲವನುದ್ಧರಿಸಲರಿಯನು ‖
ಕುಲಪುತ್ರಿಯೊಳುಗುವವರನಿಗಿತ್ತವಾತ್ರಕೆ। ಕುಲಕೋಟಿಯನುದ್ಧರಿಪಳು ‖೯

ಬಸಿರೊಳೊಗೆದು ಬಳೆದೇಕರೀತಿಯೊಳೆಲ್ಲ।ಸಿಸುಗಳರ್ದೊಡಮೇನು ಬಳಕ ‖
ಒಸೆದಿತ್ತುದನೊಡಬಡುವಳು ಪೆಣ್ ಗಂಡು।ಪಸುಗೆಗೊಂಬನು ಒಲ್ಮೆಯೊಳು ‖೧೦

ಪುಟ್ಟಿದ ಮನೆಯೊಳು ಪೋರಿ ಪುರುಳುಗೊಂಬ।ದಿಟ್ಟ ಗಂಡುಗಳಂತಿರಲಿ ‖
ಕೊಟ್ಟುದರಿಂದೆ ತಣಿವ ಕುವರಿಗೆ ಮನ।ಮುಟ್ಟಿ ಕೊಡುವುದು ಕೋವಿದರು ‖೧೧

ಎನ್ನ ಪೆತ್ತವರಿವರೀಮನೆಯೊಡವೆಗಳೆನ್ನವೆಂದೆರವಿಲ್ಲದಿರ್ಪ ॥
ಕನ್ನೆಯನನ್ಯರಿಗೀವನ್ನೆವರಮುರೆ। ಮನ್ನಿಸೀವುದು ಮಮತೆಯೊಳು ॥
ಅರಿತು ನಿಟ್ಟಿಸೆಗುಡುಮಕ್ಕಳಿಂದತಿಶಯ। ಬೆರಕದೊಳೆಸೆವ ಪೆಣ್ಗಳನು॥
ಪೊರನೋಟಬದಿಂದೆ ನೋಡದೆ ಪೋಲೆನಿಸದೆ। ಮರುಕವೆರಸಿ ಮನ್ನಿ [ವುದು ॥೧೩

ಪಮುಳಗೊಳಸಿ ಪಲವಗೆ ಪಸವನಗಳ। ಪುದುಗಿಸಿ ಪೊನ್ನೊಡಿಗೆಗಳ ॥
ಮದುವೆಗೆ ನೆರೆದ ಪೆಣ್ಮಕ್ಕಳನಿಟ್ಟಪ। ರೆಡೆಗೊಳುವಂತೆಸಗುವುದು॥೧೪

ಸುಗುಣನಾವನು ಸುಚರಿತ್ರನಾವನು ಕಣ್ಗೆ। ಸೊಗಸುವ ಸೊಬಗನಾ [ರೆಂದು ॥
ಬಗೆದು ಭಾವಿಸಿ ಪೆಣ್ಣನೀವುದು ವಂಶದೊ। ಳೊಗೆಬೊಳುಗುವರನಿ [ಗೊಲಿದು ॥೧೫

ಅಲಿಗೆಯ್ಯದವಮತಿಯೆಸಗದ ವೈರವ। ಬಲಿಸದ ಬರಿದೆ ಪಳಿಯದ॥
ಕೊಲೆಚ್ಚೈಗಳಿಂದೆ ಕೋಟಲೆಗೊಳಸದ ಸ। ತ್ಕುಲಕೀವುದು ಕುವರಿಯನು॥
ಪಣದಾಸೆ ನಂಟುತನದ ಪತ್ತುಗೆ ನೇಹ। ದೆಣಿಕೆಗಳಿಂದೆದೆಗರಗಿ ॥
ಗುಣಜೌವನಕುಲರೂಪುಗುಂದಿದ ನಡೆ। ವೆಣಕೀಯಲಾಗದುಪೆಣ್ಣ॥೧೬

ಜಡನಿಗೆ ಜಾತಿಹೀನನಿಗೆ ಚಂಚಲನಿಗೆ। ಕಡುಮೂರ್ಖನಿಗೆ ಗಾವ್ಪನಿಗೆ॥
ಬಡತನದೊಳು ಬಲುಬವಣೆಗೊಂಬವನಿಗೆ। ಕೊಡಲಾಗದು ಕುವರಿಯನು॥
ಬಾಳ ಬದುಕೆ ತಣಿವಿಲ್ಲದ ತವ್ಮಂತೆ। ಬಾಳಲೆಳಸುವ ಬಾಲಕಿಯ ॥
ಬೀಳುಗುವರನಿಗೆ ಬೆಲೆಗೆಯ್ದರೆಂಬುದ। ಕೇಳೆ ಕಿವಿಯ ಮುಚ್ಚುವುದು॥
ತನ್ನ ಮನೆಯೊಳುಂಡು ತವರುಮನೆಯೆ ಸಂ। ಪನ್ನವಕ್ಕೆಂಬ ಪೆಣ್ಗಳಿಗೆ ॥
ಪೊನ್ನ ತೊಡಿಗೆ ಪೊಸದುಗುಲಂಗಳನಿತ್ತು। ಮನ್ನಿಸುವುದು ಮನ [ವರಿತು ॥೨೦

ಬಡವರಾವೆಮಗೆಲ್ಲಿ ಬಪ್ಪುದೊಡವೆಯೆಂದು।ಕಡುದೈನ್ಯವಾಡಿ ಕಳೆಯದೆ।
ಉಡವೆ ತೊಡವೆ ತಾವುಳಿದು ತನುಜೆಯರಿ।ಗುಡುತೊಡುವುಪವೆಗೊ
[ಡುವುದು ॥೨೧
ತನ್ನ ತವರುಮನೆಯುವರಿಸ್ತ್ರ ಪಿತೃಗಳ।ಪೊನ್ನಂದು ಒಗೆದು ಪೊಗಳುವ॥
ಕನ್ನೆಯರೊಳು ಕಡುಗೂರ್ಮೆಯನೊರಿಸಿ।ಪೊನ್ನರನ್ನದೊಳು
[ಪೂಜಿಪುದು ॥೨೨
ಪುಟ್ಟಿದಂದದೆ ಬಂದು ಪೊಕ್ಕಳೆಂದಣಾಗಿಯು।ನೆಟ್ಟನೆ ನಿಂದಿಸದಂತೆ॥
ಕಿಟ್ಟದ ಪಾಕೆಲೆಬೊತವೆಗಳನು ಕೈ।ಬಿಟ್ಟು ಕಾಡುವುದು ಬೇಸರದೆ॥
ಬೇಡಿಬೇಡಿದ ವಸ್ತುವ ಪೆಣ್ಮಗುವಿಗೆ।ನೀಡುವ ನೇಮಗಾರರಿಗೆ॥
ಷೋಡಶದಾನದ ಫಲ ಸುಲಭದೊಳು ಕೈ।ಗೂಡುವುದೆಂಬರುತ್ತಮರು॥
ಅನ್ನಪಾನದೊಳಾಭರಣವಸನದೊಳು।ಮನ್ನಣೆಯೊಳು ಮನವೊಲಿದು॥
ಕನ್ನೆರನ್ನೆಯರು ಪರಕೆಗೆಯ್ಯಲಾವ ನೆ।ಯುನ್ನತಿವಡೆದೊಪ್ಪುವುದು॥
ಅದರಿಂದೆ ಪೆಣ್ಮಕ್ಕಳನಾದರಿಪುದು।ಮುದವೇರಿಪುದು ಮನ್ನಿಪುದು॥
ಮದುವೆಮಂಗಲದೊಳು ಮನವೊಲಿದವರಿಗೆ।ಪೊದವಿಪುದುಚಿತವ
[ಸ್ತ್ರವನು ॥೨೩
ಸಣ್ಣಬಣ್ಣದ ಸೀರೆಯ ಪೂಸರವನಿಂ।ಬಣ್ಣಪಲವು ಭಕ್ಷ್ಯಗಳ॥
ಕಣ್ಣವಿಡಿದುದನು ಕಳುಹಿಸುವುದು ತನ್ನ।ಪೆಣ್ಣಿರ್ದ ಮನೆಗೆ ಬೇ
[ಸರದೆ॥೨೩
ಅಂದಂದಿಗೆ ನೆನನೆನದು ನೇಹದೊಳೆನ್ನ।ಕಂದನೆಂತಿರ್ದಪಳೆಂದು॥
ಬಂದ ಬಂದವರ ಬಣ್ಣಿಸಿ ಕೇಳುವುದು ಮನ।ದಂದು ಮನಿಸರನಟ್ಟು
[ವುದು ॥೨೪
ಬರಿಸುವುದೊಂದೂರೊಳಿರ್ಪಳನುಪಚಾರ।ವೆರಸಿ ಪಾರಣೆಪರ್ವಗಳಿಗೆ॥
ನೆರೆಯೂರೊಳು ಬಾಳುವ ನಿಜತನುಜೆಯ।ಕರೆಯಿಸುವುದು ಕಾಲ
ವರಿತು ॥೨೫

ತುದೆಯ ಮನೆಯಿಂದೆ ತಂದೆನೀವಸ್ತುವ|ನೆಂದೇಳಿಗೆಗೊಳುವಂತೆ ॥
ಬಂದ ಬಂದಾಗ ಬರಿವೆಕಳುಪದೆ ಪೆಣ್ಣಿ|ಗೊಂದರೆಯೊಡವೆಗುಡುವುದು ॥
ಮಂದಿವಾಳದೊಳಾಣ್ಮನ ಮೇಗಣ ದೂರ|ತಂದ ತನ್ನಣುಗಿಯನೊಡನೆ ॥
ಹಿಂದುಮುಂದೆಣಿಸದೆ ಹೀಯಾಳಿಸಿ ಮಿಗೆ|ನಿಂದಸಿನೀಕರಿಸುವುದು ॥ ೪೭

ಅವಿವೇಕದೊಳು ತನ್ನಾಣ್ಮನ ನುಡಿಗೇಳ|ದವಮತಿಗಳಸಾಚರಿಪ ॥
ಕುವರಿಗೆ ಸಲಿಗೆಯ ಕೊಟ್ಟುಕೊಬ್ಬಿಪ ತವ|ರವರ್ಗೈಸೆ ಪೆಣ್ಗಾಗದವರು ॥
ಮುಳಿವ ಮೋಡಿಯೊಳಿರ್ಪ ಮೊನೆಮಾತಾಡುವ|ಪಳಿವ ಪಲವು ಮಾ
[ಡುಗಳಿಗೆ ॥
ಅಳಲುವ ಮನವನಡಗಿಸಿಯಣುಗಿಗಾಗಿ|ಯುಳಿಯನಿಗಳುಚಿ ನಡೆವುದು ॥
ಪೆತ್ತ ಪೆಣ್ಮಗಳ ಪೆರ್ಚಿಸಿ ಮೈಮರೆದು|ನ್ಮತ್ತೆಯಪ್ಪಂತೆ ಮನ್ನಿಸದೆ ॥
ಸುತ್ತುಗೆಲಸವ ಕಲಿಸಿ ಗೈಸುವುದೊಡ|ನೊತ್ತಿ ನುಡಿವುದುಚಿತವನು ॥
ಕಂದ ಕೇಳನಘನು ಕನಲಿ ಕಾಡಿದೊಡದ|ರಿಂದೆ ನೀನಳವಳಿಯದಿರು ॥
ಒಂದಡಿಯಿಂದೊದೆದೊಡಮದನುಳಿದುಮ|ತ್ತೊಂದಡಿವಿಡಿದೊಡಬಡಿಸು ॥
ಇನಿಯನೊಲಿದು ನಿನ್ನಿಚ್ಛೆಯರಿತು ಮಿಗೆ|ಸನುಮಾನಗೈದು ಸಂತರಿಸೆ ॥
ಎನಗೊಳಗಾದನೆಂದೆಣಿಸಿ ಮೈಮರೆಯದೆ|ಯನುನಯದಿಂದನುಸರಿಸು ॥
ಕುಲಕೆ ಪೊರಗು ಕೊಟ್ಟ ಪೆಣ್ಣೆಂಬುದನರಿ|ತೆಲೆಗೆ ನೀನೆಮ್ಮ ಬಯಸದೆ ॥
ಅಲೆಗೆಯ್ವನಲ್ಲನೊಳಡಕವಾಗಿರ್ದೆಮ್ಮ|ಕುಲದೇಳಿಗೆಯ ಕೊನರಿಡಿಸು ॥
ಮುಳಿಸು ಬೇಸರು ಮೋಡಿಯಲಸಿಕೆ ಮೊನೆ ಮನ|ದಳಲಂಜಿಕೆ ಮರು
[ಕದೊಳು ॥
ತಿಳಿತಿಳಿದಿನಿಯನಿಂಗಿತ ಭೇದಂಗಳ|ನಳುಕಿಯಳುಕಿಯನುಸರಿಸು ॥ ೪೮

ಕನಸಿನೊಳಾದೊಡಮಿದಿರುಮಾತಾಡದೆ|ಕನಲದೆ ಕಲಹವೆಸಗದೆ ॥
ಮನೆಯೊಳಗಿರುವೆಮ್ಮ ಮಂದೆಗೆ ಬರಿಸದೆ|ಮನದನ್ನನ ಮನವೊಲಿಸು ॥

ಅತ್ತೆಮಾವಂದಿರಿಗಳುಕಿಯಕ್ಕರುಗೂಡಿ।ಚಿತ್ತವರಿತು ಸೇವೆಯೆಸಗು॥
ಅತ್ತಿಗೆನಾದನಿಯರನನುವರ್ತಿಸು।ಪೆತ್ತವರನು ಪೆರ್ಮೆಗೊಳಿಸು ॥೪೦

ಸವತಿಯರೊಳು ಸಂಗಾತಿಮೆಗಳವೋಲು।ನೆವವಿಲ್ಲದ ನೇಹವೆಸಗು ॥
ಅವರವರಂತಿಂತು ನುಡಿದ ಚಾಡಿಗಳಿಗೆ।ಕಿವಿಗಳನಿತ್ತು ಕೇಳದಿರು ॥೪೧

ಮಗಳೆ ನಿನ್ನಿನಿಯನ ಮನೆಯವರೆಮ್ಮೊಳು।ಪಗೆಸಾಧಿಸಿ ಜೈದೊಡದಕೆ॥
ಬಗೆಯೊಳು ತಾಳುಮೆಯನು ಬಲಿದವರೊಳು।ಮೊಗವಂಟದೆ ಮೋನ
[ವೆಸಗು ॥೪೨

ಪೇರೈಸಿರಿಯಿಂದ ಪಿಗ್ಗಿ ಜೆರತು ನಿನ್ನ।ಮೇಗೆ ತಾರೆಯ ಮೀರದಿರು ॥
ಸೇರಿಯೂಳಗವೆಸಗುವ ಸೇವಕರನು।ಸೈರಣೆಗೊಂಡು ಸಂತರಿಸು ॥೪೩

ಎಂತು ನಡೆದೊಡಿನಿಯನಿಗಿಂಬುದೋರುವು।ದೆಂತು ನಡೆದೊಡೇಳ್ಗೆಯ
[ಹುದು ॥
ಎಂತು ನಡೆದೊಡೆಲ್ಲರುಮಿದು ಲೇಸೆಂಬ।ರಂತಿರು ಸಂತೋಷದೊಳು॥೪೪

ಇಂತು ಪೆಣ್ಮಕ್ಕಳಗೆದೆಯೊಳು ನೆಲೆಗೊಳು।ವಂತೆ ಬುದ್ಧಿಯನು ಪೇ
[ಳುವುದು ॥
ಪಿಂತಣ ನಲ್ವೆಂಡಿರ ಪೆರ್ಮೆಗಳನೋ।ರಂತೆ ಬಣ್ಣಿಸಿ ಪೊಗಳುವುದು ॥

ಅಣ್ಣತಮ್ಮಂದಿರನಿಬರೊಡವುಟ್ಟಿದ।ಪೆಣ್ಣನು ಪೇರುಮೆಗೊಳಿಸಿ ॥
ಬಣ್ಣಬಂಗಾರವಬಗೆಬಗೆಯಿಂದಿತ್ತು।ತಣ್ಣನೆ ತಣಿಸಿಬಾಳುವುದು॥೪೬

ಪಿರಿಕಿರಿಯೆಯ್ದೆಯ್ದೆ ಪಿರಿಯ ಕಿರಿಯವ್ವೆಯ।ರೆರೆಹೊರೆಯನಿತನೆಣಿಸದೆ ॥
ಪರಮವಾತ್ಸಲ್ಯವ ಪವಣಿಸಿ ಪೆಣ್ಗಳ।ಪೊರೆವುದೌರಸಪುತ್ರಿಯಂತೆ॥

ಸೋದರಮಾವಂದಿರು ಸೊಸೆಯರಿಗೆ ಬೇ।ಕಾದ ವಸ್ತುವ ಕೈಯೊಡನೆ॥
ಆದರದಿಂದಳವಡಿಪ್ಪುದಲಸದೆ ಸಂ।ಪಾದಿಪ್ಪುದಿಹಪರಗಳನು ॥೪೮

ತಂದೆಯೊಡನೆ ತಾಯೊಡನೆ ತನ್ನೊಡನೆಯು।ವೊಂದು ಬಸಿರೊಳೊಗೆ
[ದವರು ॥

ಕುಂದದೆ ಬಾಳುವ ಕುವರಿಗೆ ಕುರುಪುಗೊಂ|ಡೊಂದರೆಯೊಡವೆಗೊ
[ಡುವುದು ॥೪೯
ಕುವರಿಯನಿಂತು ಕೂರ್ಮೆಯೊಳು ಸಲಹಿ ಮ|ತ್ತವಳನಿತ್ತೊತ್ತಳು
[ಗುವರನಿಗೆ ॥
ಸವೆಯದ ಧರ್ಮವ ಸಂಪಾದಿಸಿ ಮಾ|ಧವನ ಮನವ ಬರಿಸುವುದು ॥೫೦

ಚೆನ್ನಿಗಚಿಕದೇವರಾಯನ ಸಂಚಿಯು ।
ಹೊನ್ನಮ್ಮನುಸಿರ್ದ ಕಬ್ಬದೊಳು ॥
ಉನ್ನತಿವಡೆದೊಪ್ಪಿದುದೈದನೆಯ ಸಂಧಿ ।
ಸನ್ನುತಗುಣಸಂಬಂಧಿ ॥೫೧

## — ಆರನೆಯ ಸಂಧಿ —

ಅವನಿಗಿಳೆಯುಮಾಗಸಮುಮಳತೆಗೊಳು|ವಾವೇಳೆಯೊಳಡಿಗಳಗೆ॥
ಪಾವುಗೆಯಂತಳವಟ್ಟು ತೋರಿದವಾ|ದೇವನಿಗಾನು ವಂದಿಪೆನು ॥ ೧
ಕಡಲೆಡೆಯೊಳು ಮಲಗಿದ ನಾವಳಗಾಗಿ|ಕಡಲ ಕಡೆದು ಬಳಲಿದನು ॥
ಕಡಲೊಳು ದಾರಿಗೈದನು ಶೌರಿಯಾಸಿರಿ|ಮಡದಿಯಡಿಗೆ ವಂದಿಪೆನು॥
ಎಳಜೌವನದೊಳೆಡೆಜವ್ವನದೊಳು ಮ|ತ್ತಿಳಿವ ಜವ್ವನದೊಳನಿಯಳ॥
ಒಳಗರಿತುಪಚರಿಸುವ ನಲ್ಲನಿಗವ|ಳೊಳಗಪ್ಪ ಬಗೆಯ ಬಣ್ಣಿಪೆನು ॥
ಎರವೆಳ್ಳೆನಿತಿಲ್ಲದೋರ್ವರೊರ್ವರೊಳೊಡ|ವೆರೆದಿರ್ಪ ಸತಿಪತಿಗಳಿಗೆ ॥
ದೊರಕೊಂಬುದು ಸಂಸಾರಸುಖದ ಸುಗ್ಗಿ|ಪರದೊಳಾನಂದ ಪರ್ಬು
[ವುದು ॥೪
ಪತಿಸತಿಯರ ಸೌಹೃದದಿಂದೆ ಸಂಸಾರ|ವತಿಶಯವಡೆದು ತೋರುವುದು॥
ಇತರೇತರವೈರದಿಂದಿರ್ಪರಿಗೆ ದು|ರ್ಗತಿಯಂತೆ ಕಂಗೊಳಿಸುವುದು ॥೫

ಬಳತೋಟಯೊಡರಿಪ ಗಂಡಪೆಂಡಿರ ಮನೆ|ನೆಳಲ ಸೇರರು ನೀತಿವಿದರು॥
ಬಳಿಕ ಮಾತೇನಿನ್ನು ಬಸಿರೊಳು ಬಂದ ಮ|ಕ್ಕಳುಮಲ್ಲಗಳದು
[ನಡೆವರು ॥೬

ತೋಟಗೊಳುವ ದುಷ್ಟದಂಪತಿಗಳು ಬೂ|ತಾಟಗಳಿಂದನುಗೆಟ್ಟು॥
ಊಟನಿದ್ದೆಗಳೊಂದರೊಳು ಸುಖವಿಲ್ಲದೆ|ಕೋಟಲೆಗೊಂಡು ಕು
[ಗ್ಗುವರು ॥೭

ದಂಪತಿಗಳ ಪಗೆತನದಿಂದಿರ್ವ್ವರ|ಪೆಂಪಿನ ಬೇರು ಪರಿವುದು ॥
ಸೊಂಪುಗೆಡುವುದು ಸೊಬಗು ಸಂಸಾರದ|ಜಂಪು ಸಡಲಿ ಜಾರುವುದು॥

ಕಡುಮುಳಿರುಕತನದೊಳು ಕಡೆಗಣಿಸುವ|ಬಿಡುನುಡಿಗಳ ಬಿತ್ತರಿಸುವ॥
ಬಿಡದೆ ಕಾಡುವ ಗಂಡಪೆಂಡಿರನೇತಕೆ|ಪಡೆದನಕಟ ಪದ್ಮಭವನು ॥೯

ಒರ್ವರೊರ್ವ್ವರನೊಡಿಬಡದೊಡಬರಿಸದ|ಗರ್ವಿತ ದಂಪತಿಗಳನು ॥
ಇರ್ವರನಿಳೆ ನುಂಗದೆ ಪೊರುವದರಿಂದೆ|ಸರ್ವಂಸಹೆಯೆನಿಸುವುದು ॥೧೦

ತಿಳಿವದರಿಂದಿನಿಯರು ದಿಟ್ಟವೆಂಡಿರ|ಬಳಸಂದೊಡಬಡಿಸುವುದು ॥
ತಿಳಪುವುದೆದೆಗೊಳಸುವುದಿಂಪುದೋರುವು|ದೊಳಗುಗ್ಗೈದೊಂದು
[ವೆರೆವುದು ॥೧೧

ಒಲುಮೆಯನೊಳಕೊಂಡು ನಾಣ್ಚುಯೊಲಿಯದಂತೆ|ಚಲಪೋರುವೆಳ
[ಜವ್ವನದ ॥
ಕುಲಸತಿಯೊಳು ಕೋಪಿಸದೆ ಕೋಟಲೆಗೊಳ|ದಲಸದೆಯನುಸರಿಸು
[ವುದು ॥೧೨

ಏನೆಂದರಿಯದೆಳಮೆಯೊಳನಿಯಳಭಿ|ಮಾನಗೊಂಡಿರೆ ಮಚ್ಚರಿಸದೆ ॥
ಮೋನದೊಳರದೆ ಮೋಡಿಯ ಕಾಣಿಸದೆ ಸ|ನ್ಮಾನದಿ ಮನಗರಗಿಪುದು॥
ನಲ್ಲನಿಗೊಲಿದು ನಾಣ್ಚುವ ಮುದ್ದುವೆಣ್ಣನ|ಮೆಲ್ಲದೆ ಕಲ್ಲದೆ ಯೆನಿಸೆ॥

ಬಲ್ಲವನವಳ ಬಲುಮೆಗೆಯ್ದು ಬಳಲದೆ|ಚೆಲ್ಲವಾಡುವುದು ಜಾಣ್ಮೆಯೊಳು
ನಿಟ್ಟಿಸೆ ತಲೆವಾಗುವ ನೇಹಮೊಳುಮನ|ಮುಟ್ಟಿ ಮರಳಿ ನಿಟ್ಟಿಸುವ॥
ದಿಟ್ಟಿದಿಟ್ಟಿಗಳೊಡನೆರೆಯೆ ನಾಣ್ಚುವರೊಳ|ಗುಟ್ಟರಿತುಪಚರಿಸುವು
[ದು ॥೧೬

ಸೂರಲೆಳಸಿ ಮೇಲುವರಿವ ಮನದ ಮಿತಿ|ಮೀರಲಂಜಿಕೆಗೊಂಬ ಮೆಯ್ಯ
ಏರುವ ಪುರ್ಬನೆರಗುವೊಳು ಮೊಗದೆಳ|ನೀರೆಯ ನೆಲೆಯ ತಿಳಿವುದು॥
ಪೆರತೊಂದು ಪೆಂಪೇರುವೆರ್ದೆಯಮಿರುಪ ಮೆಯ್ಯ|ನಿರಿಗೊಂಬ ನಿಡು
[ವುರ್ವುಗಳ॥
ಕುರಿತುನೋಡುವ ನೋಟದ ಕೊಮರಿಯ ಬಗೆ|ಯರಿತೆರಕದೊಳೆರಗಿ
[ಪುದು ॥೧೭

ಕೊಂಕುಗಲಿವ ನೋಟಕುಣಿಯಲೆಳಸುವ ಪು|ರ್ಬಂಕೆಗೆ ನಿಲದಭಿಲಾಷೆ॥
ಬಿಂಕವಡೆವ ನಡೆವೆತ್ತೆಳವೆಂಡಿರ|ಸೋಂಕುವುದವರೊಲವರಿತು ॥೧೮

ಪೊದೆಯಲೆಳಸುವೆರ್ದೆ ಪುಸಿಯೆನಿಸುವ ನಡು|ಮುದವೇರುವ ಮನ
[ದಿರವು॥
ಪದುಳಗೊಳುವ ನಡೆ ಬಗೆಗೊಂಬ ಬಾಲೆಯ|ಬೆದರಿಸದೊಡಬಡಿಸು
[ವುದು ॥೧೯

ಸಣ್ಣೆನಿಪ ನಡುಸನ್ನಹವಡು ವೆರ್ದೆ|ಬಣ್ಣವೇರುವ ಬಡಬಾಸೆ ॥
ಬಿಣ್ಣಗೆಗೊಳುವ ಬಗೆಯ ಪೊಸವರೆಯದ|ಪೆಣ್ಣನೊಲುಮೆಯ ಪೆ
[ರ್ಚಿಪುದು ॥೨೦

ಗಾಡಿಗಲಿವ ನಡೆ ಗನ್ನವೇರುವ ನುಡಿ|ಮೋಡಿದೋರುವಮುದ್ದುನೋಟ॥
ಮೂಡುವ ಲಜ್ಜೆಯೆಸೆವ ಮುದ್ದುವೆಣ್ಗಳ|ನೀಡುಗೊಳುವುದಿರವರಿತು॥
ಇಂಗಿತಗಳನಿದಿರಿಡಲೆಳಸುವ ನೋಟ|ವಂಗಹಾರದೊಳೆಸೆವಂಗ॥
ವ್ಯಂಗ್ಯವ ಕಲಿವೊಳ್ನುಡಿ ಬಗೆಗೊಳೆ ಕೋಮ|ಲಾಂಗಿಯ ಕೂರ್ತೆರ
[ಗಿಪುದು ॥೨೧

ಗಲಗೆಸಗದೆ ಗಾಬರಿಗೊಳಸದೆ ಮಿಗೆ।ಕಲಹವ ಗಂಟುವಡಿಸದೆ ॥
ಬಲುವೆಗೆಯ್ಯದೆ ಬಾಲೆಯ ಬಣ್ಣವಾತಿನಿಂ।ದೊಲಿಸಿಯೊತ್ತಿಗೆ ಬರಿ
[ಸುವುದು ॥ ೨೩

ನಸುನಾಣ್ಬವೆಳವೆಂಡಿರ ನಲವೇರಿಸಿ।ಬಸಗೆಯ್ಯದೆ ಬಲ್ಮೆದೋರೆ ॥
ಪೊಸಪೂವಸರಗೆಯ್ದು ಮುಡಿಯದೆ ನಲಿಗಿಸಿ।ರಸದೆಗೆವೆಸಕವೆ
[ನಿಪುದು ॥ ೨೪

ಬೆದರುವ ಮುದ್ದುವೆಣ್ಣಿಗೆ ಭೀತಿಗಳೆವಂತೆ।ಪದುಳಗೆಯ್ಯದೆ ಬಲ್ಮೆ
[ದೋರೆ॥
ಸೊದೆಯುಂಡು ಸೊರ್ಕುವ ಜೊನ್ನವಕ್ಕಿಗೆ ಬಿಸು।ಗದಿರನೂಡುವ
[ಗೈಮೆಯಂತೆ ॥ ೨೫

ಅರಿಯದ ಪೆಣ್ಣನಾದರಿಸಿಯಂಜಿಕೆಗಳ।ಪರಿವುಗೈಯದೆ ಬಲ್ಮೆದೋರೆ॥
ತರಿಸಂದು ಮುಳಗೆಬಾಯ್ದೆರೆವ ಚಾದಗೆಯೊಳು।ಬರಸಿಡಿಲೆರಗಿತೆಂಬಂತೆ॥

ಮುಗುದೆ ನಾಚಿಕೆಗೊಳೆ ಮುದ್ದಿಸಿ ತಿಳುಪದೆ।ಪಗೆಸಾದಿಸಿ ಬಲ್ಮೆದೋರೆ॥
ಉಗುರೊಳು ಬಾಜಿಪ ಬೀಣೆಗೊನಕೆಗೊಂಬ।ಬಗೆಯೆನಿಪುದು ಭಾವಿ
[ಪ್ರೌಢೆ ॥ ೨೭

ಎರಗಿಯೆರಗದೆಳವೆಣ್ಣನೆರಗಿಸದೆ।ಬರಿದೆ ಮುನಿದು ಬಲ್ಮೆದೋರೆ ॥
ಎರೆವ ತಣ್ಣೀರನೆಳಸುವೆಳವಳ್ಳಿಗೆ।ತರಿಳಗೆಂಡವ ತಳವಂತೆ ॥ ೨೮

ತರತಮಭಾವವರಿತು ತರುಣಿಯೊಳೊಡ।ವೆರಸಿ ಬಿನದವೆಸಗುವುದು ॥
ತರವರಿಯದೆ ತಲೆಯೊಳು ಪೊತ್ತು ಲಾಲಿಸೆ।ಪರಿಭವಗೈದು ಪಳವಳು॥

ತಿಳಿಯದಿನಿಯಳನುವನು ತೀವರವ।ಟ್ಟಳವಳದಾರಿಪರಿಯದೆ ॥
ಒಳಗರಿತೊಯ್ಯನೊಯ್ಯನೆ ಸೇರುವಿನಿಯನ।ಬಳಸಲುವರು ಬಾಲೆ
[ಯರು ॥ ೩೦

ಎರವಿನಿತಿಲ್ಲವೆಂತೆಳವರೆಯದ ಪೆಣ್ಣ।ಸರಿಗೊಂಡು ಸರಸವಾಡುವುದು॥

ಸರಿಯಲ್ಲಿಂದುಳಿದಿರೆಮರವಡುವಳು।ಮರದ ಬೊಂಬೆಯುವೂಟದೊಳು॥
ಒತ್ತಿಗೆ ಬರಿಸುವುದೊವ್ಮೆಮ್ಮೆ ಬಿನದವಾ।ದುತ್ತ ಭೀತಿಯ ಬಿಡಿ
[ಸುವುದು॥
ಮತ್ತೆ ಮೆಯ್ವಳಿಯೊಳು ಮನ್ನಿಸುವುದು ಚಿತ್ತ।ವೃತ್ತಿಯ ಸೆರೆಯ
[ಪಿಡಿವುದು ॥ ೨೦

ಬಿನದ ವಾತನು ಬೆಸಗೊಳೆ ಪೆರಸಾರದೆ।ಮುನಿಯದೆ ಮೋಡಿಯೊಳರದೆ॥
ಇನಿಸು ನಾಚಿಕೆಗೊಂಡೆರಗಿದ ನುಣ್ಮೊಗ।ದಿನಿಯಳನೆದೆಗರಗಿವುದು॥ ೨೧

ಮುಂಜರಗನು ಪಿಡಿದೊಡನೆ ಬಾಗಿದ ಮುಖ।ಕಂಜದ ಪದುಗುವೊಡಲಿನ॥
ಅಂಜುವ ಮನದೆಳವರೆಯದ ನೀರೆಯ।ನಂಜಿಸದನುಸರಿಸುವುದು ॥ ೨೨

ಸರಸವೆಸಗಿ ಕೈಸಾರ್ಚಿದೊಡನೆ ಮಿಗೆ।ಮೊರೆದೇಳುವ ಮೈನವಿರ ॥
ಮುರಿಗೊಳುವಂಗದ ಮೊಳೆವ ಬೆಮರ ಕುಲ।ತರುಣಿಯ1ನೆದೆಗರಗಿವು
[ದು ॥ ೨೩

2 ಒದವಿ ಕೈಸೋಂಕಿದೊಡನೆ ಹದುಗುವ ಮೆಯ್ಯ।ಕದುಬುವ ಸಕಲ
[ಕರಣದ॥
ಬೆವರುವ ಕಣ್ಣಬೆಚ್ಚುವ ಮನದೆಳೆಯಳ।ನೆದೆಗರಗಿವುದಿಚ್ಚೆಯರಿತು॥
ಬಿಡಿಯೆ ಮುಂಗೈಯ ಜಡಿದು ಮುರಿದಲಸುವ।ಕುಡುವುರ್ಬುಗಳ ಗು
[ಡಿಗೊಳವ ॥
ಬಿಡುಬಿಡೆಂದೊವ್ಮೆಮ್ಮೆ ಬೆಚ್ಚಿ ಬಿನ್ನವಿಪೆಳೆ।ವಡದಿಯನೊಡಬಡಿ
[ಸುವುದು ॥ ೨೪

ಜಡೆಯ ತುಡುಕಿ ಪಿಡಿದೊಡನೆ ಘುರಿಕ್ಕೈನೆ।ಮಡಮುರಿದೆಸೆವೊಳುಮೊ
[ಗದ ॥
ಅಡವಾಯುವ ಕೂರುಸೋರ್ಬದ ಕೊಮರಿಯ।ನೊಡಬಡಿಸುವುದೊ
[ಲಿಸುವುದು ॥ ೨೫

---

1. ಕೊರ್ತೆರಗವುದು.　　2. ಒದರಿ.

ಸೋಂಕಲೆಳಸೆ ಸುರ್ಕುವ ಪೊಂಜೆಳೆಮೆಯ್ಯ|ಕೊಂಕಿದ ನಿಡುಪುರ್ವುಗಳ ॥
ಭೋಂಕನೇಳುವ ನವಿರುಗಳೆಳವರೆಯುದ|ಬಿಂಕಗಾತಿಯ ಬೆರಸುವುದು ॥
ಕನಲಿ ಕಲ್ಲೆರ್ದೆಯವಳೆಂದಲ್ಲಗಳೆಯದೆ|ಮನಮುರಿಯದೆ ಮಚ್ಚರಿಸದೆ|
ಅನುನಯವಚನದಿಂದನುಗೊಳಿಸುವನಿಗೆ|ಮನವೀವರೆಳಮಡದಿಯರು ॥
ನೆರೆಜೌವನದ ನೀರೆಯೊಳೆರವೆಣಿಸದೆ|ಮರೆಮಾಜೆ ಮನಮುರಿಯಿಸದೆ|
ಎರಕವೆರಸಿ ಮನೆವಾಳ್ತೆಯ ಭಾರವ|ಪೊರಿಸಿ ಪುದುಗುವಡಿಸುವುದು ॥
ಆಪ್ತೆಮಿತ್ರೆಯೆಂದಲ್ಲಗಳೆಯದೆ ತ|ನ್ನಾಯವನವಳಗರುಹದೆ ॥
ಆಯವೀಯವನವಳೊಡನಾಳೋಚಿಸಿ|ಕೈಯಡಕದೊಳಿರಿಸುವುದು ॥೪೦
ಎನ್ನವಳೆಂದೆರಕದೊಳೀವುದು ಪೊನ್ನ|ರನ್ನವ ಪೊಸದುಗುಲಗಳ ॥
ತನ್ನ ಶಕ್ತಿಯ ವಂಚಿಸದೆ ಮನದನ್ನಳ|ನುನ್ನತಿವಡಿಸುವುದೊಲಿದು ॥೪೧
ತನ್ನ ಪೆರ್ಚುಗೆಯೊಳು ಪೆರ್ಚುಗೆಗೊಂಡುರೆ|ತನ್ನ ಕುಂದಿನೊಳು ಕುಂದುವಳ ॥
ತನ್ನ ಮೆಯ್ಯೊಳಗರೆಮೆಯ್ಯೆನಿಸುವ ಮನ|ದನ್ನಳ ಮನ್ನಿಪುದೊಲಿದು ॥
ಉಡದಿರೆ ಮಡಿಯುಡದುಣದಿರೆ ಸವಿಯುಣ|ತೊಡವೆಯ ತೊಡದಿರೆ ತೊಡವೆ ॥
ಎಡೆವಿಡಿದಿನಿಯನಡಿಯ ನೆಳಲನು ಪಡಿ|ವಿಡಿವ ಮಡದಿಯ ಮನ್ನಿಪುದು ॥
ನಿನ್ನದೆನ್ನದು ನೀನಾನು ನಿನ್ನವರಿವ|ರೆನ್ನವರಿವರುಗಳೆಂದು ॥
ತನ್ನಿನಿಯಳ ತನ್ನೊಡವೆ ಮೈಬಳಗವ|ಭಿನ್ನಗೆಯ್ಯದೆ ಬೆರಸುವುದು ॥
ಮನದೊಳು ಮನ ನೆನಹಿನೊಳು ನೆನಹು ಮತ್ತೆ|ತನು ತನುವಿನೊಳೊಡವೆರಸಿ ॥
ಅನುಗೊಳೆ ಪಾಲುನೀರುಗಳಂತಿನಿಯನು|ಮಿನಿಯಳುಮೇಕವೆನಿಪುದು ॥೪೨

ಎಳಜೌವನ ಮೊದಲಿಂದುವರೆಗಮೆನ್ನ।ಬಳಸುಂದು ಬಾಳದಳೆಂದು ॥
ಇಳಜೌವನದೊಳಗೆರವು ದೋರಬೆಯೆಂದಿ।ನೊಳು ನೇಹವನೊಡರಿ
[ಪುದು ॥೪೯

ಎಣಿಕೆಗೈಪೊಡೆ ರೂಪು ಜೌವನಮಿರ್ದೇನು।ಗುಣಮಿದಲ್ಲ ಕುಲಸತಿಗೆ॥
ಗುಣಕರುಗೊಂಡಿರೆ ಕೂರ್ತಂದೆಂದಿಗು।ಮೆಣೆಬಿಚ್ಚದೇಕಮೆನಿಪುದು॥

ಎರವಿಲ್ಲದೇಕಮೆನಿಸಿ ಧರ್ಮದೊಳು ಸಂ।ಸರಿಸುವ ಸತಿಪತಿಗಳಗೆ॥
ಪುರುಷೋತ್ತಮನಡಿಗಳ ಪೂಜೆಯಿಂದಿಹ।ಪರಸುಖ ಪದುಳಗೊಳು
[ಪುದು ॥೫೦

ಚೆನ್ನಿಗ ಚಿಕದೇವರಾಯನ ಸಂಚಿಯ ।
ಹೊನ್ನಮ್ಮನುಸಿರ್ದ ಕಬ್ಬದೊಳು ॥
ಉನ್ನತಿವಡೆದೊಪ್ಪಿದುದಾರನೆಯ ಸಂಧಿ ।
ಸನ್ನುತಗುಣಸಂಬಂಧಿ ॥೫೧

## — ಏಳನೆಯ ಸಂಧಿ —

ವಂದಾರುಜನಕೆ ವಾಂಛಿತಫಲಗಳ ನೀವ।ಮಂದಾರತರುಗೆ ಮಾಧವಗೆ ॥
ಕುಂದುಗಳಲ್ಲದೆ ಗುಣಕರುಗೊಂಡ ಮು।ಕುಂದನಿಗಾನು ವಂದಿಪೆನು॥೧

ಪುರುಷೋತ್ತಮನೆದೆಯೊಳು ಪುದುಗಿರ್ದವ।ನಿರವರಿತೆಲ್ಲ ಲೋಗ
[ರೊಳು॥
ಕರುಣಾಮೃತವ ಕರೆಗಣ್ಮಿಸಿ ಪರಿಸುವ।ಸಿರಿರಾಣಿಯಡಿಯ ಸೇವಿಪೆನು॥

ನೆರೆಯೂರಿಗೆ ಪೋಗಿ ನಲ್ಲನೈತರದಿರೆ।ಬರವ ಬಯಸಿ ಬಸವಳಿವ ।
ವಿರಹಿಣಿಯರ ನಡತೆಯ ಬಿತ್ತರಗಳ।ನೊರೆವನುಚಿತಮೆಂಬಂತೆ ॥೨

ಸೋಗೆ ಮುಗಿಲ ಸೂರ್ಯನ ಸರಸೀರುಹ।ಸಾಗರವೇಲೆ ಚಂದ್ರಮನ ।
ಕೋಗಿಲೆ ಸುಗ್ಗಿಯ ಕೂರ್ಪಂತೆ ಸತಿಯನು।ರಾಗದಿನಿಯನ ಜಾನಿ
[ಪಳು ॥೪

ನೆನೆವಳವನ ನೆರೆಸೊಗಸೊಳುವಗೆಗಳ|ನೆನೆವಳವನ ಮೈಸಿರಿಯಾ ॥
ನೆನೆವಳವನ ನೇಹದೆಸಕದಿರವನಿಂತು|ನೆನನೆನದಿಂಬುಗೊಳುವಳು ॥೬

ದೇವರಿಲ್ಲದ ದೇಗುಲದ ಬಿತ್ತರದಂತೆ|ಭೂವರನಿಲ್ಲದೂರುತೆ॥
ಜೀವಿತೇಶ್ವರನ ವಿರಹದೊಳು ಸೆಜ್ಜೆಯ|ಭಾವಿಸಿ ಬಣ್ಣಗುಂದುವಳು॥

ಕೆಲದೊಳು ಕೆಳದಿಯರಿರೆ ಸೈರಿಸದೊಂದು|ಕೆಲಸದ ನೆವದಿಂದೆ ಕಳುಪಿ॥
ಒಲಿದೋಪನೊಳುಗೈತದೊಪ್ಪವ ನೆನೆನೆನೆ|ದಲಸಿ ಮೈಮುರಿದೊರಲುವಳು॥೭

ತಲೆವಾಗಿಲೊಳು ದಾರಿಗರ ನೋಡಲೆಳಸದೆ|ನೆಲೆವಾಡವೇರಿ ನಿಟ್ಟಿಸದೆ ॥
ಒಲಿದಿನಿಯನ ನಲ್ವಗೆಯ ನೆನಹಿನೊಳು|ನೆಲೆನಿಂದು ನೇಮಗೊಳುವಳು ॥೮

ಪರಿಪರಿಯುಡೆತೊಡವುಗಳ ಪೂಸರಗಳ|ಪರಿಮಳದಣ್ಪ ಬಯಸದೆ ॥
ಗರತಿಯರಿದನುಳದಿರಲಾಗದೆಂಬಲಂ|ಕರಣಮಾತ್ರವ ಧರಿಸಿಹಳು॥೯

ಮಂಗಳಕರಮಾತ್ರವನಲ್ಲದೆ ಮಿಕ್ಕ|ಸಿಂಗರಗಳನು ಚಿಂತಿಸವೆ ॥
ಸಂಗಾತಿವೆಂಗಳ ಸರಸಭಾಷಣವ ಮ|ನಂಗೊಳಸದೆ ಮರುಗುವಳು ॥೧೦

ಪಾಯಸಪರಮಾನ್ನದ ಪಲಬಗೆಯ ಕ|ಜ್ಜಾಯದ ಕಾಯಿಪಣ್ಣುಗಳಾ॥
ಬಾಯ ಸವಿಗೆ ಬಯಸದೆಯನ್ನಪಾನದಿ|ಕಾಯಧಾರಣೆಯೆಸಗುವಳು॥೧೧

ಮನೆ ಮಕ್ಕಳುಮನೆವಾರ್ತೆಯೊಳು ತನ್ನ|ಧನಧಾನ್ಯದಾಯಬೀಯದೊಳು ॥
ತನುವಿನಾರೈಕೆಗಳೊಳು ತಾನೆರಗದ|ಮನದಿಂದೆ ಮರುಳೆನಿಸುವಳು॥೧೨

ಎನ್ನತನ್ನವರೆಂದವರಿವರನು ಮಿಗೆ|ಮನ್ನಿಸಿ ಮನೆಗೆ ಬರಿಸದೆ ॥
ಮನ್ನಿಸಿ ಕರೆವರ ಮನೆಗೆ ಪೋಗದೆ ಮನ|ದನ್ನನ ನೆನಹಿನೊಳಿಹಳು ॥

ಎಡಬಲದವರುತಿಂತು ನುಡಿವರೆಂದು|ತಡೆದು ತನ್ನಿಚ್ಛೆಯೊಳಿರದೆ ॥
ಎಡೆವಿಡದಿನಿಯನ ನೆನೆದು ನೇಮದೊಳಿರ್ದ|ನುಡದಿಗೆ ಮತ್ತೆಣೆಯುಂಟೆ॥

ನಗುವರು ನಗಲಿ ನಾಚುವರು ನಾಚಲಿ ಮಿಗೆ।ಮೊಗದಿರುಹುವರು ತಿ
[ರುಹಲಿ ॥
ಬಗೆಯುವವನು ಭಾವಿಪಳು ತನ್ನಿನಿಯನ।ನಗೆನೋಟನಡೆನುಡಿಗಳನು ॥
ನಿರಿಗೊಂಡ ಪುರ್ಬಿನ ಸೆಲೆನಿಂದ ನಿಡುಗಣ್ಣ।ನರಿಕೆಗುಂದಿದ ಕರಣಗಳ॥
ಒರೆವಕಣ್ಣೀರೊಪ್ಪದಿಂದೊಳುಗೆಳದಿಗೆ।ಮರುಕವಮನಗೊಳಿಸುವಳು॥
ಕೆಂದಳಗೈದಳವೊಳಗಿಟ್ಟ ಗಲ್ಲದ।ಕುಂದಿದ ಮೊಗದಾವರೆಯಾ॥
ಸುಂವಣಿಸುವ ನಿಟ್ಟುಸಿರ ನೆಲೆಯೊಳ।ದ್ವಂದಗೆಡಿವಳಾಳಿಯನು ॥೧೭
ಕವಿವಕುರುಳಕಟ್ಟುಸಡಲಿಹ ಜೊಲ್ಲೆಹ।ಬೆವೆಯಿಕ್ಕದೆಸಳುಕಣ್ಣುಗಳ॥
ಸವೆಯದ ನೆನಹಿನ ಸೈಪಂ ಕೆಳದಿಗೆ।ಸವನಿಸುವಳು ಸುಕಟವನು ॥೧೮
ಪಡಿಮೊಗವೊಳು ನಿಂದು ಬಾಯಿಟ್ಟು ಕರೆಬೊಡ।ಮೊಡಲನಲಿಗಿಬೊ
[ಡಮುದಕೆ ॥
ಒಪನೆಚ್ಚರದೋಜೆಯಿಂದೆ ಕೆಳದಿಯರ।ಗಡಣವ ಕೈಗೆಡಿಸುವಳು ॥೧೯
ಎಲೆಯಕ್ಕ ನೀನೇತಕಿಂತು ಚಿಂತಿಪೆಯೆಂ।ಬುಲಿಗೇಳದೊಡನುರವಣಿಸಿ॥
ಕೆಲದಲ್ಲಿ ನಿಂದವರೊಳು ಕೋಪವೆಸಗುತ।ನೆಲೆಗೆಡಿಸುವಳು ನೇಹಿಗರಾ॥
ಎನ್ನಿನಿಯನ ಪಾದಸೇವೆಯಿಲ್ಲದೆ ನಾ।ನೆನ್ನೆಗವಿಂತಿರ್ಪೆನೆಂದು ॥
ತನ್ನೊಳುತಾನೆ ತವಕಗೊಂಬ ಸತಿಯ ಮ।ಹೋನ್ನತಿಗಿನ್ನೆಣೆಯುಂಟೆ॥
ಒಲಿದು ನಲ್ಲನ ವಿರಹವೊಳೊರಲುವ ಕುಲ।ಲಲನೆಯ ವಿರಹವೇದನೆಗೆ॥
ಪಲಬಗೆಯುಗ್ರತಪಂಗಳೀದಲ್ಲೊಂ।ದುಲಿವುವು ಮುನ್ನಿನೋದುಗಳು ॥
ಇರದೆಸಗುವ ದಾನಹೋಮನಿಯಮದಿಂದೆ।ಪರಿಹರಿಸದ ಪಾಪಗಳು ॥
ವಿರಹದ ತನಿಬೆಂಕಿಯಿಂದೆ ಬೆಂದಳಿವುದೆಂ।ದೊರೆವರಖಿಳವೇದವಿದರು ॥
ಈದೇಹದಂಡನವೈಸೆ ಪ್ರಾಯಶ್ಚಿತ್ತ।ವೇದವಿಹಿತಮಾರ್ಗದೊಳು ॥
ಆದಾರಿಯೊಳಾತ್ಮನಗಲೆ ಸಂಕಟಗೊಂಬ।ವೇದನೆಗೆಣೆಯಾವುದಿನ್ನು॥

ಬಸವಳಿದೊಡಲು ಹಾಸಿನೊಳೀಡಾಡುವ|ಳು ಸುರಸುರಿಂದೊರಲುವಳು ॥
ಮುಸುಕಿಡುವಳು ಮುದುಡುವಳು ಕೈಕಾಲ್ಗಳ|ಬಿಸುಸುಯ್ದು ಬೆಚ್ಚ
[ತೇಳುವಳು ॥೨೫

ಅರಿಯುವೆ ತನಿಗೆಂಡವ ಮೆಟ್ಟ ನಿಂದಂತೆ|ತುರುಚನ ಗಿಡು ಸೋಂಕಿದಂತೆ॥
ಬಿರುಬುಗೊಂಬಳು ಬೆದರುವಳಳಲುವಳು ಬೇ|ಸರುವಳು ಬೇನೆವಡೆ
[ವಳು ॥೨೬

ಒಂದರೆಗಳಿಗೆಯು ನೊಂದು ಬರಿಸದಂ|ತೊಂದು ಜಾವವ ಯುಗದಂತೆ॥
ಒಂದಿರುಳನು ಕಲ್ಪ ಕಾಲದಂತೆಣಿಪಳು|ಮುಂದುಗೆಡುವಳು ಮೋಹಿ
[ಪಳು ॥೨೭

ಬನದೊಳೆ ದೆಸೆಗೆಟ್ಟ ಪರಿಯಂತೆ ಕಳ್ತಲೆ|ಮನೆಯೊಳು ಕಣ್ದೆರೆವಂತೆ॥
ಇನಿಯನನಗಲಿ ತಾನಿರವುಗಾಣದೆ ಮಿಗೆ|ಯನುಗೆಡುತಳವುಗುಂದು
[ವಳು ॥೨೮

ಎಂದಿಗೆನ್ನಿನಿಯನನಿದಿರುಗೊಳುವೆನಿ|ನ್ನೆಂದಿಗೆ ಹತ್ತೆಸಾರುವೆನು॥
ಎಂದಿಗವನ ಪಡಿಮೊಗದೊಳು ಸಂದಪ|ನೆಂದೆಡೆವಿಡದೆ ಜಾನಿಪಳು॥೨೯

ಎಂದಿಗವನ ನುಡಿಗಳ ಸವಿಸವಿದಾ|ನಂದದೊಳಳ್ದು ತೇಲುವೆನು॥
ಎಂದಿಗೆನ್ನಿರವನವನಿಗಾನರುಹುವೆ|ನೆಂದು ಬಯಸಿ ಬಳಲುವಳು ॥೩೦

ಎಂದಿಗೆನ್ನೆದೆ ತಣಿವಂತೆಲ್ಲ ಸೇವೆಯ|ನೊಂದನುಳಿಯದೊಡರಿಪೆನು ॥
ಎಂದಿಗವನೊಳೊಡವೆರದೊಂದೆನಿಸುವೆ|ನೆಂದೆರಕದೊಳೆಣಿಸುವಳು॥೩೧

ಇಂದಿನೊಳೀಗಲೆನ್ನಿನಿಯನೈತರಬೇ|ಕೆಂದು ಕದುಬಿ ಕಾತರಿಸಿ ॥
ಮಿಂದು ಮಡಿಯನುಟ್ಟು ಮನೆಯ ದೇವರ ಬಲ|ವಂದು ನೋಂಪಿಯ
[ನೋನುವಳು ॥೩೨

ಅತ್ತಣದೆಸೆಯಿಂದೆ ಬೀಸುವೆಲರನೆಲ|ರೊತ್ತಿನೊಳೆಸೆವ ಸೂಸವವ ॥
ಸುತ್ತಿಸೂಸವವತುತ್ತುವ ತುಂಬಿಯ ಬೆಂ|ಬತ್ತಿ ಕೇಳುವಳವನಿರವ॥

ಬೆಸಗೊಂಬಳನಿಯನಾವೆಡೆಯೊಳಿರುವನಾ।ದೆಸೆಯಿಂದೆ ಬಂದ ಬಂದವರಾ॥
ಬೆಸಗೊಂಬಳು ಜೋಯಿಸರ ಜೋಗಿಪುರುಷರ।ಬೆಸಗೊಂಬಳು ಬಿಜ್ಜೆವಳರಾ ॥೩೪

ಬೆಸಗೊಂಬಳೆನ್ನ ವಲ್ಲಭನೆಲ್ಲಿದನೆಂದು।ಬೆಸಗೊಂಬಳೆಂತಿರ್ದನೆಂದು ॥
ಬೆಸಗೊಂಬಳೆಂದಿಗೆ ಬಂದಪನೆಂದಿಂತು।ಬೆಸಗೊಂಬಳು ಬೇಸರದೆ ॥೩೫

ಇಂದಿಗೀಪಗಲಿಗೀಜಾವಕೀಗಳಿಗೆ।ಬಂದಪನೆಂದವರುಸಿರೆ ॥
ಮುಂದಹಸಿತಮುಖದಿಂದೆ ಮನದೊಳಾ।ನಂದದಿ ನಲವೇರುವಳು ॥೩೬

ಉಕ್ಕಿಸುರಿವ ಸೊಗದಾಲಿನೀರ್ಪೊನಲಿಂದೆ।ಮಿಕ್ಕುಮೀರುವ ಸರದಿಂದೆ॥
ಸೊಕ್ಕುವಮನದಿಂದೆ ಸುತ್ತುಗೆಳದಿಯರ।ಬೆಕ್ಕಸಬೆರಗುವಡಿಪಳು॥೩೭

ಈಗಲೇ ಬರ್ಪನೆಂಬುದನಾಲಿಸಿ ತಲೆ।ವಾಗಿಲ ತೆರೆಯಲೆಳಸುತೆ ॥
ಬೇಗದೊಳವನ ಸೇವೆಗೆ ಬೇಕಾದುದ।ನಾಗಳೆಯನುಗೊಳಿಸುವಳು॥೩೮

ಮೊದಲೊಳು ಮುಂದುವರಿವ ನೋಟದಿಂದೊಡ।ನೊದಗುವ ಹರ್ಷಾಶ್ರುವಿಂದೆ ।
ಮುದದೊಳು ಮುರಿದೇಳುವ ನವಿರಿಂದೊಡ।ನಿದಿರುಗೊಳುವಳನಿಯನನು ॥೩೯

ಬಾಗಿಲ ಬಳಿಗೆ ಬಂದಪನೆಂಬುದುಮುದು।ರಾಗರಸದ ಲಹರಿಯೊಳು ॥
ಪಗ್ಗೈವೆನೆಂಬುದನರಿಯದವನಿಗಿದಿ।ರಾಗಿ ನಿಟ್ಟಿಸಿ ನಿಂದಿಹಳು ॥೪೦

ಪುಟ್ಟಿದುದಿಂದೆ ಪುರುಳುಗಾಣದವರು।ನೆಟ್ಟನೆ ನಿಧಿಯ ಕಂಡಂತೆ ॥
ಕಟ್ಟಿರಕದೊಳನಿಯನ ಕಾಣುತೆ ಮರ।ವಟ್ಟು ಮೈಮರೆತು ನಿಟ್ಟಿಪಳು॥

ಯೋಗದಶಾಪರಿಣತಿಯೊಳು ತನಗಿದಿ।ರಾಗಿ ನಿಂದಿರ್ದ ದೇವತೆಯಾ ॥
ಯೋಗಿಗಳೆರ್ದೆಗೊಳಪಂತಿನಿಯನೊಳನು।ರಾಗವೆರಸಿ ನಿಟ್ಟಿಪಳು ॥

ಕಾಣದೆ ಪಲವಗಲಿಂದೆ ಕಣ್ಮರೆಯಾದ।ಮಾಣಿಕ ಮೈದೋರಿದಂತೆ ॥
ಪ್ರಾಣವಲ್ಲಭನ ಪಾದಾರವಿಂದುಗಳ।ಕಾಣುತೆ ಕವಿದು ನಿಟ್ಟಿಪಳು ॥೪೧

ಪುಳಕದ ನೆವದಿಂದೆ ಪೊಣ್ಮುವ ಹರ್ಷದ।ಬೆಳೆಗೈಗೆ ನೀರೆರೆವಂತೆ ॥
ತುಳುಕುವ ಸೊಗದಾಲಿನೀರ್ದೊರೆಯುನು ತ।ಡಿಳುಪುತವನ ನಿಟ್ಟಿ [ಸಳು ॥೪೪

ಬಳಿಕ ಮನವ ಬಲಿವಿಡಿದಿನಿಯನ ಪಾದ।ನಳಿನಂಗಳಿಗೆ ನತಿಗೈದು ॥
ಸುಳಿಲನುಗುವ ಹರ್ಷಾಶ್ರುವಿಂದುಂಗುಟ।ಗಳನು ತೊಳೆದು ಪೂಜಿಸಳು॥
ಕೆಲದೊಳಿರ್ದಳು ಗೆಲ್ಲಗೊಂಬಳು ನೇಹವ।ಬಲಿವಳು ಬಣ್ಣವೇರುವಳು॥
ಒಲಿದು ನಿಟ್ಟಿಸಳೊಡನೊಡಲುಮರೆತು ನಲಿ।ನಲಿವಳು ನಲವೇರುವಳು॥
ಪೊರಮಟ್ಟು ಪೋದಂದುಮೊದಲಿಂದುವರೆಗೆ ತ।ನ್ನೆರೆಯನಿರ್ದಿರವೆ [ಲ್ಲವನು ॥
ಎರಕವೆರಸಿ ಕೇಳುವಳೆಡೆಯೆಡೆಯೊಳು।ಮರುಗುತೆ ಮನಗೊಳ [ಸುವಳು ॥೪೭

ಎರವಿನಿತಿಲ್ಲದೆಂದಿನ ನೇಹದೊಳೊಡ।ವರಿಸುವಳೆದೆಗರಗುವಳು॥
ಪರಿಪರಿಯೊಳಗವನು ಪಣ್ಣಿತಣಿವಳು।ಪರಮಾನಂದವಡುವಳು ॥೪೮
ಜಾನಿಸುತಿನಿಯನ ಚರಿತವ ವಿರಹದೊ।ಳೀನೇಮವ ನೆಲೆಗೊಂಡ ॥
ಮಾನಿನಿಗಿಹಪರದೊಳು ಮನದೊಲವರಿ।ತಾನಂದವೀವನಚ್ಯುತನು।೪೯

ಚೆನ್ನಿಗಚಿಕದೇವರಾಯನ ಸಂಚಿಯ ।
ಹೊನ್ನಮ್ಮನುಸಿರ್ದ ಕಬ್ಬದೊಳು॥
ಮನ್ನಣೆವಡೆದೊಪ್ಪಿದುದೇಳನೆಯ ಸಂಧಿ ।
ಸನ್ನುತಗುಣಸಂಬಂಧಿ ॥೫೦



## — ಎಂಟನೆಯ ಸಂಧಿ —

ಆವನಿಚ್ಛೆಯೊಳವತರಿಸಿದುದಾದಿಯೊ|ಳಾವನಿಂದೊಳ್ಪವಡೆದುದು ॥
ಆವನೊಳಡಗುವುದಖಿಳಚರಾಚರ|ವಾವಿಷ್ಣುಗಾನೆರಗುವೆನು ॥೧

ಶ್ರೀವಿಷ್ಣುವಲ್ಲಭೆಯೆನಿಸಿ ಸಕಲವೇ|ದಾವಳಿಯೊಳು ಜಸವಡೆದ ॥
ಪಾವನಚರಿತೆಯ ಪದ್ಮಸದ್ಮೆಯ ಲ|ಕ್ಷ್ಮೀವನಿತೆಯ ವಂದಿಪೆನು ॥೨
ಲೋಕಶಾಸ್ತ್ರವನಾಲೋಚಿಸಿ ತಿಳದದ|ರೈಕಮತ್ಯವನಳವಡಿಸಿ॥
ಏಕಪತ್ನಿಯರೆಸಗುವ ದಿನಚರ್ಯೆಯ|ಜೋಕೆ ತಪ್ಪದೆ ಸೊಲ್ಲಿಸುವೆನು॥
ಅರುಣೋದಯದ ಸಮಯದೊಳೆದ್ದು ಶ್ರೀಹರಿ|ಗುರುಚರಣಕೆ ಕೂ
[ರ್ತೆರಗಿ॥
ಪರಮಭಕ್ತಿಯೊಳೊಲಿದಿನಿಯನೆಚ್ಚರುವನ್ನ|ಮರುಕವೆರದು ಕಾದಿ
[ಹುದು ॥೪

ಸಡಿಲಿದ ಮುಡಿಯ ಸೈಪಿಡುತೊಂದರೊಳೊಂದು|ತೊಡಕಿದ ರನ್ನಸರ
[ಗಳ ॥
ಬಿಡಿಸುತೆಚ್ಚರುವನ್ನೆವರಮಿನಿಯನ ಕೆಲ|ಗಡೆಯೊಳೊಲಿದು ಕಾದಿಹು
[ದು ॥೫

ಎದ್ದು ನಿಟ್ಟಸುವಿನಿಯನ ನೋಟಕೆ ತನ್ನ|ಮುದ್ದುವೊಗವ ಮುಂ
[ಗೊಳಿಸಿ॥
ನಿದ್ದೆಯೊಳೆಸಗಿದ ನಿಖಿಲಾಪಚಾರವ|ತಿದ್ದುವುದಿನಿವಾತಿನೊಳು॥೬

ಅಡಿಗಳಗೆರಗಿಯಾಣತಿಗೊಂಡು ಪ್ರೊಡಮ|ಟ್ಟೊಡನೂಳಗದ ಪೆಣ್ಣು
[ಗಳಗೆ ॥
ಬಿಡುಗೆಲಸಂಗಳ ಬೆಸಸಿಯುಪ್ಪಂತೆ ತಾ|ನೊಡರಿಪುದೊಳುಗಜ್ಜವನು॥
ಕರುತುರುಗಳ ಕಾಪಿಡುವ ಕರೆವ ಪಾ|ಲ್ಗರೆವ ಕಾಸುವ ಕೌಶಲವ ॥
ಅರಿಯದ ಸೊಸೆಪೆಣ್ಮಕ್ಕಳಗಾಬಗೆ|ಯರಿವಂತನುಗೊಳಿಸುವುದು ॥೮

ದೇವಪೂಜೆಯ ದೇವರಿಗೆರಗುವುದತ್ತ।ಮಾಮಂದಿರಡಿಗೆ ಮಣಿವುದು॥
ಭಾವಂದಿರಡಿಗೆ ವಂದನೆಗೆಯ್ಯುವುದು ತನ್ನ।ಭಾವಶುದ್ಧಿಯ ಬಳೆಯಿಪುದು॥
ಮನವೊಲಿದುಡಿಸಿ ತೊಡಿಸಿ ತಿಲಕಂಗಳ।ನನುಗೈದಾದರವೆರಸಿ ॥
ಮನೆಯೊಳಿರುವ ಮಕ್ಕಳನೆಲ್ಲರನೊ।ಯ್ದು ನಿಬರಡಿಗೆಯೆರಗಿಪುದು॥೧೦
ಕಳವುಕಪಟಗಳ ಕಲಿಯದಂದದಿ ಮ।ಕ್ಕಳನಡಿಗಡಿಗಳುಕಿಪುದು ॥
ಎಳಮೆಯ್ಯೊಳೆದೆಗೊಂಡ ಸುಗುಣದುರ್ಗುಣಗಳ।ಕಳೆವುದರಿದು ಕಡೆ [ಕಡೆಗೆ ॥೧೧
ಆರೈದು ತನ್ನಿನಿಯನ ಸಿರಿ ಬಡತನ।ವೀರೀತಿಯೆಂದೆದೆಗೊಳಿಸಿ॥
ಬಾರದ ವಸ್ತುವ ಬಯಸಿ ಬಾಧಿಸದೆ ಕೈ।ಸಾರಿದುದಕೆ ಸಮ್ಮತಿಪುದು॥
ಹಸಗೆಡದಂತೆ ಹಕ್ಕಿಗಳು ಕುಟುಕದಂತೆ।ಪಸುಗಳು ಬಾಯಿಡದಂತೆ॥
ಕಸವುಗದಂತೆ ಕಾಪಿಡುವುದು ಧಾನ್ಯವ।ಜಸವಡೆವುದು ಜಾಣ್ಮೆಯೊಳು॥
ಸಾವಧಾನದೊಳು ಸಂಪಾದಿಸಿ ಮನೆಯೊಳು।ತೀವಿದ ದಿವ್ಯವಸ್ತುಗಳ॥
ದೇವರಾರೋಗಣೆಗೆಂದೆರೆಯುವ ಭಕ್ತಿ।ಭಾವದಿ ಪರಿಶೋಧಿಪುದು ॥೧೪
ಪಳದಾಗದಮುನ್ನ ಬಣ್ಣಗೆಡದ ಮುನ್ನ।ಮೊಳೆದೋರಿಮುಗ್ಗದಮುನ್ನ॥
ಕಳೆಯಳಿಯದ ಮುನ್ನ ಕಂದಿಕುಂದದ ಮುನ್ನ।ಬಳಸುವುದಖಿಳವಸ್ತು [ವನು ॥೧೫
ಮೀಸಲಳಿಯದಂತೆ ಮಿಡಿವರೆವುದರ್ವ।ಬೀಸುವರನು ಬೆಸಸುವುದು॥
ಈಸುವಸ್ತುವನಿಂತನುಗೊಳಿಸುವ ಬಗೆ।ಲೇಸೆಂಬವೊಲೆಸಗುವುದು॥
ಕೆಲಗುಂದುಬೇರುಗೆಣಸುದಂಟುಕುಡಿಕಾ।ಯೆಲೆಮಿಡಿಗಾಯಿಗಳೆಂಬ॥
ಪಲವಗೆಶಾಕದೊಳುಚಿತಾನುಚಿತವ।ನೆಲೆಯರಿವುದು ನೇಮದೊಳು॥೧೭
ಕೊಳೆತ ಕಂದಿದಯಿಲಿತಿಂದುಳಿದ ಮೀಸ।ಲಳವಲ್ಲದವರು ತಂದಿತ್ತ॥
ಪುಳಿತ ಪೊಲ್ಲದ ನೆಲವೊಳು ಪುಟ್ಟದ ಶಾಕಂ।ಗಳನು ಕಳೆದುಬಿಸುಡು [ವುದು ॥೧೮

ಆಚಾರದಿಂ ಧರ್ಮವನುಪಮವೇಳಗೆ|ಯಾಚಾರದಿಂದಾಯುಷ್ಯ ||
ಆಚಾರದಿಂದಿಹಪರವದರಿಂದೀಸ|ದಾಚಾರವತಿಯೆನಿಸುವುದು ||೧೯

ಆದಿಯೆನಿಪ್ಪುದಾಚಾರಂಗಳಿಗೆ ಮೀಹ|ವಾದ ಬಗೆಯೊಳದನರಿತು|
ಆದರವೆರಸಿ ಮೀವುದು ಮೊದಲೊಳುಮಿಕ್ಕ|ವೇದವಿಧಿಯನೆಸಗು
[ವುದು ||೨೦

ಇಳಿದು ನೀರೊಳು ಮೀವುದಿದಕಾರದವರು ಮೈ|ದೊಳೆವುದು ಮುಂಡೆ
[ಯನುಳಿದು ||
ಚಳಿಯ ಸೈರಿಸಲಾರದ ಸತಿಯರು ಬಿಸಿ|ಯೊಳು ಮೀವುದು ಮೈದೊ
[ಳೆವುದು||೨೧

ಬಳೆದ ಬೇನೆಯ ಬಡಮೆಯ್ಯ ಭಾವೆಯರೆದ್ದು|ತೊಳೆದು ಕೈಕಾಲು
[ಮೊಗಗಳನು ||
ಉಳಿದಂಗವನು ನನೆದುಡೆಯೊಳು ತೊಡೆವುದು|ಕಳೆವುದು ಪಾಪಕರ್ಮ
[ವನು ||೨೨

ನೀರೊಳು ಮೆಯ್ಯ ನೇಮದೊಳು ಕರಣಗಳ|ಭೂರಿಸತ್ವದೊಳು ಬು
[ದ್ಧಿಯನು ||
ನಾರಾಯಣನಾಳುತನದೊಳಾತ್ಮನ ತೊಳೆ|ದೋರಂತೊಳ್ಪವಡೆವುದು||

ಸಲೆ ಚೆನ್ನಬೆಳ್ಳಿಹಿತ್ತಾಳೆಕಂಚುತಾಮ್ರದ|ಪಲಬಗೆ ಪಾತ್ರಂಗಳನು ||
ಕಿಲುಬಿನಕರೆ ತೋರದಂತಾದರದಿಂ|ದಲಸದೆ ತೊಳೆವುದಂದಂದು ||೨೪

ಅಡಿಗೆವನೆಗೆ ದೇವತಾರ್ಚನೆಯೆಡೆಗೆ ತಾ|ವಡಿದೊಳೆವುದಕೆಂದುಬೇರೆ ||
ಮಡಗಿಸುವುದು ಮರ್ಯಾದೆಯರಿತು ನೀರ|ಕೊಡಗಳ ಕುಲಪಾಲಕಿಯರು||

ರಚನೆಯ ಬಗೆ ರೈಯ್ಯವಾಗೆಯುಪಸ್ಕರ|ವುಚಿತವೆನಿಸಿಯೊಳ್ಪ
[ವಡೆಯೆ||
ಶುಚಿ ರುಚಿಯಪ್ಪಂತೆ ಸುವಿಧಾನದೊಳ್ಮೈದೆ|ಪಚನಗೈವುದು ಭಾವೆ
[ಯರು ||೨೬

ಬೆಂದು ಬೇಯದೆ ಗಬ್ಬದೊಳು ಪಸಿಯಾದುದ।ಬೆಂದುರೆ ತಳಪ್ರೊತ್ತಿ
[ದುದನು।
ಅಂದವಳಿದುದನಚ್ಯುತನಾರೋಗಣೆ।ಗೆಂದು ಮುಂದಿಡದೆ ಕಳೆವುದು।೧೭
ಮೈದೊಳೆಯುವ ಮಡಿಯುಡದ ಮೈಲಿಗೆಯೆಂಜ।ಲಾದ ನಾರಿಯರನು
[ಗೈದು।
ಈದೇವರಾದೇವರಿಗೆಂದದನು ನಿ।ವೇದಿಸಲಾಗದಚ್ಯುತಗೆ॥೧೮
ದೇವರಿಗೆರಗಿ ದೇವರ ಮನೆವ್ರೊಕ್ಕಲ್ಲಿ।ತೀವಿರುವುಪಕರಣಗಳ॥
ಸಾವಧಾನದೆಸಜ್ಜುಗೈವುದು ಜನ್ಮವ।ಪಾವನವೆನಿಸಿ ಬಾಳುವುದು॥೧೯
ಸಾರಿಸಿ ರಂಗವಲ್ಲಿಯು ಸರಗೊಳಿಸಿ ದೀ।ವಾರೋಪಣವನಾಚರಿಸಿ॥
ಹಾರುತೆ ಮನದನ್ನನ ಬರವನೆ ಮನ।ವಾರೆ ಕಾದಿಹುದು ಕಾಂತೆಯರು॥
ಒಡನೆ ತನ್ನಿಷ್ಟದೇವತೆಗಾರೋಗಣೆ।ವಡಿಸಿ ತಂದಮೃತಾನ್ನವನು॥
ತಡೆಯದಿನಿಯನನುಮತಿವಡೆದದನುಣ।ಬಡಿಸುವುದು ಪಚರಿಸುವುದು॥
ಅತಿಥಿಗಳಭ್ಯಾಗತರೊಡನರ್ಥವರ।ಯತಿಯಾಚಕರೆಲ್ಲರನು॥
ಪತಿಕರಿಸುವುದು ಬಳಿಕ ಸಂತಸದೊಳು।ಸತಿಯರುಸವಿವುದನ್ನವನು॥
ತಿಳಿವಂತೆ ಪೇಳುವ ದೇಶಿಕೋತ್ತಮನಂಘ್ರಿ।ನಳಿನಂಗಳಿಗೆ ನತಿಗೈದು॥
ಬಳಿಕ ಭಾರತಭಾಗವತರಾಮಾಯಣ।ದೊಳುಗತೆಗಳ ಕೇಳುವುದು॥೨೩
ತಿಳಿದದರೊಳು ತತ್ವದಿರವ ಮಾಧವನಂಘ್ರಿ।ಯೊಳುಭಕ್ತಿಭಾವವ ಬಲಿಸಿ॥
ಕಳೆವುದು ಸಕಲಕರಣಕಲ್ಮಷಗಳ।ತೊಳೆವುದು ಮನದ ದೂಳುಗಳ॥೨೪
ಏರುಜೌವನದ ನೀರೆಯರಿನಿತನಿತಕ್ಕೆ।ಮೋರೆಗಾಣಿಸಿ ಮುಂಬರಿಯದೆ॥
ಮೀರಬಾರದ ಕಜ್ಜದೊಳು ಮೇರೆಯರಿತು ಮೈ।ದೋರಿ ನಡೆವು
[ದುಚಿತದೊಳು॥೨೫
ಸಜ್ಜುವಡೆಯೆ ಸಾವ್ಯತೆ ಸರ್ವಾಂಗದೊ।ಳುಜ್ಜುಗಗೊಳೆಯೊಳುನಡೆತೆ॥

ಲಜ್ಜೆ ಬಿಂಬಿಸೆ ಲಾವಣ್ಯದೊಳೊಯ್ಯನೆ।ಪಜ್ಜೆಯಿಡುವುದು ಭಾವೆ
[ಯರು ॥೩೬

ನೆಲನ ನಿಟ್ಟಿಸೆ ದಿಟ್ಟನೇಮದೊಳರೆ ಮನ।ತಲೆ ನಸುಮಣಿದಂದವಡೆಯೆ॥
ಒಲೆಯದೆ ಮೆಯ್ಯೊಪ್ಪದೊಳರೆವೊಯ್ಯನೆ।ಕುಲವಧು ಪಜ್ಜೆಗೊಳು
[ವುದು ॥೩೭

ತನ್ನೊಡಲಿಗೆ ತನ್ನ ಮನವ ಕಾಪಿಡುವುದು।ತನ್ನ ಮನಕೆ ತನ್ನಮತಿಯು॥
ತನ್ನ ಮತಿಗೆ ತನ್ನ ಸಾತ್ವಿಕಧೈರ್ಯವ।ನುನ್ನತಿವಡೆದೊಪ್ಪುವುದು॥೩೮

ತನ್ನ ಮನೆಯ ಬಡತನಗಳ ಧನಗಳ।ತನ್ನಿನಿಯನ ತಪ್ಪುಗಳ ॥
ತನ್ನಮರವೆವೋಸಗಳನವರಿವರೊಳು।ಬಿನ್ನವಿಸವೆಮರಸುವುದು॥೩೯

ಪಲವೀಧಿಯೊಳು ಪರಿಯದೆ ತಾಯ್ಮನೆಗಳಲ್ಲಿ।ಪಲವಗಲಿದ್ದು ನೆಲಸದೆ॥
ಪಲಬಗೆಯೊಳು ಪತಿಪದವನಗಲಿದೊಂದು।ಕಲೆಯು ಕಲ್ಪದವೋಲೆ
[ನಿಪುದು ॥೪೦

ಪೆರರ ಮರ್ಮವ ಪೆರಲಾಲೋಚನೆಗಳ।ಪೆರರೇಕಾಂತದೆಸಕವ ॥
ಪೆರತೊರ್ವರಿಗೆ ಪೇಳುವ ಬೆಸನವ ಬಿಟ್ಟು।ನರೆನೇಮದೊಳು ನೆಲಸು
[ವುದು ॥೪೧

ನೆರಮನೆ ಮನೆವಾರ್ತೆಯನಿಂತಿಂತೆಂದು।ಪರಿಹಾಸಗೈದು ಪಳಯದೆ॥
ಪರರೊಳು ಪರಿವಾದವಬಣ್ಣಿಸುವರೊಡ।ವೆರಸದೆ ಬೇರೆನಿಸುವುದು॥೪೨

ಪರಿದೂರಬೀದಿಬೀದಿಯ ಪಲವನೆಯೊಳು।ತಿರುಗುವದಿಟ್ಟವೆಣ್ಗಳನು ॥
ಕರೆದು ಮನ್ನಿಸಬೇಕಾಂತವನಾಡದೆ।ಪರಿಹರಿಪುದು ಪದುಳದೊಳು॥೪೩

ಬಂಡಬೂತಾಟದ ಜನ್ನಣೆಯನು ಕಿವಿ।ಗೊಂಡು ಕೇಳದೆ ಕುರುಪಿಡದೆ ॥
ಚಂಡಿ ಚಪಲೆ ಚಾಡಿಕಾತಿಯೆನಿಸದೆನ।ಲ್ಪೆಂಡಿರಿರ್ಪುದು ನಲ್ಮೆಯೊಳು।
ಕೆಟ್ಟರಳದರೆಂಬಕೀರ್ತಿಗಂಜದ ಸಳ।ಬಿಟ್ಟ ಕೆಳದಿವೆಣ್ಗಳೊಳು ।

ನೆಟ್ಟನೆ ಬಳೆದಿರ್ದ ನೇಹವ ನೆನೆಯದೆ|ಪೊಟ್ಟಕಳೆದು ಪೊರಡಿಪುದು॥
ತೊಂಡುವೆಣ್ಗಳ ನೇಹದೊಡಕಿಗೆ ಸಿಲುಕದೆ|ಲಂಡೆವೆಣ್ಗಳ ಲಾಲಿಸದೆ ॥
ಪುಂಡವೆಣ್ಗಳೊಳು ಪೊರ್ದುಗೆವಡೆಯದೆ|ನಲ್ವೆಂಡಿರೊಡನೆ ಬೆರಸುವು
[ದು ॥೪೭

ಕಂಡ ಕಡೆಗೆ ನಡೆನಡೆದಳುಕದೆ ಕಾಲು|ಗಂಡ ಕರಾಳವೆಣ್ಗಳ॥
ಅಂಡಲೆದವರೊಳು ಬಳೆಬೊಳು ನೇಹವ|ಚೆಂಡುಗಳೆದು ಬಿಸುಡುವುದು॥
ಮರುಳಾಗಿ ಮತ್ತೆ ಮಬ್ಬಿನೊಳೆದ್ದುದಿಲ್ಲಂ|ದೊರೆದಿನಿಯನನೇಳಿಸದೆ॥
ಇರುಳಗೆಂದಿಳವೊತ್ತಿನೊಳೆಲ್ಲವಸ್ತುವ|ತರಿಸುವುದನುವಡಿಸುವುದು॥
ನೆನೆದೊಂದೊಂದನೆಡೆಯೊಳದಾರ್ಣ್ಮನ|ಮನವ ನೋಯಿಸಿ ಮರುಗಿಸದೆ॥
ಮನೆಗೆಲಸವನೆಲ್ಲವನಾರೈದು ಮ|ತ್ತಿನಿಯನ ಶಯ್ಯೆಗೇರುವುದು ॥೪೯
ಪಗಲಿರುಳೀಪರಿಯೊಳು ನಡೆದಿನಿಯನ|ಬಗೆಯ ತಿಳಿದು ಬಂದಿಗೊಂಬ ॥
ಸುಗುಣೆಯರಿಹಪರದೊಳು ಸೂರೆಗೊಂಬರು|ಸೊಗದ ಸುಗ್ಗಿಯ
[ಸುಲಭದೊಳು ॥೫೦

ಚೆನ್ನಗಚಿಕದೇವರಾಯನ ಸಂಚಿಯ ।
ಹೊನ್ನಮ್ಮನುಸಿರ್ದ ಕಬ್ಬದೊಳು ॥
ಉನ್ನತಿವಡೆದೊಪ್ಪಿದುದೆಂಟನೆಯ ಸಂಧಿ ।
ಸನ್ನುತಗುಣಸಂಬಂಧಿ ॥೫೧

—ಒಂಬತ್ತನೆಯ ಸಂಧಿ—

ಆವನಾಣತಿಯೊಳಗ ಕರ್ಮಯೋಗ ಮ|ತ್ತಾವನ ನೆನಸು ವಿಜ್ಞಾನ॥
ಆವನೊಳೆರಕ ಬಕುತಿಯಾಪರವಾಸು|ದೇವನಿಗಾನೆರಗುವೆನು ॥ ೧

ಜ್ಞಾನವೈರಾಗ್ಯಶ್ರೀಹರಿಭಕ್ತಿಸತ್ಕರ್ಮ|ಹೀನರನೆಮ್ಮನಾರೈದು ॥
ಆನಾರಾಯಣನಡಿಗೆರಗಿಪ ಸಿರಿ|ಗಾನತಿಗೈದು ಬಾಳುವೆನು ॥ ೨

ಪತಿಪಾದಭಕ್ತಿಯುರೆನಿಪ ಸತಿಯರು ತಾ|ವತಿಶಯಗತಿಗೆಳಸಿದೊಡೆ।
ಇತರಚಿಂತೆಯನುಳಿದೇಕಚಿತ್ತದೊಳು ಶ್ರೀ|ಪತಿಪಾದವನೆ ಭಜಿಸು [ವುದು ॥ ೩

ಆವ ದೇವರನಾವರು ಭಜಿಸುವರಾ|ದೇವರನವರು ಸೇರುವರು ।
ಆವ ಭೋಗದೊಳಾದೇವರಿರ್ಪರು ತಾ|ವಾವಿಧದೊಳು ಬಾಳುವರು ॥

ಶ್ರೀವರನಡಿಯ ಸೇರಿದವರುಳಿದು ಮಿಕ್ಕ|ದೇವಲೋಕವನೇರಿದವರು ।
ದೇವರೊಡನೆ ತಾವುಮಳಿವರೆಂಬುದನು ಗೀ|ತಾವಚನದೊಳು ತಿಳಿ [ವುದು ॥ ೫

ಅದೆಂತೆನೆ:—

ಶ್ಲೋ ॥ ಆಬ್ರಹ್ಮಭವನಾಲ್ಲೋಕಾಃ|ಪುನರಾವರ್ತಿನೋಽರ್ಜುನ ॥
ಮಾಮುಪೇತ್ಯ ತು ಕೌನ್ತೇಯ|ಪುನರ್ಜನ್ಮ ನ ವಿದ್ಯತೇ ॥

ಪರಹಿಂಸೆಯೆಸಗದೆ ಪರಧನಕಳುಪದೆ|ಪರಪುರುಷಂಗಾಸೆವಡದೆ ।
ಸಿರಿಯರಸನ ಪಾದಸೇವೆಗೈದವರಾ|ಪರಮಪದವನು ಸೇರುವರು ॥

ಚಾಡಿವೇಳದೆ ಚಂಡಿತನವೆಸಗದೆ ಚುನ್ನ|ವಾಡದೆ ಜರೆದು ನುಡಿಯದೆ।
ಕೇಡೆಣಿಸದೆ ಕೆಲರಿಗೆ ಹರಿಪದಸೇವೆ|ಗೀಡಾಗಿ ಗತಿಯ ಪಡೆವುದು ॥

ಸೇರುವುದಿಹಪರಗತಿ ನಾರಾಯಣ|ನಾರಾಧನೆಯೊಳೆಲ್ಲರಿಗೆ ॥
ಆರೈಯೆ ಸಕಲಸತ್ಕರ್ಮಂಗಳಚ್ಯುತ|ನಾರಾಧನೆಯೆನಿಸುವುದು ॥ ೮

ಇದನಾಚರಿಸುವುದಿದನರಿದಿರ್ಪುದೆಂ|ಬುದನಾರೈದು ಶಾಸ್ತ್ರದೊಳು॥

ಎದೆಗೊಳುವಂತೆ ಪೇಳುವ ಪಿರಿಯರ ದಿವ್ಯ।ಪದಸೇವೆಗೈದು ಬಾಳು
[ವುದು ॥೯

ಇದನಾಚರಿಸಿದೊಡೀಫಲವಪ್ಪುದೆಂ।ಬುದು ಕಾಮ್ಯಕರ್ಮವೆನಿಪುದು॥
ಮುದದಿಂದೆ ಮುಕ್ತಿಯನೆಳಸುವ ಕೋವಿದ।ರಿದರ ಹಂಬಲನು ಬಿಟ್ಟ
[ಹುದು ॥೧೦

ಆವುದನೆಸಗದಿರ್ದೊಡೆ ಪಾಪವಾಕರ್ಮ।ಭಾವಿಸೆ ನಿತ್ಯವೆನಿಪುದು ॥
ಆವ ವಿಧದೊಳಾದೊಡವಾಕರ್ಮವ।ನಾವಾಗವಾಚರಿಸುವುದು ॥೧೧

ಈನಿಮಿತ್ತದೊಳದನೆಸಗುವುದೆಂಬುದು।ತಾನೈಸೆ ನೈಮಿತ್ತಕರ್ಮ॥
ಆನಿಮಿತ್ತದೊಳಾಚರಿಸುವುದೆಲ್ಲಮು।ನಾನೈಮಿತ್ತಕರ್ಮವಮ ॥೧೨

ಇಂತು ಮುಕ್ತಿಯನೆಳಸುವರು ಕಾಮ್ಯವನುಳಿ।ದಂತರಂಗದ ಶುದ್ಧಿ
[ಯೊಳು ॥

ಚಿಂತೆಗೊಳದೆ ನಿತ್ಯನೈಮಿತ್ತಕರ್ಮವ।ಸಂತಸದೊಡನೆಸಗುವುದು ॥

ಇದು ಜಗದೀಶ್ವರನಾಜ್ಞೆಯೆನಗೆ ತಾ।ನಿದನಾಚರಿಸಬೇಕೆಂದು ॥
ಮುದದೊಡನೊಡರಿಪರಿಗೆ ಮೋಸವಿಲ್ಲೆಂ।ಬುದನರಿವುದು ಗೀತೆಯೊಳು

ಶ್ಲೋ॥ ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ॥
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥

ಈಯೆಸಕದೊಳಿರೆ ಶೂದ್ರರಾದೊಡಮೂ।ಸ್ತ್ರೀಯರಾದೊಡಮೇನವರು
ಆಯೋಗಿಗಳಡರುವ ಪರಗತಿಗೆ ತಾ।ವಾಯಾಸವಿಲ್ಲದೇರುವರು ॥೧೫

ಇಂತಪ್ಪುದಕ್ಕಂ ಗೀತಾವಚನಂ :—

ಶ್ಲೋ॥ ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಂ ॥

ಶುಚಿಯಾಗಿರೆ ದೇವತೆಗಳು ಸಲಹುವರು।ಶುಚಿಯನು ಪಿತೃಗಳೊಪ್ಪು
[ವುವರು॥
ಶುಚಿಗಂಜುವುವು ಪ್ರೇತಭೂತಂಗಳದರಿಂದೆ।ಶುಚಿಯುಪ್ಪುದೆಲ್ಲವೇಳೆ
[ಯೊಳು ॥೧೬

ಹಿರಿಯರ ದರ್ಶನದಿಂದೆ ಪೋಪುದು ಭೀತಿ।ಪರಿದೋಡುವುದು ಪಾಪ
[ಗಳು ॥
ಹರುಷದೊಳದರಿಂದೆ ಹರಿಶರಣರ ದಿವ್ಯ।ಚರಣದರ್ಶನವೆಸಗುವುದು ॥
ಪರಮವಿಶ್ವಾಸವೆರಸಿ ವಿಷ್ಣುವೈಷ್ಣವ।ಚರಣತೀರ್ಥವ ಸೇವಿಸಿದೊಡೆ॥
ಪರಿದೋಡುವುವು ಸಕಲಪಾಪಂಗಳು।ಪರಮಪದವಿ ಬಸವಹುದು ॥೧೯
ತಿಳಿಯೆ ಮಾನುಷಲೋಕದಿಂದಾಜವನೂರ।ಬಳಗೈದುವ ಪೆರ್ಬಟ್ಟೆ ॥
ಉಳಿಯದೆಂಬತ್ತೆಂಟು ಸಾಸಿರಗಾವುದ।ದಳತೆಯ ನೀಟವೆನಿಪುದು ॥
ಉರುಕೇರಿಗಳಿಲ್ಲೀರ್ವರು ನೆರವಿಲ್ಲ।ನೀರು ನೆಳಲು ತಾನಿಲ್ಲ ॥
ಸೇರಿ ನಿಲುವದೊಂದು ತಾವಿಲ್ಲವೆನಲಾ।ದಾರಿಯನೇವೇಳುವುದು ॥೨೦
ಪುರಿದಂತೆ ಬೇಪುರಿ ಮಳಲ್ರಾಶಿಗಳಿಂದೆ।ಹರಹಿದ ಮುಳ್ಳುಗಳಿಂದೆ ॥
ಪರಿಪರಿಗೋರುಕಲ್ಲುಗಳಿಂದೆ ಪಜ್ಜೆಯು।ನುರಿಗೊಳಸುವುದೊಡನೊ
[ಡನೆ ॥೨೧
ಆದಬ್ಯೆ ದಾನವೀಯದ ಪಾಪಿಗಳೀ।ದಾರಿವಿಡಿದು ನಡೆತಹರು ॥
ಭೂರಿದಾನಗಳಿತ್ತ ಪುಣ್ಯಪುರುಷರೀ।ದಾರಿಯೊಳಡರಡಿಗಳನು ॥೨೨
ಪೊಪವಿಯ ಪಾಸಿಕೆಗಳನುಂಬೂಟವ।ಕುಡಿನೀರ ತುರುಕುದುರೆಗಳ ॥
ಉಡೆಗಳನೊಳುವೆಂಗಳನೊಲಿದೀವುದು।ಪಡೆವುದು ಪರಗತಿಗಳನು ॥
ಅಲಸದೆ ಮುಕ್ತಿಯಸಾಸೆ ವಡುವರನ್ಯ।ಫಲವ ಬಯಸಿ ಬಣ್ಣಗೆಡದೆ ॥
ನೆಲೆಗೊಂಡ ನಿಜಧರ್ಮದ ನೇವವಳಿಯದೆ।ಪಲವುದಾನವ ಪಣ್ಣುವುದು॥
ತಾಳಗೆಯೊಣಗದ ಮುನ್ನಮೆ ನಾಲಗೆ।ಬೀಳದ ಮುನ್ನಮೆ ಬೇಗ ॥
ಪೇಳುವುದಂಬುಜಾಕ್ಷನ ಪೆಸರುಗಳನು।ಪೇಳಲರಿಯದೊಡಾಲಿಪುದು ॥
ಶ್ರೀವಿಷ್ಣುಭಕ್ತಿಯಿಂದತಿವೇಗದೊಳು ಮಃ।ಖಾವಳಿಯಳಿವುದೆಂಬುದಕೆ॥
ಭಾವಿಸಿ ಭಾಗವತದೊಳೊಂದು ಕಥೆಯು।ಣ್ಟಾವಿಧವನು ಬಂಣಿಪೆನು ॥

ತಕ್ಷಕನಿಂದ ತನಗೆಯುಳವಪ್ಪುದಿಂ।ನಕ್ಷಯುಗತಿಗೊಂಬೆನೆಂದು ॥
ಆಕ್ಷಣದೊಳು ಶುಕಮುನಿಯಡಿಗೆರಗಿ ಪರೀಕ್ಷಿತನಿಂತು ಕೇಳಿದನು ॥
ಸಾವಡಸಿದ ಸಮಯದೊಳುಸದ್ಗತಿಗಾಗಿ।ಯಾವುದನೊಲಿದಾಲಿಪುದು॥
ಆವುದನೋದುವುದಾವುದನೊಡರಿಪು।ದಾವುದನಿರದೆ ನೆನೆವುದು ॥
ಇಂತು ನುಡಿದ ಪರೀಕ್ಷಿತರಾಯಗೆ ಮಿಗೆ।ಸಂತಸವನು ಸಮನಿಸುತೆ ॥
ತಾಂ ತಿಳಿದಖಿಲಶಾಸ್ತ್ರದ ತತ್ವಮನೋ।ರಂತರುಹಿದನಾಯೋಗಿ ॥೨೯
ಅರಸ ಕೇಳಾಪತ್ತಡಸಿದ ವೇಳೆಗೆ।ಹರಿಕಥೆಗಳನೆ ಕೇಳುವುದು ॥
ಹರಿನಾಮಂಗಳನೊಲಿದೋದುವುದು ಶ್ರೀ।ಹರಿಪದಂಗಳನೆ ನೆನೆವುದು॥
ಹರಿಪಾದಪದ್ಮದ ಸೇವೆಯಿಲ್ಲದೆ ಪಲ।ವರಿಸಮಿದ್ದೊಡೆ ಫಲಮೇನು ॥
ಮುರವೈರಿಯ ನೆನೆದೊಂದು ಮುಹೂರ್ತಕೆ।ಪರಗತಿ ಬಯಸಿದಂತ
[ಹುದು ॥೩೦
ಅಂದು ಖಟ್ವಾಂಗನೆಂಬರಸು ತಾನಳಿವುದ।ಕೊಂದು ಮುಹೂರ್ತದೊಳ
[ರಿತು ॥
ಕುಂದದೆ ಭಜಿಸಿ ಮುಕುಂದನ ಚರಣವ।ಸುಂದನು ಪರಮಪದವಿಗೆ ॥
ಏಳೆಲೆ ಭರತವಂಶಾಗ್ರಣಿ ಬೇಗದೊ।ಳೇಳು ಭಜಿಸು ಮಾಧವನ ॥
ಏಳು ದಿವಸದಾಯುವಿರ್ಪುದು ನಿನಗಿಂ।ನಾಳೋಚನೆಯೇತಕಿದಕೆ ॥
ಈವಿಧದೊಳು ಪೇಳಿದ ಶುಕಮುನಿಗೆ ಪ।ದಾವನತಿಯನಾಚರಿಸಿ ॥
ಭಾವಶುದ್ಧಿಯೊಳು ಭಾಗವತವಕೇಳಿಯುಂ।ದಾವಿಷ್ಣುಪದವನೈದಿದನು॥
ಆರಯ್ಯೆ ವಿಷ್ಣುಪುರಾಣರಾಮಾಯಣ। ಭಾರತಭಾಗವತಗಳ ॥
ಆರು ಪಿರಿಯರಿಂದಾಲಿಪರವರಿಗೆ।ಸೇರುವುದಖಿಳ ಸಿದ್ಧಿಗಳು ॥೩೫
ಇದಕೆ ಸಂಮತಿವಚನಂಗಳು ಪಲವುಂ।ಟದರೊಳೊಂದೆರಡನೋದು
[ವೆನು ॥

ಅವರರ್ಥಂಗಳನೆಲ್ಲರುಮರಿವಂತೆ।ಪದರಚನೆಯೊಳು ಬಣ್ಣಿಪೆನು ॥೩೬

ಶ್ರೀಭಾಗವತೇ ಪ್ರಥಮಸ್ಕಂಧೇ, ಪ್ರಥಮೋಧ್ಯಾಯೇ

ಶ್ಲೋ॥ ಧರ್ಮಃಪ್ರೋಜ್ಝಿತಕೈತವೋತ್ರ ಪರಮೋ ನಿರ್ಮತ್ಸರಾಣಾಂ ಸತಾಂ।
ವೇದ್ಯಂ ವಾಸ್ತವಮತ್ರ ವಸ್ತು ಪರಮಂ ತಾಪತ್ರಯೋನ್ಮೂಲನಂ ॥
ಶ್ರೀಮದ್ಭಾಗವತೇ ಮಹಾಮುನಿಕೃತೇ ಕಿಂ ವಾ ಪರೈರೀಶ್ವರಃ ।
ಸದ್ಯೋ ಹೃದ್ಯವರುಧ್ಯತೇತ್ರ ಕೃತಿಭಿಃ ಶುಶ್ರೂಷುಭಿಸ್ತತ್ ಕ್ಷಣಾತ್॥

ವೇದವ್ಯಾಸನಣುಗನಾಶುಕಮುನಿ।ಯಾದರದಿಂದನುಗೈದ ॥
ವೇದತತ್ತ್ವಾರ್ಥಮೆನಿಪ ಭಾಗವತವ।ನಾದರದಿಂದಾಲಿಪುದು ॥೩೭
ಮದಮತ್ಸರಂಗಳಡಗಿ ಮಹಾತ್ಮರ।ಸದಮಳ ಧರ್ಮವಿದರೊಳು ॥
ಇದು ತಾಪತ್ರಯಹರವಿದನಾಲಿಪ।ರೆದೆಯೊಳು ಹರಿ ನೆಲಸುವನು ॥೩೮

ಶ್ರೀವಿಷ್ಣುಪುರಾಣೇ ಷಷ್ಠೇ ಅಂಶೇ ಚರಮೇ ಅಧ್ಯಾಯೇ

ಶ್ಲೋ॥ ಪುರಾಣಂ ವೈಷ್ಣವಂ ಚೈತತ್ಸರ್ವಕಿಲ್ಬಿಷನಾಶನಂ ।
ವಿಶಿಷ್ಟಂ ಸರ್ವಶಾಸ್ತ್ರೇಭ್ಯಃ ಪುರುಷಾರ್ಥೋಪಪಾದಕಂ ॥
ಯತ್ರಾದೌ ಭಗವಾಂಶ್ಚರಾಚರಗುರುರ್ಮಧ್ಯೇ ತಥಾಂತೇ ಚ ಸಃ ।
ಬ್ರಹ್ಮಜ್ಞಾನಮಯೋಚ್ಯುತೋಖಿಲಜಗನ್ಮಧ್ಯಾಂತಸರ್ಗಪ್ರಭುಃ ॥
ತಚ್ಛೃಣ್ವನ್ಪುರುಷಃ ಪವಿತ್ರಪರಮಂ ಭಕ್ತ್ಯಾಪಠನ್ಧಾರಯನ್ ।
ಪ್ರಾಪ್ನೋತ್ಯಸ್ತಿ ನತತ್ಸಮಸ್ತಿಭುವನೇಷ್ವೇಕಾಂತಸಿದ್ಧಿರ್ಹರಿಃ॥

ಇದನು ಶ್ರೀವಿಷ್ಣುಪುರಾಣವೆಂಬರು ಮ।ತ್ತಿದರಿಂದೆ ಪಾಪ ಪರಿವುದು॥
ಇದು ಸರ್ವಶಾಸ್ತ್ರದೊಳುತ್ತಮವೆನಿಸುವು।ದಿದು ಸರ್ವಫಲವ ಸಾಧಿ
[ಪುದು ॥೩೯
ಆದಿಮಧ್ಯಾಂತರಹಿತನಚ್ಯುತನಿದ।ರಾದಿಮಧ್ಯಾಂತದೊಳಿಹನು ॥
ಈದಿವ್ಯವಿಷ್ಣುಪುರಾಣವ ಕೇಳುವ।ರಾದೇವನಡಿಯ ಸೇರುವರು ॥೪೦

ಶ್ರೀಮದ್ರಾಮಾಯಣೇ ಯುದ್ಧಕಾಂಡೇ ಚರಮಸರ್ಗೇ

ಶ್ಲೋ॥ ರಾಮಾಯಣಮಿದಂ ಕೃತ್ಸ್ನಂ ಶೃಣ್ವತಃ ಪಠತಸ್ಸದಾ ।
ಪ್ರೀಯತೇ ಸತತಂ ರಾಮಸ್ಸಹಿ ವಿಷ್ಣುಸ್ಸನಾತನಃ ॥
ಪಾಪಾನ್ಯಪಿ ಚ ಯಃ ಕೃತ್ವಾ ಅಹನ್ಯಹನಿ ಮಾನವಃ ।
ಪಠತೇ ಕಮಪಿ ಶ್ಲೋಕಂ ಪಾಪಾತ್ಸಪರಿಮುಚ್ಯತೇ ॥

ಈ ರಾಮಾಯಣವೆಲ್ಲವನೆಡೆವಿಡ।ದಾರೈದು ತಿಳದೋದುವರನು ॥
ಶ್ರೀರಾಮಚಂದ್ರನೊಲಿದು ಸಲಹುವನಾದಿ।ನಾರಾಯಣನವನೈಸೆ ॥೪೧

ಒಂದು ಸರ್ಗಮನೊಂದು ಪದ್ಯಮನಲ್ಲದೊ।ಡೊಂದು ಪಾದವನೋದಿ [ದೊಡೆ ॥
ಅಂದಂದಿನೊಳೆಸಗಿದ ಪಾಪಂಗಳಂ।ದಂದಿಗೆ ಪರಿಹರಿಸುವುವು ॥೪೨

ಶ್ರೀಮಹಾಭಾರತೇ ಸ್ವರ್ಗಾರೋಹಣಪರ್ವಣಿ ಚರಮೇಧ್ಯಾಯೇ,

ಶ್ಲೋ॥ ಕಾರ್ಷ್ಣ್ಯಂ ವೇದಮಿದಂ ಸರ್ವಂ ಶೃಣುಯಾದ್ಯಸ್ಸಮಾಹಿತಃ ॥
ಬ್ರಹ್ಮಹತ್ಯಾ ಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥
ಅಹ್ನಾ ಯದೇನಃ ಕುರುತೇ ಇಂದ್ರಿಯೈರ್ಮನಸಾ ಗಿರಾ ।
ಮಹಾಭಾರತಮಾಖ್ಯಾಯ ಸರ್ವಪಾಪೈಃ ಪ್ರಮುಚ್ಯತೇ ॥

ವೇದವ್ಯಾಸನೊಲಿದು ಪೇಳದ ಪ್ರೊಸ।ವೇದವೆನಿಪ ಭಾರತವನು॥
ಓದಿದ ಮಾತ್ರದೊಳಳವುದು ಬ್ರಹ್ಮಹ।ತ್ಯಾದಿಮಹಾಪಾತಕಗಳು ॥
ನಡೆನುಡಿನೆನಹುಗಳಂದಂದಿನೊ।ಳೊಡರಿಸುವುಗ್ರಪಾಪಗಳು ॥
ಅಡಗುವುವಂದಂದಿಗೆ ಭಾರತದೊಂದು।ನುಡಿಯ ನೋಡಿದ ಮಾತ್ರ [ದೊಳು ॥೪೪

ಇಂತು ನವಮ ನಿತ್ಯನೈಮಿತ್ತಕರ್ಮ ಶ್ರೀ।ಕಾಂತನೊಳಗವೆಂದು ತಿಳದು॥
ಸಂತಸದಿಂದಾಚರಿಪ ಸತಿಯರಿಗೆ।ಚಿಂತಿತಫಲ ಸೇರುವುದು ॥ ೪೫

ಗುರುಮುಖದಿಂದೆ ರಹಸ್ಯತ್ರಯಾರ್ಥದ।ತಿರುಳನರಿತು ತೀವ್ರದೊಳು ॥
ಪರಿಹರಿಪುದು ಮಂತ್ರಾಂತರದೇವತಾ।ನ್ತರಸಾಧನಾಂತರಂಗಳನು ॥

ಪಂಚಸಂಸ್ಕಾರಂಗಳನು ಪಡೆದೊಪ್ಪರ್ಥ।ಪಂಚಕತತ್ತ್ವಮನರಿತು ॥
ಪಂಚಕಾಲಿಕಧರ್ಮವನೆಸಗುತ ನಿ।ಶ್ಚಂಚಲಚಿತ್ತದೊಳಹುದು ॥೪೭

ಇದು ಮಂತ್ರನಿದು ದೇವತೆಯಿದು ನಡತೆಯೆಂ।ಬುದನರಿತಂತರಂಗದೊಳು
ಮುದದೊಡನಿರ್ಪ ಮುಮುಕ್ಷುಗಳಿಗೆ ಮುಕ್ತಿ।ಪದವಿ ಕೈಬಸವಾಗಿ
[ಹುದು ॥೪೮

ಪತಿಯೊಲವಕ್ಕೆ ಸತಿಯರೊಳು ಸತಿಯರು।ಪತಿಪಾದಭಕ್ತಿಯರಕ್ಕೆ ॥
ಸತಿಯರ ಮೈಮೆ ಸಕಲಜಗದೊಳು ನಿಲ್ಕೆ।ಸತಿಧರ್ಮ ಶಾಶ್ವತಮಕ್ಕೆ ॥

ಉರ್ವೀಶರು ಧಾರ್ಮಿಕರಕ್ಕೆ ಜಗದೊಳು।ಪಾರ್ವರು ಪದುಳದೊಳಿರ್ಕೆ॥
ಒರ್ವರೊರ್ವರೊಳೊಡವೆರೆಗೆ ದಂಪತಿಗಳು।ಸರ್ವರು ಸೌಖ್ಯದೊಳಿರ್ಕೆ ॥

ಶ್ರೀವೇದಮಾರ್ಗಪ್ರತಿಷ್ಠಾಪನಾಚಾರ್ಯ।ನಾವೈಷ್ಣವ ಧರ್ಮಮೂರ್ತಿ॥
ಆವನುಭಯವೇದಾಂತಾಚಾರ್ಯನೆಂ।ಬೀವಿಧದೇಳ್ಗೆವೆತ್ತಿಹನು ॥೫೦

ಶ್ರೀಶುಕವೇದವ್ಯಾಸವಾಲ್ಮೀಕಿಪ।ರಾಶರರನು ಪಡಿಗೊಂಡು ॥
ಶ್ರೀಶಪದಾಂಬುಜಭಕ್ತಿತತ್ತ್ವಜ್ಞಾನ।ರಾಶಿಯೆನಿಸಿ ರಾಜಿಪನು ॥೫೧

ಈಮಹಿಮೆಯೊಳೆಸೆವಳಸಿಂಗರಾರ್ಯನು।ದ್ದಾಮಕೃಪಾವೈಭವಕೆ॥
ಭೂಮಿಯೆನಿಸಿ ನೆಗಳದ ಮೈಮೆಯಿಂದಾ।ಗಿ ಮಹಾಕೃತಿ ಪೇಳದೆನು ॥

ಧರ್ಮರಹಸ್ಯವನರಿತಿರ್ಪೆನೆಂಬೊಂದು।ಪೆರ್ಮೆಯೊಳುಸಿರ್ದವಳಲ್ಲ ॥
ಧರ್ಮದ ನೆನಹು ಮರೆಯದಂತೆ ಕೃತಿಯಾಗಿ।ನಿರ್ಮಿಸಿ ನೆಲೆಗೊಳಸಿದೆನು॥

ಭಾವಿಸೆ ಬಿಜ್ಜೆಗಲಿತ ಪೆರ್ಮೆಯೆನಗಿಲ್ಲ।ದೇವತೆಗಳ ವರವಿಲ್ಲ ॥
ಆವುಪದೇಶವನಿತ್ತರಾರ್ಯರು ತನ।ಗಾವಿಧದೊಳು ಪೇಳದೆನು ॥

ಓಲೆವಿಡಿದು ನಾವ್ನೋದದರಿಪೆವೆಮ್ಮ।ಶೀಲವನೆಂದು ಕಳೆಯದೆ ॥
ಬಾಲೆ ಬಣ್ಣಿಸಿ ಬಳಲಿದಳೆಂಬ ಮರುಕದಿಂ।ಪಾಲಿಪುದಖಿಳಸತಿಯರು ॥

ಮಳೆಯಕ್ಕೆ ಕಾಲಕಾಲಕೆ ದೇವರೊಲವಿಂದೆ। ಬೆಳೆಗೈಗೆ ಪೆರ್ಚಿಗೆಯಕ್ಕೆ ॥
ಇಳೆಯೊಳು ಪತಿಪುತ್ರಪೌತ್ರಸಂಪದದೊಡ। ನೊಳುವೆಣ್ದಿರೊಪ್ಪದೊ
[ಳಿರ್ಕೆ ॥೫೭

ಶ್ರೀರಂಗಪಟ್ಟಣದೊಳು ಸಿರಿ ನೆಲಸಿರ್ಕೆ। ಭೂರಿವೈಭವ ಪುದಿದಿರ್ಕೆ ॥
ಶ್ರೀರಂಗಧಾಮನ ದಿವ್ಯಯಾತ್ರೋತ್ಸವ। ದಾರಾಧನೆ ಮಿಗಿಲಕ್ಕೆ ॥೫೮

ಕನ್ನಡನಾಡೊಳು ಕಲಿಯುಗ ಪುಗದಿರ್ಕೆ। ಕನ್ನಡಿಗರು ಘನರಕ್ಕೆ ॥
ಉನ್ನತಿವಡೆಗೆಯಗರದೇಗುಲಗಳು। ಸನ್ನುತಿವಡೆಗೆ ಸತ್ರಗಳು ॥೫೯

ಈವಸುಧೆಯ ಧರ್ಮದೊಳು ಪಾಲಿಸುಗೆ ಚಿಕ್ಕ। ದೇವರಾಜೇಂದ್ರಚಂ
[ದ್ರಮನು ॥
ದೇವ ಗೋ ವಿಪ್ರಸಂತತಿ ಸಂತಸದೊಳಿರ್ಕೆ। ಗೋವಿಂದಗಾನಂದವಕ್ಕೆ॥

ಚೆನ್ನಿಗ ಚಿಕದೇವರಾಯನ ಸಂಚಿಯ ।
ಹೊನ್ನಮ್ಮನುಸಿರ್ದ ಕಬ್ಬದೊಳು ॥
ಮನ್ನಣೆವಡೆದೊಪ್ಪಿತೊಂಬತ್ತನೆಯ ಸಂಧಿ ।
ಸನ್ನುತಗುಣಸಂಬಂಧಿ ॥ ೬೦

ಹದಿಬದೆಯ ಧರ್ಮಂ ಸಂಪೂರ್ಣಂ.



